# ನೇಕಾರರ ಅಭಿವೃದ್ಧಿಯಲ್ಲಿ ನೇಕಾರ ಸಹಕಾರಿ ಸಂಘಗಳ ಪಾತ್ರ

(ಬಾಗಲಕೋಟ ಜಿಲ್ಲೆಯ ಬಾದಾಮಿ ಮತ್ತು ಹುನಗುಂದ ತಾಲ್ಲೂಕುಗಳನ್ನು ಅನುಲಕ್ಷಿಸಿ [illegible])

---

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಪ್ರಬಂಧ)

ನೋಂ ಸಂಖ್ಯೆ : ೧೬೦೧೧೨೦೩೦೦೩೫



ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೧೬-೧೭

# ನೇಕಾರರ ಅಭಿವೃದ್ಧಿಯಲ್ಲಿ ನೇಕಾರ ಸಹಕಾರಿ ಸಂಘಗಳ ಪಾತ್ರ

(ಬಾಗಲಕೋಟ ಜಿಲ್ಲೆಯ ಬಾದಾಮಿ ಮತ್ತು ಹುನಗುಂದ ತಾಲ್ಲೂಕಗಳನ್ನು ಅನುಲಕ್ಷಿಸಿ ಅಂತರಶಿಸ್ತಿಯ ನೆಲೆಯಲ್ಲಿ ಒಂದು ಸಮಾಜ ಕಾರ್ಯ ಅಧ್ಯಯನ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುವ ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ)

ನೋಂ ಸಂಖ್ಯೆ: ೧೬೦೧೧೨೦೩೦೦೩೫





ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೭

# ಪರಿವಿಡಿ

| | ಕೋಷ್ಟಕಗಳ ಪರಿವಿಡಿ | |
|---|---|---|
| ಅ.೦ | ಕೋಷ್ಟಕಗಳ ವಿವರ | ಪು.ನಂ |
| ೧ | ೪.೧. ನೇಕಾರ ಸಹಕಾರಿ ಸಂಘಗಳ ಮೂಲ ಸೌಕರ್ಯಗಳು | ೭೨ |
| ೨ | ೪.೨. ನೇಕಾರ ಸಹಕಾರಿ ಸಂಘಗಳ ಶೇರುದಾರ ನೇಕಾರ ಬಾಂಧವರು | ೭೩ |
| ೩ | ೪.೩. ನೇಕಾರ ಸಹಕಾರಿ ಸಂಘಗಳ ತಲಾ ವಾರ್ಷಿಕ ಬಂಡವಾಳ(ಅಂದಾಜು) | ೭೩ |
| ೪ | ೪.೪. ನೇಕಾರ ಸಹಕಾರಿ ಸಂಘಗಳಲ್ಲಿ ಶೇರುದಾರ ನೇಕಾರರ ಲಿಂಗಾನುಪಾತ ಸರಾಸರಿ | ೭೪ |
| ೫ | ೪.೫. ನೇಕಾರಿ ಸಹಕಾರಿ ಸಂಘಗಳಲ್ಲಿ ಶೇರುದಾರರ ದುಡಿಯುವ ಮಾನವ ಸಂಪನ್ಮೂಲ | ೭೫ |
| ೬ | ೪.೬ ನೇಕಾರರ ಸಹಕಾರಿ ಸಂಘಗಳು ಉತ್ಪಾದಿಸುತ್ತಿರುವ ಉತ್ಪಾದನಾ ಮಾದರಿಗಳು | ೭೬ |
| ೭ | ೪.೭ ನೇಕಾರ ಸಹಕಾರಿ ಸಂಘಗಳ ಮೂಲಕ ಎಂ.ಜಿ.ಬಿ.ಬಿ.ವಾಯ್. ಫಲಾನುಭವಿಗಳು | ೭೭ |
| ೮ | ೪.೮. ನೇಕಾರಿ ಸಹಕಾರಿ ಸಂಘಗಳ ಮದ್ಯಸ್ಥಿಕೆಯಿಂದ ನೇಕಾರರಿಗೆ ಸಾಲ | ೭೮ |
| ೯ | ೪.೯. ನೇಕಾರ ಸಹಕಾರಿ ಸಂಘಗಳಲ್ಲಿ ನೇಕಾರರಿಗಿರುವ(ಅಂದಾಜು) ವೇತನಗಳ ಮಾಹಿತಿ | ೭೯ |
| ೧೦ | ೧. ಪ್ರತಿಕ್ರಿಯಿಸಿದವರ ಸಂಖ್ಯೆ ಹಾಗೂ ಅವರ ವಯಸ್ಸು | ೮೬ |
| ೧೧ | ೨. ನೇಕಾರ ಕುಟುಂಬಗಳ ಜನಸಂಖ್ಯೆ | ೮೬ |
| ೧೨ | ೩. ನೇಕಾರ ಕುಟುಂಬಗಳ ಸದಸ್ಯರ ವಯೋಮಿತಿ | ೮೭ |
| ೧೩ | ೪. ನೇಕಾರ ಕುಟುಂಬಗಳ ವೈವಾಹಿಕ ಸ್ಥಿತಿ | ೮೭ |
| ೧೪ | ೫. ನೇಕಾರರ ಕುಟುಂಬಗಳ ಶೈಕ್ಷಣಿಕ ಜೀವನ | ೮೮ |
| ೧೫ | ೬. ನೇಕಾರಿಕೆಯ ಕುಟುಂಬಗಳ ಹಾಗೂ ಸದಸ್ಯರ ಉದ್ಯೋಗದ ಮಾಹಿತಿ | ೮೯ |
| ೧೬ | ೭. ನೇಕಾರಿಕೆಯಲ್ಲಿ ತೊಡಗಿರುವ ಸಮುದಾಯಗಳು | ೯೦ |
| ೧೭ | ೮. ನೇಕಾರರ ದಿನದ ಆದಾಯ | ೯೧ |
| ೧೮ | ೯. ನೇಕಾರರು ದಿನದ ಕೆಲಸಮಾಡುವ ಅವಧಿ | ೯೧ |
| ೧೯ | ೧೦. ನೇಕಾರ ಕುಟುಂಬಗಳ ಸದಸ್ಯರ ಮನೆಗಳ ವಿವರ | ೯೨ |
| ೨೦ | ೧೧. ನೇಕಾರಿಕೆ ಕುಟುಂಬಗಳ ಪಡಿತರ ಚೀಟಿಯ ಮಾಹಿತಿ | ೯೩ |
| ೨೧ | ೧೨. ನೇಕಾರ ಕುಟುಂಬಗಳ ಮೂಲಭೂತ ಸೌಲಭ್ಯಗಳು | ೯೩ |
| ೨೨ | ೧೩. ನೇಕಾರ ಕುಟುಂಬದ ಸದಸ್ಯರು ಪಡೆದಿರುವ ಸರಕಾರಿ ಸೇವಾ ಸೌಲಭ್ಯಗಳು | ೯೪ |
| ೨೩ | ೧೪. ಶಿಷ್ಯವೇತನ ಪಡೆದ ನೇಕಾರ ಕುಟುಂಬಗಳ ಸದಸ್ಯರ ಮಕ್ಕಳ ಮಾಹಿತಿ | ೯೪ |
| ೨೪ | ೧೫. ಭೂ ಹಿಡುವಳಿ ಹೊಂದಿರುವ ನೇಕಾರ ಕುಟುಂಬಗಳು | |
| ೨೫ | ೧೬. ನೇಯ್ಗೆ ಹೊಂದಿದ ನೇಕಾರರ ಕುಟುಂಬಗಳು | ೯೫ |
| ೨೬ | ೧೭. ನೇಕಾರ ಕುಟುಂಬಗಳು ಪಡೆದಿರುವ ಸಾಲಗಳು | ೯೬ |
| ೨೭ | ೧೮. ನೇಕಾರ ಕುಟುಂಬಗಳು ಹೊಂದಿರುವ ಸಾಲದ ಉದ್ದೇಶಗಳು | ೯೭ |
| ೨೮ | ೧೯. ನೇಕಾರ ಕುಟುಂಬಗಳಲ್ಲಿ ಸರಕಾರಿ ಸೌಲಭ್ಯಗಳ ಪಡೆದಿರುವ ಫಲಾನುಭವಿಗಳು | ೯೭ |
| ೨೯ | ೨೦. ನೇಕಾರ ಕುಟುಂಬಗಳಲ್ಲಿ ಉತ್ಪಾದಿಸುವ ಬಟ್ಟೆಗಳ ವಿಧ | ೯೮ |
| ೩೦ | ೨೧. ನೇಕಾರರ ಕುಟುಂಬಗಳಲ್ಲಿ ತಿಂಗಳ ಖರ್ಚು | ೯೯ |
| ೩೧ | ೨೨. ನೇಕಾರರ ಕುಟುಂಬಗಳಲ್ಲಿ ಮಾಸಿಕ ಖರ್ಚು ಮಾಡುವ ವಿಧ | ೧೦೦ |

## ಅಧ್ಯಾಯ ಒಂದು: ಅಧ್ಯಯನದ ಸ್ವರೂಪ, ಉದ್ದೇಶ ಮತ್ತು ವ್ಯಾಪ್ತಿ

೧.೧ ಪೀಠಿಕೆ

೧.೨ ಅಧ್ಯಯನದ ಸ್ವರೂಪ

೧.೩ ಅಧ್ಯಯನದ ಉದ್ದೇಶ

೧.೪ ಅಧ್ಯಯನದ ಪ್ರಾಮುಖ್ಯತೆ

೧.೫ ಅಧ್ಯಯನದ ವಿಧಾನ

೧.೬ ಇದುವರೆಗಿನ ಅಧ್ಯಯನಗಳ ಸಮೀಕ್ಷೆಗಳ ವಿಶ್ಲೇಷಣೆ

# ಅಧ್ಯಾಯ ಒಂದು:
# ಅಧ್ಯಯನದ ಸ್ವರೂಪ, ಉದ್ದೇಶ ಮತ್ತು ವ್ಯಾಪ್ತಿ

## ೧.೧ ಪ್ರಸ್ತಾವನೆ

ಆದಿಮಾನವನು ಇಂದಿನವರೆಗಿನ ಪರಿಸರದೊಂದಿಗೆ ನೆಡೆಸಿರುವ ಅನುಸಂಧಾನದ ಕ್ರಿಯೆಯಿಂದಲೇ ಮೊದಲು ಆಹಾರ ಸಂಗ್ರಹಣೆ, ಬೇಟೆಗಾರಿಕೆ, ಪಶುಪಾಲನೆ, ಕಿತ್ತು ಬೇಸಾಯ ಪದ್ದತಿ, ಕುಮರಿ ಬೇಸಾಯ ಪದ್ಧತಿ ಹಾಗೂ ಆಧುನಿಕ ಕೃಷಿ ಮುಂತಾದವುಗಳು ಹುಟ್ಟಿಕೊಂಡವು. ಮನುಷ್ಯನು ತನ್ನ ಬುದ್ಧಿ ಶ್ರಮದಿಂದ ದುಡಿಮೆಯನ್ನು ಕಾಲಕ್ಕೆ ಅನುಗುಣವಾಗಿ ಬದಲಾಯಿಸುತ್ತಿದ್ದಾನೆ. ಕಾಲಾನಂತರ ಜನಸಂಖ್ಯೆಗೆ ಅನುಗುಣವಾಗಿ ಮಾನವ ಗುಂಪು ಜೀವನ ಪ್ರಾರಂಭಿಸಿದ. ಮಾನವನ ಗುಂಪು ವಾಸ್ತವ್ಯವನ್ನು ಆ ಪ್ರದೇಶಗಳಿಗೆ ಅನುಸಾರವಾಗಿ ಸಣ್ಣಮಟ್ಟ ಪೊಡು, ವಾಡಾ, ಹಟ್ಟಿ ಮತ್ತು ಗ್ರಾಮಗಳಾಗಿ ಬದಲಾವಣೆಗೊಂಡವು. ಮನುಷ್ಯನ ಈ ಗುಂಪು ವಾಸ್ತವ್ಯ ಪ್ರಾರಂಭದ ನಂತರ ಮಿಗುತವು ಕಂಡುಬಂದಿತು. ಮನುಷ್ಯನ ಹೊಸ ಹೊಸ ಆವಿಷ್ಕಾರಗಳಿಗೆ, ಬದಲಾವಣೆಗೆ ಕಾರಣವಾಗಿರಬಹುದು. ಮನುಷ್ಯನಲ್ಲಿ ಈ ಮಿಗುತದಿಂದ ನಾನು, ನನ್ನದು, ನನಗೆ ಸೇರಬೇಕಾಗಿದ್ದು ಎಂಬ ಆಶಾಭಾವನೆ ಪ್ರಾರಂಭವಾಯಿತು. ಜನಸಂಖ್ಯೆಯ ಅನುಗುಣವಾಗಿ ಪರಿಸರದೊಂದಗಿನ ಅನುಸಂಧಾನದ ಕ್ರಿಯೆಯಿಂದ ಮಾನವನು ಪಶುಸಂಗೊಪನೆ, ಬೇಸಾಯ ತನ್ನ ಹಸಿವಿನ ಕೊರತೆಗೆ ಪ್ರಾಣಿಗಳನ್ನು ಪಳಗಿಸಿದನು ಹಾಗೂ ಗಡ್ಡೆ, ಗೆಣಸು ಮತ್ತು ಹಣ್ಣುಗಳನ್ನು ಬೆಳೆಸಿದ, ತನ್ನ ದೆಹದ ಸಂರಕ್ಷಣೆಗಾಗಿ ಹಲವಾರು ಬಗೆಯ ಪರಿಸರದಲ್ಲಿ ಸಿಗುವಂತ ವಸ್ತುಗಳಾದ ಗಿಡಮರಗಳ ಎಲೆ, ತೊಗಟೆ ಹಾಗೂ ಪ್ರಾಣಿಗಳ ಚರ್ಮಗಳನ್ನು ತನ್ನ ದೇಹ ಕಾಪಾಡಿಕೊಳ್ಳಲು ಉಪಯೋಗಿಸಲು ಪ್ರಾರಂಭಿಸಿದ. ಮನುಷ್ಯನು ಪ್ರಾಣಿಗಳಿಂದ ಹಾಗೂ ಪರಿಸರದ ಏರುಪೇರುಗಳಿಂದ ರಕ್ಷಣೆಯನ್ನು ಮಾಡಿಕೊಂಡನು. ಈ ರೀತಿಯಲ್ಲಿ ಮನುಷ್ಯನು ಪರಿಸರದೊಂದಗಿನ ಅನುಸಂಧಾನದಲ್ಲಿಯ ಹಾಗೂ ತನ್ನ ಆಶಾಭಾವನೆಯ ಪ್ರತಿಫಲವಾಗಿ ಹಲವಾರು ಕಸುಬುಗಳ ಹುಟ್ಟಿಗೆ ಕಾರಣವಾಗಿದೆ.

ಗುಂಪು ಜೀವನ, ಮಿಗುತ ಹಾಗೂ ನಾನು, ನನ್ನದು ಗುರ್ತಿಸುವಂತ ಕಲ್ಪನೆಯಿಂದ ಮನುಷ್ಯನು ತನ್ನ ದೇಹವನ್ನು ಮುಚ್ಚಿಕೊಳ್ಳುವಂತ ಭಾವನೆಯ ಪ್ರತಿಫಲವೆ, ಪ್ರಥಮವಾಗಿ ಮನುಷ್ಯ ಗಿಡಗಳ ಎಲೆಗಳನ್ನು ಸುತ್ತಿಕೊಳ್ಳುವುದು, ಮರಗಳ ತೊಗಟೆಗಳಿಂದ ದೇಹವನ್ನು ಮುಚ್ಚಿಕೊಳ್ಳುವುದು ಹಾಗೂ ಪ್ರಾಣಿಗಳನ್ನು ಬೇಟಿಯಾಡಿದ ನಂತರ ಪ್ರಾಣಿಗಳ ಚರ್ಮವನ್ನು ಹೊದಿಕೆಯ ರೂಪದ ಬಟ್ಟೆಗಳಾಗಿದ್ದವು, ಎಂದು ತಾರ್ಕಿಕವಾಗಿ ಊಹಿಸಬಹುದಾಗಿದೆ. ಮುಂದೆ ಒಂದು ಕಾಲದಲ್ಲಿ ನೈಸರ್ಗಿಕವಾಗಿ ಪ್ರಾಣಿಗಳಿಂದ ಸಿಗುವಂತ ಉಣ್ಣಿಯ ಕೂದಲುಗಳನ್ನು ಉಪಯೋಗಿಸಿ ಬಟ್ಟೆಯನ್ನು ಹೆಣೆದು ದೇಹಕ್ಕೆ ಹಾಕಿಕೊಳ್ಳುತ್ತಿದ್ದರು. ನಂತರ ಮಾನವ ಸೌಂದರ್ಯದ ಪ್ರಜ್ಞೆಯಿಂದ ಹತ್ತಿ ಬಟ್ಟೆ ಹಾಗೂ ರೇಷ್ಮೆ ಬಟ್ಟೆಯ ಆವಿಷ್ಕಾರ ಸಾಧ್ಯವಾಗಿದೆ ಎಂದು ಹೇಳಬಹುದು.

ಮನುಷ್ಯ ನಿರಂತರದ ಪರಿಸರದ ಒಡನಾಟದಿಂದ, ದುಡಿಮೆಯ ಪ್ರತಿಫಲವಾಗಿ ತನ್ನ ಜ್ಞಾನವನ್ನು ಹೆಚ್ಚಿಸಿಕೊಳ್ಳುತ್ತಾ ಸಾಗಿಕೊಂಡು ಬಂದಿದ್ದಾನೆ. ಇದು ನಿರಂತರವಾಗಿ ಸಾಗುತ್ತಿದೆ. ಆದರೆ ಪರಿಸರದೊಂದಗಿನ ದುಡಿಮೆ, ಪರಿಶ್ರಮದಿಂದ ಪ್ರಾರಂಭಿಸಿದ ಆಹಾರ ಸಂಗ್ರಹಣೆ, ಬೇಟೆಗಾರಿಕೆ, ಪಶುಪಾಲನೆ ಹಾಗೂ ಕೃಷಿಯ ಒಡನಾಟದಲ್ಲಿ ಉಗಮವಾದ ಶ್ರಮವು ಕಸುಬುಗಳಾಗಿ ಮುಂದುವರೆದವು. ಒಂದಕ್ಕೊಂದು ನೇರವಾದ ಸಂಬಂಧವನ್ನು ಹೊಂದಿದ್ದವು. ಜನಸಂಖ್ಯೆಯ ಪ್ರಮಾಣ ಕಾಲದಿಂದ ಕಾಲಕ್ಕೆ ಹೆಚ್ಚಳವಾಗತೊಡಗಿತು. ಜನಸಂಖ್ಯೆಯ ಹೆಚ್ಚಳದ ಪ್ರಭಾವದಿಂದ ಆಹಾರ ಪದ್ಧತಿಯಲ್ಲಿ, ಕಸುಬುಗಳಲ್ಲಿ ಹಾಗೂ ಜೀವನ ಶೈಲಿಯಲ್ಲಿ ಅನೇಕ ಬದಲಾವಣೆ ಮತ್ತು ಹಲವಾರು ಸಮಸ್ಯೆಗಳ ಸುಳಿಯಲ್ಲಿ ಸಿಲುಕಿಕೊಳ್ಳುತ್ತಾ ಸಾಗಿದನು. ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳಲು ಹಲವಾರು ಆವಿಷ್ಕಾರಗಳಿಗೆ ಒಳಗಾಗಿ ಮುಂದೆ ಸಾಗಿದ. ಆರಂಭದ ಕಾಲದಲ್ಲಿ ಪ್ರಾಣಿಗಳ, ಚರ್ಮ, ಉಣ್ಣಿಯ ಬಟ್ಟೆ, ಹತ್ತಿಯ ಬಟ್ಟೆಯನ್ನು ಹೆಣೆದುಕೊಂಡು ತನ್ನ ದೇಹಕ್ಕೆ ಹಾಕಿಕೊಳ್ಳಲು ಪ್ರಾರಂಭಿಸಿದನು. ಕಾಲಾನಂತರ ಕೈಯಿಂದ ಹೆಣಿಗೆಯ ಕೌಶಲ್ಯದಿಂದ ಬಟ್ಟೆಯನ್ನು ಸಿದ್ಧಪಡಿಸಿಕೊಳ್ಳತೊಡಗಿದ. ಮಾನವನ ತಿಳುವಳಿಕೆ ಮುಂದುವರೆದಂತೆಲ್ಲ ವೈಜ್ಞಾನಿಕ ರೀತಿಯಲ್ಲಿ ತಯಾರಿಸಲು ‘ಮಗ್ಗ’ ಎಂಬ ಉಪಕರಣವನ್ನು ಕಂಡುಕೊಂಡ. ಈ ಉಪಕರಣದ ಸಹಾಯದಿಂದ ಜನರಿಗೆ ಸಿದ್ದ ಉಡುಪುಗಳನ್ನು ತಯಾರಿಸಿದ. ನಂತರ ಎಲ್ಲರು ಬಟ್ಟೆಗಳನ್ನು ಉಪಯೋಗಿಸಲು ಪ್ರಾರಂಭಿಸಿದರು. ಮೊದಮೊದಲು ಹೆಣಿಗೆಯ ರೂಪದಲ್ಲಿ ಪ್ರಾರಂಭವಾದ ಬಟ್ಟೆ ಉತ್ಪಾದನೆ ಕೈಮಗ್ಗ, ಕುಣಿಮಗ್ಗ, ಸ್ವಯಂಚಾಲಿತ(ಅಟೊಮ್ಯೆಟಿಕ್) ಮಗ್ಗ, ಗಾಳಿ ಮಗ್ಗ ಹಾಗೂ ಇಂದಿನ ಆಧುನಿಕ ಯುಗದಲ್ಲಿ ಹೆಚ್ಚಿನ ರೀತಿಯಲ್ಲಿ ದೊರೆಯುವಂತ ವಿದ್ಯುತ್ ಚಾಲಿತ ಮಗ್ಗಗಳನ್ನು ನಾವು ನೋಡಬಹುದಾಗಿದೆ.

“ಭಾರತ ದೇಶದಲ್ಲಿ ಪಾರಂಪರಿಕವಾಗಿ ಅನುಸರಿಸುತ್ತಾ ಬಂದಿರುವ ಅನೇಕ ವೃತಿಗಳಿವೆ. ಕೃಷಿ, ಪಶುಪಾಲನೆ, ಕ್ಷೌರಿಕವೃತ್ತಿ, ಕುಂಬಾರಿಕೆ, ಕಂಚುಗಾರಿಕೆ, ಪತ್ತಾರಿಕೆ, ಬಡಿಗತನ ಮತ್ತು ನೇಕಾರಿಕೆಗಳಂತಹ ಹಲವಾರು ವೃತ್ತಿಗಳನ್ನು ಗುರುತಿಸಲಾಗಿದೆ.”[೧] ಈ ವೃತ್ತಿ ಬದುಕು ನಮ್ಮ ಭಾರತದಲ್ಲಿ ಪ್ರಾರಂಭವಾಗಿದೆ ಎನ್ನುವುದು ತಿಳಿಯುತ್ತದೆ. “ಕೃಷಿಯನ್ನು ಬಿಟ್ಟರೆ ಹೆಚ್ಚಿನ ಜನರ ಜೀವನಾಧಾರ ಎನಿಸಿರುವ ವೃತ್ತಿ ನೇಕಾರಿಕೆ.”[೨] ಪ್ರಪಂಚದಲ್ಲಿ ನಾವು ನೋಡಿದಾಗ ಈ ಆಧುನಿಕ ಉಪಕರಣಗಳ ಆವಿಸ್ಕಾರಗಳ ಪೂರ್ವದಲ್ಲಿ ನಾವು ನೇಕಾರಿಕೆಯ ವೃತ್ತಿ ಹೆಚ್ಚು ಕಾಣುತ್ತೇವೆ. ಆದಿಮ ಸಂಸ್ಕೃತಿಯಲ್ಲಿ ಆಹಾರ ಸಂಗ್ರಹಣೆ, ಬೇಟೆ ನಂತರ ಕೃಷಿಯ ಆವಿಷ್ಕಾರ ಆಯಿತು. ಕೃಷಿಯನ್ನು ಹೊರತುಪಡಿಸಿದರೆ ಪಾರಂಪರಿಕ ವೃತ್ತಿಯಲ್ಲಿ ನೇಕಾರಿಕೆಯನ್ನು ವೃತಿಯನ್ನಾಗಿ ಸ್ವೀಕರಿಸಿದ ಜನರು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಾರೆ.

“ಹಳೆಯ ಶಿಲಾಯುಗದಲ್ಲಿ ಚರ್ಮದಿಂದ ಉಡುಗೆ ತಯಾರಿಸುವ ಕಲೆ ಉತ್ತರ ಯುರೋಪಿನಲ್ಲಿ ಪ್ರಾರಂಭವಾಯಿತೆಂದು ತಜ್ಞರ ಅಭಿಪ್ರಾಯವಾಗಿದೆ. ಬಟ್ಟೆ ಉತ್ಪಾದನೆ ಅಥವಾ ಉಡುಪು ತಯಾರಿಸುವ ಕಲೆ ತೀರ ಇತ್ತಿಚಿನದ್ದೆ, ಲೋಹದ ಸೂಜಿ ಬಳಕೆಯಲ್ಲಿ ಬರುವ ಮೊದಲು ಎಲುವುಗಳನ್ನು ಕೊಂಡಿ ಅಥವಾ ವಂಕಿ ಆಕಾರದಲ್ಲಿ ರೂಪಿಸಿ ಸೂಜಿಯನ್ನಾಗಿ ಬಳಸಿದ ಪಳಿಯುಳಿಕೆಗಳಿವೆ. ಲೋಹದ ಯುಗದಿಂದ ಮನುಕುಲದ

ಇತಿಹಾಸವೇ ಬದಲಾಯಿತು."[3] ಭಾರತದ ನೇಕಾರಿಕೆಯ ಕಲೆ ಅತ್ಯಂತ ಪ್ರಾಚೀನವಾದದ್ದು ಎಂದು ತಿಳಿಯಲಿಕ್ಕೆ ನಮಗೆ ಹಲವಾರು ಕುರುಹುಗಳು ಸಿಗುತ್ತಿವೆ. ಪುರಾಣ, ಗ್ರಂಥಗಳು ಹಾಗೂ ಕಥೆಗಳ ಮುಖೇನ ನಾವು ತಿಳಿದುಕೊಳ್ಳಬಹುದು. ಇದಕ್ಕೆ ಒಂದು ಉದಾಹರಣೆ ರಾಮಾಯಣದ ಕಥೆಯಲ್ಲಿ ಸೀತೆಯ ಸೆರಗಿನ ವಿವರಣೆಯನ್ನು ಗಮನಿಸಬಹುದು. ಮಹಾಭಾರತದಲ್ಲಿಯ ದ್ರೌಪತಿಯ ವಸ್ತ್ರಾಪಹರಣ ಮಾಡುವ ಸನ್ನಿವೇಶವನ್ನು ನಾವು ಈ ನೇಕಾರಿಕೆ ಕೌಶಲ್ಯದ ಬಗೆಗೆ ಬಹಳ ಪ್ರಾಚೀನದಿಂದಲೂ ಇತ್ತು ಎಂಬುವುದನ್ನು ಕಂಡುಕೊಳ್ಳಲು ಸಾಧ್ಯವಾಗುತ್ತಿದೆ. ಭಾರತದ ದೇಶದ ಪ್ರಾಚೀನ ನಗರಗಳಾದ ಹರಪ್ಪಾ ಮತ್ತು ಮಹೊಂಜೋದಾರ ಪ್ರದೇಶದ ಅವಶೇಷಗಳಡಿಯಲ್ಲಿ ದೊರೆತ ಉಣ್ಣೆ ಬಟ್ಟೆಗಳು ಸಾಕ್ಷಿಗಳಾಗಿವೆ. ಪ್ರಪಂಚದಲ್ಲಿಯೇ ಅತೀ ಪ್ರಸಿದ್ಧ ಹಾಗೂ ಅತಿ ಹಳೆಯ ನಾಗರಿಕತೆಯಂದು ಕರೆಸಿಕೊಳ್ಳುವ ಈಜಿಪ್ತನ್ನು ಅವಲೋಕಿಸಿದಾಗ ಅಲ್ಲಿನ ಫಿರಾಮಿಡ್ಡಗಳಲ್ಲಿನ "ಮಮ್ಮಿ"ಗಳನ್ನು ಸುಚಿಯಾಗಿ ಲಕ್ಷಣವಾಗಿಡಲು ಭಾರತದ ಉಣ್ಣೆ ಮತ್ತು ರೇಷ್ಮೆ ಉಡುಪುಗಳನ್ನು, ಬಟ್ಟೆಗಳನ್ನು ಮಮ್ಮಿಗಳ ಮೇಲೆ ಹಾಕುತ್ತಿದ್ದರು ಎಂಬುವುದು ತಿಳಿಯುತ್ತದೆ.

ಪ್ರಾಚೀನ ಭಾರತದಿಂದ ಹಿಡಿದು ಮಧ್ಯಕಾಲದ ಭಾರತದಲ್ಲಿಯು ಉಡುಪು, ಬಟ್ಟೆ ತಯಾರಿಸುವ ಕಾರ್ಯವು ನಿರಂತರವಾಗಿ ನಡೆಯುತ್ತಿದೆ. ಹೊಸ ಹೊಸ ಆವಿಷ್ಕಾರಗಳ ಜೊತೆಯಲ್ಲಿ ಉಡುಪು ತಯಾರಿಕೆಯ ವೃತ್ತಿ ಬದಲಾಯಿತು. ಒಂದು ಕಾಲದಲ್ಲಿ ಜನರು ಮಾಡುತ್ತಿರುವ ವೃತ್ತಿಗಳಿಗನುಗುಣವಾಗಿ ಜಾತಿಗಳು ಉಗಮವಾಗಲು ಕಾರಣವಾಯಿತು. ಜಾತಿ ಮತ್ತು ವೃತ್ತಿಗಳಿಗೆ ನಿಕಟವಾದ ಸಂಬಂಧ ಹೋಲಿಸುತ್ತಾರೆ. ರಾಜ ಮಹಾರಾಜರು ಬಟ್ಟೆಯ ನೇಯುವ ನೇಕಾರರ ಸಮುದಾಯವನ್ನು ಗೌರವಿಸುತ್ತಿದ್ದರು. ಭಾರತದಲ್ಲಿ ನೇಕಾರ ಸಮುದಾಯಗಳಿಗೆ ಮಧ್ಯಕಾಲಿನ ರಾಜರು ತಮ್ಮ ಆಸ್ಥಾನಗಳಲ್ಲಿ ನೇಕಾರರಿಗೆ ಉತ್ತೇಜನ ನೀಡುತ್ತಿದ್ದರು. ಶ್ರೇಷ್ಠ ನೇಕಾರರಿಗೆ ಆಸ್ಥಾನದಲ್ಲಿ ವಿಶೇಷ ಗೌರವ ಹಾಗೂ ಸಹಕಾರ ನೀಡುತ್ತಿದ್ದರು.

ಕರ್ನಾಟಕದಲ್ಲಿ ನೇಯ್ಗೆಯ ವೃತ್ತಿಯಲ್ಲಿ ತೊಡಗಿಸಿಕೊಂಡವರಿಗೆ ನೇಕಾರ, ಜಾಡ, ಸಾಳಿ(ಲೆ) ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ದೇವಾಂಗ ಸಮುದಾಯವು ಈ ವೃತ್ತಿಯಲ್ಲಿ ಪ್ರಮುಖವಾಗಿ ತನ್ನನ್ನು ತೊಡಗಿಸಿಕೊಂಡಿದೆ. ಸಾಂಪ್ರದಾಯಿಕ ಅನುವಂಶಿಕ ವೃತ್ತಿಯಲ್ಲಿ ಬದಲಾವಣೆಯಾದಂತೆ ನೇಯ್ಗೆಯ ವೃತ್ತಿ ಹಾಗೂ ಸೀರೆ, ಕುಬಸದ, ಹಾಗೂ ಇತರೆ ಉಡುಪುಗಳ ವ್ಯಾಪಾರ ಯಾವುದೆ ಒಂದು ಜಾತಿ ಗುಂಪಿನ ಸಾಮ್ಯದಲ್ಲಿ ಉಳಿದಿಲ್ಲ, ಬಹುತೇಕ ಜಾತಿಗಳು ಈ ವೃತ್ತಿಯಲ್ಲಿ ಪ್ರವೇಶ ಪಡೆದುಕೊಂಡಿವೆ.

ಕರ್ನಾಟಕದಲ್ಲಿ ನೇಕಾರಿಕೆ ವೃತ್ತಿಯಲ್ಲಿ ತೊಡಗಿಸಿಕೊಂಡ ಪ್ರಮುಖ ಸಾಂಪ್ರದಾಯಿಕ ಜಾತಿ ಗುಂಪುಗಳೆಂದರೆ ದೇವಾಂಗ, ಪಟ್ಟಸಾಲಿ, ಸ್ವಕುಳ ಸಾಲಿ, ಪದ್ಮಸಾಲಿ, ಕುರುಹಿನ ಶೆಟ್ಟಿ, ತೋಗಟವೀರ ಹಾಗೂ ಹಟಗಾರ ಸಮುದಾಯಗಳು ಕಂಡುಬರುತ್ತವೆ. ಇತ್ತೀಚೆಗೆ ಲಿಂಗಾಯತ, ಪಟ್ಟೆಗಾರ, ಮುಸ್ಲಿಂ ಹಾಗೂ ಹರಿಜನರು ಕೂಡಾ ಈ ನೇಕಾರಿಕೆ ವೃತ್ತಿಯಲ್ಲಿ ತೊಡಗಿಕೊಂಡಿದ್ದಾರೆ. ಆಧುನಿಕ ಯುಗದಲ್ಲಿ ಅತಿಹೆಚ್ಚಿನ ಬೇಡಿಕೆ ಇರುವ ವೃತ್ತಿ ಎಂದರೆ ನೇಕಾರಿಕೆ ಎಂದು ಹೇಳಬಹುದು. ಈ ವೃತ್ತಿ ಸಾಂಪ್ರದಾಯಕತೆಯಿಂದ ಆಧುನಿಕತೆಯತ್ತ ಸಾಗುತ್ತಿರುವುದರಿಂದ ಇದು ನಿರುದ್ಯೋಗಕ್ಕೆ ನಾಂದಿಯಾಗುತ್ತದೆ.

"ಪಾಹಿಯಾನ್, ಹುಯನ್‌ತ್ಸಾಂಗ್, ವಾರ್ತಾಯನ್, ಬರ್ಮಿಲ್ ಮತ್ತು ಮಾರ್ಕೋಪೋಲೊ ಇನ್ನೂ ಅನೇಕ ವಿದೇಶಿ ಪ್ರವಾಸಿಗರು ತಮ್ಮ ಪ್ರವಾಸ ಕಥನಗಳಲ್ಲಿ ಭಾರತೀಯರ ಕೈಮಗ್ಗ ಉದ್ದಮೆಯ ವೈಭವವನ್ನು ಪ್ರಸ್ಥಾಪಿಸಿದ್ದಾರೆ. ಅದರಲ್ಲಿಯೂ ಪ್ರಮುಖವಾಗಿ ಕರ್ನಾಟಕದಲ್ಲಿ ಉತ್ಪಾದಿಸಲ್ಪಟ್ಟ ಬಟ್ಟೆಗಳನ್ನು ಗ್ರೀಕ್ ದೇಶಕ್ಕೆ ನಿರ್ಮಾತ ಮಾಡಲಾಗುತ್ತಿತ್ತೆಂದು ತಿಳಿದು ಬಂದಿದೆ"[೪]. ಈ ಮೇಲಿನ ಹೇಳಿಕೆಯನ್ನು ಗಮನಿಸಿದಾಗ ಭಾರತದಲ್ಲಿ ಬಟ್ಟೆಗಳಿಗೆ ವ್ಯಾಪಕ ಬೇಡಿಕೆ ಇತ್ತು ಹಾಗೂ ನೈಸರ್ಗಿಕವಾಗಿ ಮೃದುತ್ವ ನೀಡುವಂತ ಬಟ್ಟೆಗಳನ್ನು ನೇಕಾರರು ತಯಾರಿಸುತ್ತಿದ್ದರು. ಕಲಾತ್ಮಕ ಬಟ್ಟೆಗಳನ್ನು ಹತ್ತಿ ಹಾಗೂ ರೇಷ್ಮೆ ಬಟ್ಟೆಳಿಂದ ತಯಾರಿಸುತ್ತಿದ್ದರು ಎಂಬುವುದು ತಿಳಿಯುತ್ತದೆ. ಭಾರತದಲ್ಲಿ ಕೃಷಿಯ ನಂತರದ ಸ್ಥಾನವನ್ನು ಬಟ್ಟೆ ತಯಾರಿಕೆಯ ವೃತ್ತಿ ಪಡೆದುಕೊಂಡಿದೆ. ಇದು ಒಂದು ಗುಡಿಕೈಗಾರಿಕೆಯಾಗಿ ಬೆಳೆದಿತ್ತು ಎಂದು ಹೇಳಿದರೆ ತಪ್ಪಾಗಲಾರದು. ಇಂದು ಆಧುನೀಕರಣದ ಪ್ರಭಾವದಿಂದ ಕೈಮಗ್ಗದ ನೇಕಾರಿಕೆಯ ಅಳಿವಿನ ಅಂಚಿನಲ್ಲಿದೆ. "ಇಂಗ್ಲೆಂಡಿನಲ್ಲಿ ಆರಂಭವಾದ ಕೈಗಾರಿಕಾ ಕ್ರಾಂತಿಯು ಇಂದು ಇಡಿ ಜಗತ್ತನ್ನೇ ಆವರಿಸಿದೆ. ಹಬೆಶಕ್ತಿ, ತೈಲಶಕ್ತಿ, ವಿದ್ಯುತ್ ಶಕ್ತಿ, ಅಣುಶಕ್ತಿ, ಮೊದಲಾದವುಗಳ ಸದ್ಬಳಕೆಯಿಂದ ಇಂದು ಆರ್ಥಿಕ ಕ್ಷೇತ್ರದಲ್ಲಿಯೇ ಅಲ್ಲದೆ ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ಕ್ರಾಂತಿಕಾರಕ ಬದಲಾವಣೆಗಳಾಗುತ್ತಿವೆ"[೫]. ಕೈಗಾರಿಕಾ ಕ್ರಾಂತಿಯಿಂದ ಉಂಟಾಗಬಹುದಾದ ತೊಂದರೆಗಳನ್ನು ಎದುರಿಸಲು ಅಂದಿನಿಂದ ಈ ಗೃಹ ಉತ್ಪನ್ನಗಳ ವೃತ್ತಿದಾರರೂ ತಮ್ಮ ತಮ್ಮ ಸಂರಕ್ಷಣೆಗಾಗಿ ಗುಂಪುಗಳಾಗಿ ಹಕ್ಕು ಮತ್ತು ತಮ್ಮ ಉದ್ಯೋಗದ ಉಳಿವಿಗಾಗಿ ಸಂಘಟನೆಗಳ ಔಪಚಾರಿಕವಾಗಿ ನಡೆದುಬಂದವು. ನಂತರ ದೇಶದಲ್ಲಿ ಸಹಕಾರ ಚಳುವಳಿಗಳು ಹುಟ್ಟಿಕೊಂಡವು. ಈ ಚಳುವಳಿಗಳ ಮೂಲಕ ವೃತ್ತಿಗಳನ್ನು ನಿರ್ವಹಿಸುವರು ಕಾನೂನಿನಡಿಯಲ್ಲಿ ಸಂಘಟಣೆಗಳನ್ನು ಕಟ್ಟಿಕೊಂಡರು.

"ಸಂಘಟನೆಯು ಒಂದು ಸಮೂಹ ಇಲ್ಲವೇ ಒಂದು ವಿಭಾಗ ಇಲ್ಲವೇ ಒಂದು ಉದ್ಯಮದಲ್ಲಿ ಅಗತ್ಯವುಳ್ಳ ಚಟುವಟಿಕೆ ಹಾಗೂ ಸ್ಥಾನಮಾನವನ್ನು ನಿರ್ಧರಿಸುವ ಪ್ರಕ್ರಿಯೆಯಾಗಿದೆ. ಅದು ಅವುಗಳ ಅತ್ಯಂತ ಪರಿಣಾಮಕಾರಿಯಾದ ಸಂಬಂಧಗಳಲ್ಲಿ ತೊಡಗಿಸುವುದು, ಅಧಿಕಾರದ ನಿರೂಪಣೆ, ಪ್ರತಿಯೊಬ್ಬರ ಹೊಣೆಗಾರಿಕೆ ಹಾಗೂ ಕರ್ತವ್ಯಗಳನ್ನು ನಿರ್ಧರಿಸುವುದು, ಪ್ರತಿಯೊಬ್ಬರಿಗೂ ನಿಶ್ಚಿತವಾದ ಜವಾಬ್ದಾರಿಗಳನ್ನು ಸಾಧಿಸುವುದು".[೬] ಎಂದು ಜಾನ್‌ಸನ್ ಮತ್ತು ರಾಬರ್ಟಸನ್ ಅವರು ನಮ್ಮ ವೃತ್ತಿ ಸಂಘಟನೆಗಳ ಕಾರ್ಯವೈಖರಿಯ ಹಾಗೂ ಸಂಘಟನೆಯ ಬಗ್ಗೆ ವಿವರಿಸಿದ್ದಾರೆ.

ಪ್ರಾಚೀನ, ಮಧ್ಯ ಹಾಗೂ ಇಂದಿನ ಆಧುನಿಕ ಕಾಲಗಳಲ್ಲಿ ವೃತ್ತಿ ಆಧಾರಿತ ಸಂಘ, ಸಮೂಹಗಳು ಸಂಘಟನೆಗಳನ್ನು ನಾವು ನೋಡಬಹುದಾಗಿದೆ. ಒಂದು ನಿರ್ದಿಷ್ಟ ವೃತ್ತಿಗೆ ಸಂಬಂಧಿಸಿದಂತೆ ಕುಶಲಕರ್ಮಿಗಳು ಉದ್ಯೋಗಿಗಳು ಸಂಘಟಿತರಾಗಿ ತಮ್ಮ ವೃತ್ತಿಗಳಿಗೆ ಸಂಬಂಧಿಸಿದಂತೆ ನಿಯಮಾವಳಿಗಳನ್ನು ರೂಪಿಸಿಕೊಂಡು ಕುಶಲಕರ್ಮಿಗಳ ವೃತ್ತಿಸಂಘ ಹಾಗೂ ಉದ್ಯೋಗಿಗಳ ವೃತ್ತಿಸಂಘ ಮತ್ತು ಕ್ರಾಫ್ಟ್‌ಗಿಲ್ಡ್ ಅಸ್ತಿತ್ವಕ್ಕೆ ಬಂದವು. ಉದಾ: ನೇಕಾರ ಸಂಘ, ಚಿನಿವಾರರ ಸಂಘ, ಕಮ್ಮಾರರ ಸಂಘ, ಅಕ್ಕಸಾಲಿಗರ ಸಂಘ, ಚಮ್ಮಾರರ ಸಂಘ ಇತ್ಯಾದಿ. ಹೀಗೆ ಬ್ರಿಟಿಷರ ಕಾಲದಿಂದಲೂ ಸರಕಾರದ ಒಂದು ಕಾನೂನಿನ ಅಡಿಯಲ್ಲಿ ನೋಂದಣಿಯನ್ನು

ಮಾಡಿಕೊಂಡು ತಮ್ಮ ಪಾರಂಪರಿಕ ಉದ್ಯೋಗವನ್ನು ಮುಂದುವರೆಸಿಕೊಂಡು ಸಾಗುತ್ತಿರುವ ಸಮುದಾಯಗಳನ್ನು ನಾವು ಇಂದಿಗೂ ನೋಡುತ್ತಿದ್ದೇವೆ. ಅಂತಹ ಜನ ಸಮುದಾಯಗಳನ್ನು ಹಾಗೂ ಸಂಘಟಣೆಗಳ ಅವಸ್ಯಕತೆಗಳ, ಅವುಗಳ ಸದ್ಯದ ಸ್ಥಿತಿಗತಿಗಳ ಕುರಿತು ಇಂದು ನಾವು ಅಧ್ಯಯನದ ಮಾಡುವುದು ಅತಿಮುಖ್ಯ. ಈ ಅಧ್ಯಯನದಲ್ಲಿ ನೇಕಾರರನ್ನು ಗಮನದಲ್ಲಿಟ್ಟುಕೊಂಡು ಅಧ್ಯಯನದಲ್ಲಿ ತೊಡಗಿಕೊಂಡಿದ್ದರಿಂದ ನೇಕಾರಿಕೆಯ ಸಂಘಟಣೆಗಳು ಯಾವವು? ಯಾವಾಗ ಹುಟ್ಟಿಕೊಂಡವು? ಅವುಗಳ ಕಾರ್ಯವೈಖರಿ ಹೇಗೆ ನಡೆಯುತ್ತಿವೆ? ಇಷ್ಟೆ ಅಲ್ಲದೆ ಈ ನೇಕಾರರ ವಾಸ್ತವ ಬದುಕು ಹೇಗಿದೆ ಎಂಬುದರ ಕುರಿತು ಅಧ್ಯಯನ ಮಾಡಿದ್ದೇವೆ.

**ವ್ಯಾಪ್ತಿ:**

೧೯೯೭ರಲ್ಲಿ ಬಿಜಾಪೂರ ಜಿಲ್ಲೆಯಿಂದ ಪ್ರತ್ಯೇಕಗೊಂಡ ಬಾಗಲಕೋಟ ಜಿಲ್ಲೆಯು ತನ್ನ ವ್ಯಾಪ್ತಿಯೊಳಗಡೆ ಬರುವಂತ ಗ್ರಾಮಗಳು, ಪಟ್ಟಣಗಳು ಹಾಗೂ ನಗರಗಳ ಜನರಿಗೆ ಆಡಳಿತ ಹಾಗೂ ಸರಕಾರದ ಅನುಕೂಲಗಳನ್ನು ಪಡೆದುಕೊಳ್ಳಲು ಬಹಳ ಸಹಾಯಕಾರಿಯಾಗಿದೆ ಎಂದು ಅಲ್ಲಿಯ ಜನರ ಅಭಿಪ್ರಾಯ.

ಬಾಗಲಕೋಟ ಜಿಲ್ಲೆಯು ೬೫೯೩ಚದರ. ಕಿ.ಮೀ., ವ್ಯಾಪ್ತಿಯನ್ನು ಒಳಗೊಂಡಿದ್ದು. ಈ ಜಿಲ್ಲೆಗೆ ದಕ್ಷಿಣದಲ್ಲಿ ರಾಯಚೂರ ಜಿಲ್ಲೆ, ಉತ್ತರದಲ್ಲಿ ಗದಗ ಜಿಲ್ಲೆ, ಪಶ್ಚಿಮದಲ್ಲಿ ವಿಜಯಪೂರ ಜಿಲ್ಲೆ, ಆಗ್ನೆಯಕಡೆಗೆ ಬೆಳಗಾವಿ ಜಿಲ್ಲೆ ಮತ್ತು ಪೂರ್ವದಕಡೆ ಕೊಪ್ಪಳ ಜಿಲ್ಲೆಗಳು ತಮ್ಮ ಗಡಿರೇಖೆಗಳಿಂದ ಈ ಜಿಲ್ಲೆಯನ್ನು ಸುತ್ತುವರೆದಿವೆ.

ಘಟಪ್ರಭ ದಡದ ಭಾಗದಲ್ಲಿರುವ ಇದು ಸಮುದ್ರದ ಮಟ್ಟದಿಂದ ೫೩೩ ಮೀ. ಎತ್ತರದಲ್ಲಿದೆ. ಬಾಗಲಕೋಟ ಜಿಲ್ಲೆಯು ಆರು ತಾಲೂಕು ಒಳಗೊಂಡಿದೆ. ಅವುಗಳೆಂದರೆ ಬದಾಮಿ, ಬಾಗಲಕೋಟ, ಬೀಳಗಿ, ಜಮಖಂಡಿ ಮತ್ತು ಮುಧೋಳ ಒಳಗೊಂಡಿವೆ. ಇವು ಈ ಜಿಲ್ಲೆಯ ತಾಲ್ಲೂಕಾ ಕೇಂದ್ರಗಳು. ೨೦೧೭ನೇ ಆಯವ್ಯಯ ಪ್ರಕಾರ ಬಾಗಲಕೋಟ ಜಿಲ್ಲೆಗೆ ಆಡಳಿತ ಸುಧಾರಣ ದೃಷ್ಟಿಯಿಂದ ಗುಳೇದಗುಡ್ಡ, ಇಲಕಲ್ಲ ರಬಕವಿ ಹಾಗೂ ಬನಹಟ್ಟಿ ನಗರಗಳು ಹೊಸ ತಾಲೂಕುಗಳಾಗಿ ರಚನೆಗೊಂಡಿವೆ.

ಈ ಜಿಲ್ಲೆಯು ಐತಿಹಾಸಿಕ ಚರಿತ್ರೆಯನ್ನು ಒಳಗೊಂಡಿದೆ. ಪ್ರಮುಖವಾಗಿ ಚಾಲುಕ್ಯರ ಆಳ್ವಿಕೆಯ ಕಾಲದಲ್ಲಿ ರಾಜಧಾನಿಯಾಗಿದ್ದ ವಾತಾಪಿ ನಗರವು ಇಂದು ಬದಾಮಿ ನಗರವಾಗಿದೆ. ಇದು ಗುಹಾಂತರ ದೇವಾಲಯಗಳನ್ನು ಹಾಗೂ ಗುಡಿಗಳ ನಗರ ಎಂದು ಪ್ರಖ್ಯಾತಿ ಪಡೆದಿದೆ. ಚಾಲುಕ್ಯರ ಕಾಲದಲ್ಲಿ ಪ್ರಮುಖ ವ್ಯಾಪಾರ ಕೇಂದ್ರವಾಗಿರುವ ನಗರಗಳನ್ನು ನಾವು ನೋಡುತ್ತೇವೆ. ಇಲ್ಲಿ ಪ್ರಮುಖವಾಗಿ ಬದಾಮಿ, ಐಹೊಳೆ, ಪಟ್ಟದಕಲ್ಲು, ಮಹಾಕೂಟ, ಬನಶಂಕರಿ, ಹಾಗೂ ಶಿವಯೋಗ ಮಂದಿರವು ಐತಿಹಾಸಿಕ ಅಷ್ಟೇ ಅಲ್ಲದೆ ಪ್ರೇಕ್ಷಣಿಯ ಸ್ಥಳಗಳಾಗಿವೆ, ಕೂಡಲಸಂಗಮವು ಬಸವಣ್ಣನ ಚರಿತ್ರೆಯನ್ನು ಬಿಂಬಿಸುವ ಪ್ರೇಕ್ಷಣೀಯ ಸ್ಥಳವಾಗಿದೆ.

ಚಾಲುಕ್ಯರ ಕಾಲದಿಂದ ಹಿಡಿದು ಇಲ್ಲಿಯವರೆಗೂ ಇಲ್ಲಿ ಬಟ್ಟೆ ನೇಯ್ದು ಬಟ್ಟೆಯ ವ್ಯಾಪಾರ ಮಾಡುತ್ತಿದ್ದ ಬಗೆಗೆ ಮಾಹಿತಿ ದೊರೆಯುತ್ತದೆ. ಬಾಗಲಕೋಟ ಜಿಲ್ಲೆಯ ಪ್ರಮುಖ ನಗರಗಳಾದ ಇಲ್ಲಕಲ್, ಗುಳೇದಗುಡ್ಡ,

ರಬಕವಿ-ಬನಹಟ್ಟಿ, ಮಹಾಲಿಂಗಪೂರ, ಕೆರೂರು, ಕಮತಗಿ, ಅಮೀನಗಡ, ಬಾದಾಮಿ, ಹುನಗುಂದ, ಜಮಖಂಡಿ, ಮುಧೋಳ, ಸೂಳಿಭಾವಿ ಮುಂತಾದ ನಗರ ಹಾಗೂ ಗ್ರಾಮೀಣ ಪ್ರದೇಶದಲ್ಲಿ ನೇಕಾರ ಸಮುದಾಯ ನೇಕಾರಿಕೆಯನ್ನು ತಮ್ಮ ಪ್ರಮುಖ ವೃತ್ತಿಯನ್ನಾಗಿ ಮುಂದುವರೆಸಿಕೊಂಡು ಬಂದಿದ್ದಾರೆ. ಇಲ್ಲಿ ಪ್ರಮುಖವಾಗಿ ದೇವಾಂಗ, ಪಟ್ಟಸಾಲಿ ಮತ್ತು ಕುರುಹಿನ ಶೆಟ್ಟಿ ನೇಕಾರಿಕೆಯಲ್ಲಿ ತೊಡಗಿಕೊಂಡಿರುವುದು ಕಂಡುಬರುತ್ತದೆ. ಪದ್ಮಾಸಾಲಿ, ಸ್ವಕುಳಸಾಲಿ ಮತ್ತು ಹಟಗಾರ ಸಮುದಾಯದವರ ಪ್ರಮುಖ ವೃತ್ತಿ ನೇಕಾರಿಕೆ. ಅಲ್ಲದೆ ಲಿಂಗಾಯತ, ಮುಸ್ಲಿಂ ಹಾಗೂ ಇತರೆ ಸಮುದಾಯದವರು ಈ ವೃತ್ತಿಯನ್ನು ಅವಲಂಭಿಸಿರುವುದು ಕಂಡು ಬರುತ್ತಿದೆ.

ಈ ಅಧ್ಯಯನದ ವ್ಯಾಪ್ತಿ ಬಾಗಲಕೋಟ ಜಿಲ್ಲೆಯ ಬಾದಾಮಿ ಹಾಗೂ ಹುನಗುಂದ ತಾಲ್ಲೂಕುಗಳನ್ನು ಹೊಂದಿದೆ. ಇಲ್ಲಿ ಪ್ರಮುಖ ನೇಕಾರ ಸಮುದಾಯ ಹಾಗೂ ನೇಕಾರ ಸಹಕಾರಿ ಸಂಘಗಳು ಈ ತಾಲ್ಲೂಕುಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಿದ್ದು, ಇಲ್ಲಿ ಇಂದೂ ಕೈಮಗ್ಗಗಳನ್ನು ಬಳಸಿ ಬಟ್ಟೆ ನೇಯುವ ನೇಕಾರರು ಬಹು ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಇವರು ಪಾರಂಪರಿಕ ನೇಕಾರಿಕೆಯನ್ನು ನಂಬಿ ಜೀವನ ನಡೆಸುತ್ತಿದ್ದಾರೆ. ಇಲ್ಲಿ ಪ್ರಮುಖವಾಗಿ ಸಾಂಪ್ರದಾಯಕ ಉತ್ಪಾದನಾ ವಸ್ತುಗಳಾದ ಸೀರೆ, ಪಟಗಾ ಹಾಗೂ ಖಣಗಳನ್ನು ಉತ್ಪಾದಿಸುತ್ತಾರೆ. ಇವರ ಕುಟುಂಬದ ಸದಸ್ಯರೆಲ್ಲ ಈ ನೇಕಾರಿಕೆಯಲ್ಲಿ ತೊಡಗಿಕೊಂಡಿರುವುದನ್ನು ಗಮನಿಸಬಹುದು. ಆದ್ದರಿಂದ ಇಲ್ಲಿಯ ನೇಕಾರರ ವಿದ್ಯಮಾನಗಳು ಅವರ ಅಭಿವೃದ್ಧಿ ಮತ್ತು ಸಮಸ್ಯೆಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.

## ೧.೨ ಅಧ್ಯಯನದ ಸ್ವರೂಪ

ಬಾಗಲಕೋಟ ಜಿಲ್ಲೆಯ ಬಾದಾಮಿ ಹಾಗೂ ಹುನಗುಂದ ತಾಲೂಕಿನ ನೇಕಾರರ ಹಾಗೂ ನೇಕಾರ ಸಹಕಾರ ಸಂಘಗಳ ಸದಸ್ಯರ, ಸಿಬ್ಬಂದಿಗಳಿಂದ ನೇಕಾರಿಕೆಗೆ ಸಂಬಂಧಿಸಿದ ಸಾಮಗ್ರ ಮಾಹಿತಿಯನ್ನು ಸಂಗ್ರಹಿಲಾಗಿದೆ. ಇದು ಈ ಅಧ್ಯಯನದ ವ್ಯಾಪ್ತಿ ಹಾಗೂ ಮಿತಿಯೂ ಆಗಿದೆ. ಈ ಪ್ರದೇಶದ ವ್ಯಾಪ್ತಿಯ ಒಳಗಡೆ ನೆಲೆಸಿರುವ ನೇಕಾರರ ಸಂಘಗಳ ಸದಸ್ಯರೊಂದಿಗೆ ಭೇಟಿ ನೀಡುವ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

ಪ್ರಸ್ತುತ ಈ ಅಧ್ಯಯನ ಕ್ಷೇತ್ರಕಾರ್ಯವನ್ನು ಅವಲಂಭಿಸಿರುವಂತದ್ದು ಮತ್ತು ನೇಕಾರರ ಸಮುದಾಯದವರಿಗೆ ಮಾತ್ರ ಸೀಮಿತವಾಗಿದೆ. ಪ್ರಮುಖವಾಗಿ ಲಿಂಗ, ವಯಸ್ಸು, ಶಿಕ್ಷಣ, ವೃತ್ತಿಯ ವೈಶಾಲತೆ, ಪಾರಂಪರಿಕ ಉಡುಪು, ನೇಕಾರ ಸಹಕಾರ ಸಂಘಗಳ ಅಸ್ಥಿತ್ವದಿಂದಾದ ಬೆಳವಣಿಗೆಯ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ವಿಷಯಗಳನ್ನು ಕ್ರೋಢಿಕರಿಸಿ ಅಧ್ಯಯನ ಮಾಡಲಾಗಿದೆ. ಕ್ಷೇತ್ರಕಾರ್ಯದ ಮೂಲಕ ಈ ಸಮುದಾಯದಲ್ಲಿನ ಸಾಕ್ಷರತೆಯ ಪ್ರಮಾಣ, ಅವರ ಆರ್ಥಿಕ ಸಾಮರ್ಥ್ಯ, ಆರ್ಥಿಕ ಸಹಕಾರ, ಸಹಕಾರ ಸಂಘಗಳ ಸಹಕಾರ ಮುಂತಾದ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು, ಸಮುದಾಯದ ಹಿರಿಕಿರಿಯರಿಂದ, ಮಹಿಳೆಯರಿಂದ, ಅಧ್ಯಯನಕಾರರಿಂದ, ಸಹಕಾರಿ ಸಂಘಗಳ ಸದಸ್ಯರಿಂದ ಮತ್ತು ನೇಕಾರರ

ತಿಳುವಳಿಕೆದಾರರಿಂದ ಕುಶಲಕರ್ಮಿಗಳಿಂದ, ಕೌಟುಂಬಿಕ ಸಮೀಕ್ಷೆ, ಸಹಕಾರಿ ಸಂಘಗಳ ಸಮೀಕ್ಷೆಯ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ. ವಿಶೇಷ ವ್ಯಕ್ತಿಗಳ ಜೊತೆಯಲ್ಲಿ ಸಂಭಾಷಣೆ ಅಥವಾ ಸಂದರ್ಶನದ ಸಂದರ್ಭದಲ್ಲಿ ಧ್ವನಿ ಮುದ್ರಣ ಮತ್ತು ಛಾಯಾ ಚಿತ್ರಣ ಮಾಡಲಾಗಿದೆ.

**ಪ್ರಾಕ್ ಕಲ್ಪನೆ**

- ನೇಕಾರಿಕೆಯಲ್ಲಿ ತೊಡಗಿಕೊಂಡಿರುವ ನೇಕಾರ ಸಮುದಾಯಗಳ ಜೀವನವು ಸಾಮಾಜಿಕ ಹಾಗೂ ಆರ್ಥಿಕವಾಗಿ ಬಹಳ ಕುಂಠಿತವಾಗಿದೆ.
- ನೇಕಾರ ಸಮುದಾಯಗಳು ಸರಕಾರದ ಸವಲತ್ತುಗಳನ್ನು ಪಡೆದುಕೊಳ್ಳುವಲ್ಲಿ ವಿಫಲ ಹಾಗೂ ಹಿಂದುಳಿದಿರುವಿಕೆಯ ಪ್ರಮಾಣ ಹೆಚ್ಚಾಗಿದೆ.

**೧.೩ ಅಧ್ಯಯನದ ಉದ್ದೇಶಗಳು:**

೧. ನೇಕಾರ ಸಮುದಾಯಗಳ ವಿದ್ಯಮಾನಗಳು ಹಾಗೂ ಸ್ಥಿತಿಗತಿಗಳ ಕುರಿತು ಅರಿಯುವುದು.

೨. ನೇಕಾರ ಸಮುದಾಯಗಳ ಜನರ ವೈಯಕ್ತಿಕ ಹಾಗೂ ಭೌಗೋಳಿಕ ಪರಿಸ್ಥಿತಿಯನ್ನು ತಿಳಿಯುವುದು.

೩. ನೇಕಾರ ಸಮುದಾಯಗಳ ಅಭಿವೃದ್ಧಿಯಲ್ಲಿ ನೇಕಾರ ಸಹಕಾರಿ ಸಂಘಗಳ ಹಾಗೂ ಸರಕಾರಿ ಕಾರ್ಯಕ್ರಮಗಳ ಪಾತ್ರ

೪. ನೇಕಾರ ಸಮುದಾಯಗಳಲ್ಲಿಯ ಕೈಮಗ್ಗ ನೇಕಾರರ ಸ್ಥಿತಿ, ಮಾರುಕಟ್ಟೆ, ಉತ್ಪನ್ನಗಳ ಬೇಡಿಕೆಯ ಬಗ್ಗೆ ತಿಳಿವಳಿಕೆ ಪಡೆಯುವುದು.

**೧.೪ ಅಧ್ಯಯನದ ಪ್ರಾಮುಖ್ಯತೆ**

ನೇಕಾರ ಎಂದರೆ ಉಡಲು ತೊಡಲು ಬಯಸುವ ಬಟ್ಟೆ ಅಥವಾ ವಸ್ತ್ರವನ್ನು ನೇಯುವವರನ್ನು ನೇಕಾರರು ಎಂದು ಸಾಮಾನ್ಯವಾಗಿ ಹೇಳುತ್ತೇವೆ. ನೇಕಾರಿಕೆ ಕೃಷಿಯಷ್ಟೆ ಪ್ರಾಚೀನವಾದದ್ದು. ನೇಕಾರಿಕೆಯಿಂದ ಪ್ರಪಂಚದಲ್ಲಿ ಒಂದು ಬೃಹತ್ ಉದ್ದುಮೆಗಳು ಸ್ಥಾಪನೆಯಾಗಿವೆ. ಆದರೆ ಇಂದು ನೇಕಾರರು ನೇಕಾರಿಕೆಯನ್ನೆ ನಂಬಿ ನೇಕಾರಿಕೆಯಲ್ಲಿ ಜೀವನವನ್ನು ಬಿಡುವಂತ ನೇಕಾರನ ಬದುಕು ಶೋಚನೀಯವಾಗಿದೆ. ಒಂದು ಕಾಲದಲ್ಲಿ ನೇಕಾರರು ಉತ್ತಮ ಸ್ಥಿತಿಯಲ್ಲಿದ್ದರು. ಇಂದು ಹಲವಾರು ಸಮಸ್ಯೆಗಳಿಂದ ಅರೇ ಉದ್ಯೋಗಿಗಳಾಗಿ, ಸಂಘಟನಾರಹಿತರಾಗಿದ್ದಾರೆ. ಉತ್ಪಾದನೆಯಲ್ಲಿ ಆಧುನಿಕತೆ ಹಾಗೂ ತಾಂತ್ರಿಕತೆಯ ಪ್ರಭಾವದಿಂದ ಪಾರಂಪರಿಕ ವೃತ್ತಿಯಲ್ಲಿರುವ ನೇಕಾರರು ಆರ್ಥಿಕ, ಸಾಮಾಜಿಕ, ರಾಜಕೀಯ ಹಾಗೂ ಶೈಕ್ಷಣಿಕವಾಗಿ ಹಿಂದುಳಿಯುತ್ತಿದ್ದಾರೆ.

ನೇಕಾರರು ತಮ್ಮ ವೃತಿಯೊಂದಿಗೆ ಪ್ರಾದೇಶಿಕ ವ್ಯಾಪ್ತಿಯಲ್ಲಿಯ ಧಾರ್ಮಿಕ ಆಚರಣೆಗಳು, ಸಾಂಪ್ರದಾಯಕ ಕಲೆಗಳು, ಜಾನಪದ ಕಲೆಗಳನ್ನು ಉಳಿಸಿಕೊಂಡು ಬಂದಿರುವ ಸಮುದಾಯಗಳು, ಆಧುನಿಕತೆಯ ಪ್ರಭಾವದಿಂದ ಅವರಲ್ಲಿರುವ ಕಲೆಗಳು ನಶಿಸಿ ಹೋಗುವುದನ್ನು ನಾವು ನೋಡುತ್ತಿದ್ದೇವೆ.

ನೇಕಾರರ ಸಾಂಪ್ರದಾಯಕ ಕಲೆ, ಕೈಮಗ್ಗದ ಕೌಶಲ್ಯತೆ, ದೇಶಿಯ ಉತ್ಪನ್ನ, ನೈಸರ್ಗಿಕ ಉತ್ಪನ್ನಗಳನ್ನು ಉತ್ಪಾದಿಸುವ ನೇಕಾರರು ಇಂದು ಕಳೆಗುಂದಿದ್ದಾರೆ. ಕಲೆ ಆಧಾರಿತ ಸಾಂಪ್ರದಾಯಿಕ ನೇಕಾರಿಕೆ ಉಳಿಸುವುದರಲ್ಲಿ ನೇಕಾರ ಸಹಕಾರಿ ಸಂಘಗಳು ತಮ್ಮ ಕಾರ್ಯವನ್ನು ಉನ್ನತ ಮಟ್ಟದಲ್ಲಿ ಮಾಡಬೇಕಾಗಿರುವುದು ಅವಶ್ಯಕವಾಗಿದೆ. ನೇಕಾರ ಹಾಗೂ ಸರಕಾರಗಳ ನಡುವೆ ಸೇತುವೆಯಾಗಿ ಕಾರ್ಯ ಮಾಡುತ್ತಿರುವ ನೇಕಾರ ಸಹಕಾರಿ ಸಂಘಗಳ ಬಗ್ಗೆ ಅಧ್ಯಯನದ ಅವಶ್ಯಕತೆಯಿದೆ, ಸರಕಾರದ ಕಾರ್ಯಕ್ರಮಗಳ ತಿಳುವಳಿಕೆಯನ್ನು ಪಡೆಯುವ ಅವಶ್ಯಕವಿದೆ. ಹಲವಾರು ಪ್ರಾದೇಶಿಕ ಕುಶಲತೆ ಹಾಗೂ ನೈಸರ್ಗಿಕ ಉತ್ಪನ್ನಗಳಿಗೆ ಬೇಡಿಕೆಯಲ್ಲಿನ ಕೊರತೆಯನ್ನು ತಿಳಿಯಬೇಕಾಗಿದೆ. ನೇಕಾರ ಸಮುದಾಯಗಳ ವಾಸ್ಥವ ಪರಿಸ್ಥಿತಿಯ ಬಗ್ಗೆ ನಿಖರವಾದ ತಿಳುವಳಿಕೆಯ ಅವಶ್ಯಕತೆ ಇದೆ. ನೇಕಾರರ ವಿದ್ಯಮಾನಗಳನ್ನು ನೇಕಾರ ಸಮುದಾಯಗಳಿಗೆ ತಲುಪಿಸುವಂತಾಗಬೇಕಾಗಿದೆ. ಬಾಗಲಕೋಟೆ ಜಿಲ್ಲೆಯ ನೇಕಾರರ ಬದುಕು, ನೇಕಾರಿಕೆ, ನೇಕಾರರ ಸಂಘಟನಾ ವ್ಯವಸ್ಥೆಯನ್ನು ಹಾಗೂ ಸರಕಾರದ ಕಾರ್ಯಕ್ರಮಗಳ ಕುರಿತು ನೇಕಾರ ಸಮುದಾಯದವರಿಗೆ ಅನುಕೂಲಕರವಾದಂತ ಒಂದು ಅಧ್ಯಯನ ಅವಶ್ಯಕವಾಗದೆ. ಆದ್ದರಿಂದ ಬಾದಾಮಿ ತಾಲ್ಲೂಕಿನ ಪ್ರಮುಖ ನಗರ ಗುಳೇದಗುಡ್ಡ ಹಾಗೂ ಹುನಗುಂದ ತಾಲೂಕಿನ ಪ್ರಮುಖ ಪಟ್ಟಣ ಕಮತಗಿ, ಅಮೀನಗಡ ಹಾಗೂ ಸೂಳಿಭಾವಿ. ಈ ವ್ಯಾಪ್ತಿಯಲ್ಲಿಯ ನೇಕಾರ ಸಮುದಾಯಗಳು ನೇಕಾರ ಸಹಕಾರಿ ಸಂಘಗಳ ಅಧೀನದಲ್ಲಿ ತಮ್ಮ ನೇಕಾರಿಕೆಯನ್ನು ಮುಂದುವರೆಸಿವೆ. ನೇಕಾರ ಕುಟುಂಬಗಳನ್ನು ಅವರ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಹಾಗೂ ಇತರೆ ಕ್ಷೇತ್ರಗಳಲ್ಲಿ ಅವರು ಹೇಗೆ ಅಭಿವೃದ್ಧಿಯ ಕಡೆಗೆ ವಾಲುತ್ತಿದ್ದಾರೆ ಎಂಬುದನ್ನು ಕುರಿತು ಅಧ್ಯಯನ ಮಾಡುವುದು ಮಹತ್ವದ ವಿಷಯವಾಗಿದೆ. ಹಾಗೂ ಈ ಅಧ್ಯಯನವು ಪ್ರಮುಖವಾಗಿ ಈ ಪ್ರದೇಶದ ಜನರ ಸಾಂಪ್ರದಾಯಕ ನೇಕಾರಿಕೆ, ಸಾಂಪ್ರದಾಯಿಕ ಉತ್ಪನ್ನಗಳನ್ನೇ ಇಂದಿಗೂ ಮುಂದುವರೆಸಿರುವುದು ಕಂಡುಬಂದಿದೆ.

**೧.೫ ಅಧ್ಯಯನದ ವಿಧಾನ**

ಪ್ರಸ್ತುತ ಈ ಅಧ್ಯಯನ "ನೇಕಾರರ ಅಭಿವೃದ್ಧಿಯಲ್ಲಿ ನೇಕಾರ ಸಹಕಾರಿ ಸಂಘಗಳ ಪಾತ್ರ". ಎಂಬ ಶೀರ್ಷಿಕೆಯ ಅಡಿಯಲ್ಲಿ ಒಟ್ಟು ಐದು ಅಧ್ಯಾಯಗಳನ್ನು ರಚಿಸಲಾಗಿದೆ. ಇದರಲ್ಲಿ ಒಂದನೆಯ ಅಧ್ಯಾಯದಲ್ಲಿ ಅಧ್ಯಯನದ ಸ್ವರೂಪ, ಉದ್ದೇಶ, ಪ್ರಾಮುಖ್ಯತೆ, ವ್ಯಾಪ್ತಿ ಹಾಗೂ ವಿಷಯಕ್ಕೆ ಸಂಬಂಧಿಸಿದ ಅಧ್ಯಯನಗಳ ಸಮೀಕ್ಷೆಯನ್ನು ಮಾಡಿದ್ದೆವೆ.

ಎರಡನೇ ಅಧ್ಯಾಯದಲ್ಲಿ ನೇಕಾರ ವೃತ್ತಿ, ನೇಕಾರ ಸಮುದಾಯಗಳು, ಹಿನ್ನೆಲೆ, ನೇಕಾರರ ಬದುಕಿನ ಸ್ಥಿತ್ಯಂತರ, ಪಾರಂಪರಿಕ ಉತ್ಪನ್ನ ಹಾಗೂ ಆಧುನಿಕ ಉತ್ಪನ್ನಗಳು, ಕೈಮಗ್ಗದಿಂದ ವಿದ್ಯುತ್ ಮಗ್ಗಗಳ ವರೆಗಿನ ಸ್ಥಾನಪಲ್ಲಟ, ನೇಕಾರರ ಸ್ಥಿತಿ. ಎಂಬ ವಿಷಯಗಳು ಚರ್ಚಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ನೇಕಾರ ಸಹಕಾರಿ ಸಂಘಗಳ ಗುರಿ, ಉದ್ದೇಶಗಳು, ಸರಕಾರದ ಜವಳಿ ನೀತಿ, ಸರಕಾರದ ಕಾರ್ಯಕ್ರಮಗಳು ಹಾಗೂ ನೇಕಾರ ಸಹಕಾರ ಸಂಘಗಳ ಸ್ಥಿತಿಗಳನ್ನು ಕುರಿತು ಚರ್ಚಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ನೇಕಾರಿಕೆ ವೃತ್ತಿ ಹಾಗೂ ನೇಕಾರರ ಅಭಿವೃದ್ಧಿಯಲ್ಲಿಯ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ಸಮಸ್ಯೆಗಳನ್ನು ಚರ್ಚಿಸಲಾಗಿದೆ.

ಐದನೇ ಅಧ್ಯಾಯ ಸಮಾರೋಪದಲ್ಲಿ ನೇಕಾರರ ಅಧ್ಯಯನದಿಂದ ಕಂಡುಬಂದ ಫಲಿತಗಳು ಪ್ರಮುಖ ಸಮಸ್ಯೆಗಳು ಪರಿಹಾರೊಪಾಯಗಳನ್ನು ನೀಡಲಾಗಿದೆ. ಅನುಬಂಧದಲ್ಲಿ ಗ್ರಂಥಸೂಚಿ ತಿಳುವಳಿಕೆ ನೀಡಿದವರ ವಿವರ, ಅಧ್ಯಯನದ ವ್ಯಾಪ್ತಿಗೆ ಸಂಬಂಧಿಸಿದಂತ ನಕ್ಷೆಗಳು, ಜನಸಂಖ್ಯೆಗೆ ಸಂಬಂಧಿಸಿದ ಮಾಹಿತಿ ನೀಡಲಾಗಿದೆ.

ಸಮಾಜ ವಿಜ್ಞಾನಗಳ ಸಂಶೋಧನೆ ಕ್ಷೇತ್ರ ಬಹಳ ವಿಶಾಲವಾದುದರಿಂದ ನನ್ನ ಸಂಶೋಧನೆಗೆ ಮಿತಿಯಿರುವ ಸಮಯದಲ್ಲಿ ನನ್ನ ಅಧ್ಯಯನದ ವ್ಯಾಪ್ತಿಯ ಒಳಗಡೆ ವ್ಯವಸ್ಥಿತವಾಗಿ ನ್ಯಾಯಯುತ ಕ್ಷೇತ್ರಕಾರ್ಯ ಮಾಡುವುದು. ಈ ಸಂಶೋಧನೆಗೆ ಬಳಸಿಕೊಳ್ಳಬಹುದಾದ ಸಂಶೋಧನಾ ತಾಂತ್ರಿಕ ಸಾಧನಗಳನ್ನು ಹಾಗೂ ವಿಧಾನಗಳನ್ನು ನಾವು ಈ ಕೆಳಗಿನ ರೀತಿಯಲ್ಲಿ ಬಳಸಲು ಯೋಜನೆ ಮಾಡಲಾಗಿದೆ.

**ಪ್ರಶ್ನಾವಳಿ:** ಸಮುದಾಯದ ಅಧ್ಯಯನದಲ್ಲಿ ಮಾಹಿತಿಯನ್ನು ತಿಳಿದುಕೊಳ್ಳಲು ಪ್ರಮುಖವಾಗಿ ಪ್ರಶ್ನಾವಳಿ ಬೇಕೆ ಬೇಕು. ಪ್ರಶ್ನಾವಳಿಯಿಂದ ಸೂಕ್ತವಾದ ಮಾಹಿತಿಯನ್ನು ಪಡೆದುಕೊಳ್ಳಲು ಸಹಾಯವಾಗುತ್ತದೆ. ಆದ್ದರಿಂದ ನೇಕಾರರ ನೇಕಾರರ ಸಹಕಾರಿ ಸಂಘಗಳ ಪ್ರತಿನಿಧಿಗಳು ಹಾಗೂ ವ್ಯವಸ್ಥಾಪಕರಿಂದ ಮಾಹಿತಿ ಸಂಗ್ರಹಿಸಲು ಪ್ರಶ್ನಾವಳಿ ಸಿದ್ಧಪಡಿಸಿಕೊಳ್ಳಲಾಯಿತು. ನಂತರ ಪ್ರಶ್ನೆಗಳಿಗೆ ಸಂಬಂಧಿಸಿದಂತೆ ದಾಖಲೆಯನ್ನು ಕ್ರೂಢೀಕರಿಸಿ ಪ್ರಬಂಧದಲ್ಲಿ ನಮೂದಿಸಲಾಗಿದೆ. ಪ್ರಶ್ನೆಗಳನ್ನು ಸಂದರ್ಭಕನುಸಾರವಾಗಿ ಸೂಕ್ತ ಪ್ರಶ್ನೆಗಳನ್ನು ಕೇಳಿ ವಿಷಯವನ್ನು ತಿಳುವಳಿಕೆದಾರರಿಂದ ಸಂಗ್ರಹಿಸಿ ಪ್ರಬಂಧದಲ್ಲಿ ವಿಶ್ಲೇಷಣೆ ಮಾಡಲಾಗಿದೆ.

**ಸಂದರ್ಶನ:** ಈ ವಿಧಾನವು ಸಂಶೋಧನೆಯಲ್ಲಿ ಪ್ರಮುಖ ಸಾಧನವಾಗಿದೆ. ಸಂದರ್ಶನದ ಮುಖೇನ ಸಮುದಾಯದಲ್ಲಿರುವ ವಿವಿಧ ಮುಖಂಡರ ಹಾಗೂ ಪ್ರಮುಖರ ಜೊತೆಯಲ್ಲಿ ವಿಷಯವನ್ನು ತಿಳಿದುಕೊಂಡು, ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ನೇಕಾರ ಸಮುದಾಯದ ಹಿರಿಯರೊಂದಿಗೆ ಸಂದರ್ಶನ ನಡೆಸಲಾಗಿದೆ. ನೇಕಾರರು ಯುವಕರು, ಮಹಿಳೆಯರು ಹಾಗೂ ಆ ವೃತ್ತಿಯಲ್ಲಿ ನಿರತರಾದವರೊಂದಿಗೆ ಚರ್ಚಿಸಿ ವಿಷಯ ಸಂಗ್ರಹಣೆ ಮಾಡಗಿದೆ. ನೇಕಾರರನ್ನು ಅಧ್ಯಯನ ಮಾಡಿದ ವಿದ್ವಾಂಸರ ಜೊತೆ ಸಂದರ್ಶನ ಮಾಡಲಾಗಿದೆ. ನೇಕಾರ ಸಹಕಾರಿ ಸಂಘಗಳ ಸದಸ್ಯರ, ಪ್ರತಿನಿಧಿಗಳ, ಮುಖ್ಯಸ್ಥರ ಹಾಗೂ ಸಮುದಾಯಗಳ ಹಿರಿ ಜನರೊಂದಿಗೆ ಮತ್ತು ಸರಕಾರಿ ಅಧಿಕಾರಿಗಳ ಜೊತೆಯಲ್ಲಿ ಸಂದರ್ಶನ ನಡೆಸಿ ನೇಕಾರರ ಸಮಸ್ಯಗಳಿಗೆ ಪರಿಹಾರಗಳನ್ನು ಕುರಿತು ಚರ್ಚಿಸಿ ಪ್ರಬಂಧದಲ್ಲಿ ವಿಶ್ಲೇಷಣೆ ಮಾಡಲಾಗಿದೆ.

**ಅನುಷಂಘಿಕ ಆಕರ:** ಅಧ್ಯಯನಕ್ಕೆ ಅವಶ್ಯವಿರುವ ಗ್ರಂಥಗಳನ್ನು, ಪತ್ರಿಕೆಯಲ್ಲಿ ಪ್ರಕಟವಾಗಿರುವ ಲೇಖನಗಳನ್ನು, ಸರಕಾರಿ ಇಲಾಖೆಗಳ ಪ್ರಕಟಣೆಗಳು, ಇತರೆ ಮಾಸಪತ್ರಿಕೆಗಳಲ್ಲಿ ವಿಷಯಕ್ಕೆ ಸಂಬಂಧಿಸಿದ ಹಾಗೂ ನೇಕಾರರಿಗೆ ಸಂಬಂಧಿಸಿದ ಅಂಕಿಅಂಶಗಳನ್ನು ಈ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

**ಅವಲೋಕನ ವಿಧಾನ:** ಈ ನೇಕಾರರ ಸಮುದಾಯಗಳಲ್ಲಿಯ ಪ್ರಮುಖ ಆಚರಣೆ ಸಂಪ್ರದಾಯಗಳನ್ನು ಅವರ ಅನುಮತಿಯನ್ನು ಪಡೆದುಕೊಂಡು ಅವರೊಂದಿಗೆ ಭಾಗವಹಿಸಿ ವಿಷಯ ಸಂಗ್ರಹಿಸಲಾಗಿದೆ.

**ಧ್ವನಿ ಮುದ್ರಣ, ಛಾಯಾಚಿತ್ರ ಹಾಗೂ ಛಾಯಾಗ್ರಹಣ ಸಾಧನಗಳ ಬಳಕೆ:** ನೇಕಾರರ ವೃತ್ತಿಯ ವಾಸ್ತವತೆಯನ್ನು ಅರಿಯಲು ಮುಖ್ಯವಾಗಿ ಆಧುನಿಕ ಸಾಧನಗಳು ಅವಶ್ಯಕವಾಗಿವೆ. ಈ ಸಮುದಾಯದ ಅಧ್ಯಯನದಲ್ಲಿಯ ವೃತ್ತಿ, ಬದುಕಿನ ಚಿತ್ರಣ, ಅವರ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ಧಾರ್ಮಿಕ ಸ್ಥಿತಿಗತಗಳನ್ನು ಸೆರೆಹಿಡಿಯಲು ಧ್ವನಿ ಮುದ್ರಣ, ಛಾಯಾಚಿತ್ರಣ ಮಾಡಲಾಗಿದೆ.

**೧.೬ ಇದುವರೆಗಿನ ಅಧ್ಯಯನಗಳ ಸಮೀಕ್ಷೆ**

ನೇಕಾರ ಸಮುದಾಯಗಳು ಹಾಗೂ ನೇಕಾರ ವೃತ್ತಿಯ ಆಧಾರದಲ್ಲಿ ಹಲವಾರು ಸಂಶೋಧನೆಗಳು ನಮ್ಮ ದೇಶದಲ್ಲಿ ನಡೆದಿವೆ. ಈ ಎಲ್ಲ ಅಧ್ಯಯನಗಳು ಪ್ರಮುಖವಾಗಿ ನೇಕಾರರ ಸಾಮಾಜಿಕ, ಆರ್ಥಿಕ ಸಮಸ್ಯೆಗಳ ಮೇಲೆ ಬೆಳಕು ಚಲ್ಲುತ್ತವೆ. ಅವರ ಉತ್ಪನ್ನಗಳ ಮಾರಾಟ, ಉತ್ಪಾದನೆ, ಸಾಂಪ್ರದಾಯಕ ಬಟ್ಟೆ ಉತ್ಪಾದನೆ, ಸಣ್ಣ ಕೈಗಾರಿಕೆಗಳ ಅಸ್ಥಿತ್ವದಲ್ಲಿ ಉತ್ಪಾದನೆ ಹೀಗೆ ಹಲವಾರು ರೀತಿಯಲ್ಲಿ ಪ್ರಮುಖವಾಗಿ ನಾವು ವಿಮರ್ಶಿಸಲಾಗಿದೆ.

೧. **ದೇಸಾಯಿಯವರು "ಗೃಹ ಕೈಗಾರಿಕೆ ಮತ್ತು ಹತ್ತಿ ಬಟ್ಟೆ ಕೈಗಾರಿಕೆಗಳ ಬೆಳವಣಿಗೆ" ೧೯೭೮,** ಇವರು ತಮ್ಮ ಅಧ್ಯಯನದಲ್ಲಿ ಗೃಹ ಕೈಗಾರಿಕೆ ಮತ್ತು ಹತ್ತಿ ಬಟ್ಟೆ ಕೈಗಾರಿಕೆಯ ಬೆಳವಣಿಗೆಯ ಕುರಿತು ಚರ್ಚಿಸಿದ್ದಾರೆ. ಭಾರತದಲ್ಲಿ ಗೃಹ ಕೈಗಾರಿಕೆಯಲ್ಲಿ ನೇಕಾರಿಕೆಯು ಸಂಪೂರ್ಣ ಉದ್ಯೋಗ ನೀಡುವ ಭರವಸೆಯೊಂದಿಗೆ ಗ್ರಾಮೀಣ ಭಾರತದಲ್ಲಿ ನೇಕಾರರಿಗೆ ಗ್ರಾಮೀಣ ಉದ್ಯೋಗ ನೀಡುತ್ತದೆ. ಗ್ರಾಮೀಣ ಸಮುದಾಯಗಳಲ್ಲಿ ಸಾಂಪ್ರದಾಯಿಕ ನೇಕಾರಿಕೆಯ ಉತ್ಪನ್ನಗಳು ಯೋಗ್ಯಸ್ಥಾನಮಾನ ಮತ್ತು ಗೌರವ ಕೊಟ್ಟಿರುತ್ತದೆ.

೨. **ದಾಸ್ ಮತ್ತು ಪಾರ್ತ "ಕೈಮಗ್ಗ ಮತ್ತು ವಿದ್ಯುತ್ ಚಾಲಿತ ಮಗ್ಗದ ನೇಕಾರರ ಸಮಸ್ಯೆಗಳು" ೧೯೮೬** ಈ ಅಧ್ಯಯನದಲ್ಲಿ ಓರಿಸ್ಸಾ ಮತ್ತು ಆಸ್ಸಾಂ ರಾಜ್ಯಗಳಲ್ಲಿ ಈ ಉದ್ಯಮದ ಕಷ್ಟಗಳು ಮತ್ತು ಅವರು ಎದುರಿಸುತ್ತಿರುವ ಸಮಸ್ಯೆಗಳ ಕುರಿತು ಗಮನ ಸೆಳೆದಿದ್ದಾರೆ. ಕೈಮಗ್ಗಗಳು ವಿದ್ಯುತ್ ಚಾಲಿತ ಮಗ್ಗಗಳಾಗಿ ಪರಿವರ್ತಣೆಯಾದ ರೀತಿ ಕುರಿತು ಮತ್ತು ಈ ನೇಕಾರಿಕೆ ಕಲೆಯ ಸಾಮಾನ್ಯ ಸಮಸ್ಯೆಗಳ ಕುರಿತು ವಿಶ್ಲೇಷಣೆ ಮಾಡಿದ್ದಾರೆ. ಅದೇ ರೀತಿ ದೊಡ್ಡ ಪ್ರಮಾಣದ ಬಟ್ಟೆ ಕೈಗಾರಿಕೆಗಳೊಂದಿಗೆ ಅನೇಕ ಸ್ಪರ್ಧೆಗಳನ್ನು ಎದುರಿಸಿದ ಕುರಿತು ಮತ್ತು ಉತ್ಪಾದನೆಯಲ್ಲಾದ ಬದಲಾವಣೆಗಳ ಕುರಿತು ಅವರು ಚರ್ಚಿಸಿದ್ದಾರೆ. ಇವರು ಕಂಡಂತೆ ಈ ಕಲಾತ್ಮಕ ಬಟ್ಟೆಗಳಾದ ಖಣಗಳು ವಿನಾಶದ ಅಂಚಿನಲ್ಲಿವೆ. ಈ ಗೃಹ ಕೈಗಾರಿಕೆಯನ್ನು ಉಳಿಸಲು ಸಮಯಕ್ಕೆ ಸರಿಯಾಗಿ, ಕಾಲಕ್ಕೆತಕ್ಕಂತೆ ಉತ್ಪಾದನೆಯಲ್ಲಿ ಹೊಸ ತಂತ್ರಗಳನ್ನು ಪರಿಚಯಿಸುವಂತಿರಬೇಕು.

೩. **ಪ್ರಸಾದ ರವರ ಪ್ರಕಾರ "ಹತ್ತಿ ಬಟ್ಟೆ ಕೈಮಗ್ಗ ಉದ್ಯಮದ ಸಮಸ್ಯೆಗಳು"** ಇವರು ಪ್ರಮುಖವಾಗಿ ವಿಷಯದ ಶೀರ್ಷಿಕೆ ಹೇಳುವಂತೆ ಹತ್ತಿ ಬಟ್ಟೆಯ ಕೈಮಗ್ಗ ಉದ್ಯಮದ ಸಮಸ್ಯಗಳ ಬಗ್ಗೆ ವಿಶ್ಲೇಷಿಸಿದ್ದಾರೆ. ಶಾಂತ ಚಿತ್ತದಿಂದ ಕಾಯಕವೇ ಕೈಲಾಸ ಎಂಬುವಂತೆ ದುಡಿಯುತ್ತಾ ಜೀವನವನ್ನು ಶ್ರಮವಹಿಸಿ ದುಡಿಯುವ ವರ್ಗಗಳು ನೇಕಾರ ಸಮುದಾಯಗಳು. ಕೌಶಲ್ಯಭರಿತ ವೃತ್ತಿಯ ಜ್ಞಾನವನ್ನು ಪಡೆದುಕೊಂಡ

ನೇಕಾರರು, ಈಸ್ಟ್ ಇಂಡಿಯಾ ಕಂಪನಿಯು ಹಲವಾರು ರೀತಿಯಲ್ಲಿ ತೆರಿಗೆಗಳನ್ನು ಹಾಕುವುದರ ಮುಖೇನ ನೇಕಾರರಿಗೆ ಹಿಂಸೆಯನ್ನು ಮಾಡುತ್ತಿದ್ದರು. ಆದ್ದರಿಂದ ಕೈಮಗ್ಗ ಉದ್ಯಮವು ನಸಿಸುತ್ತಾ ಸಾಗುತ್ತಿತ್ತು ಎಂಬುದನ್ನು ತಿಳಿಸಿದ್ದಾರೆ. ವಿಶೇಷವಾಗಿ ನೇಕಾರರ ಅತಂತ್ರ ಆರ್ಥಿಕ ಸ್ಥಿತಿಗತಗಳ ಕುರಿತು ಬೆಳಕುಚೆಲ್ಲಿದ್ದಾರೆ.

೪. **ದಿ ರಿರ್ಪೋಟ ಆಫ್ ದಿ ಟೆಕ್ಸಟೈಲ್ಸ ಎನ್‌ಕ್ವಾಯಿರಿ ಕಮಿಟಿ, ಮಿನಿಸ್ಟರಿ ಆಫ್ ಗವರ್ನಮೆಂಟ್ ಆಫ್ ಇಂಡಿಯಾ, ೧೯೪೪.**

ಭಾರತ ಸರಕಾರವು ೧೯೪೨ರಲ್ಲಿ ಶ್ರೀ ನಿತ್ಯಾನಂದ ಕೊನುಂಗೋ ಅವರ ನೈತೃತ್ವದಲ್ಲಿ ಕೈಮಗ್ಗ ಉದ್ದಿಮೆ ವಿಚಾರಣಾ ಸಮಿತಿಯನ್ನು ನೇಮಿಸಿತು ಈ ವರದಿಯಲ್ಲಿ ಕೈಮಗ್ಗ ಸೃಷ್ಟಿಸಿದ ಉದ್ಯೋಗ ಅವಕಾಶಗಳನ್ನು ಗಣನೆಗೆ ತೆಗೆದುಕೊಂಡರು. ಕೈಮಗ್ಗ ತಾಂತ್ರಿಕ ವಸ್ತ್ರೋದ್ಯಮಗಳಿಂದ ಇಪ್ಪತ್ತು ಪಟ್ಟು ಹೆಚ್ಚು ಉದ್ಯೋಗ ಸೃಷ್ಟಿಸಿರುವುದನ್ನು ಈ ಸಮಿತಿಯು ಪರಿಗಣಿಸಿತು, ಆದ್ದರಿಂದ ಕೈಮಗ್ಗ ಉದ್ಯಮದ ಬೇರುಗಳನ್ನು ಬಲಪಡಿಸಲು ಇನ್ನು ಹೆಚ್ಚಿನ ಪ್ರೊತ್ಸಾಹದಾಯಕ ಕಾರ್ಯಕ್ರಮಗಳನ್ನು ಶಿಫಾರಸ್ಸು ಮಾಡುವುದರ ಮೂಲಕ ಸರ್ಕಾರಕ್ಕೆ ವರದಿ ಒಪ್ಪಿಸಿದೆ.

೫. **ಎನ್.ಸಿ.ಎ.ಇ.ಆರ್., ಸರ್ವೆ ಆಫ್ ದಿ ಹ್ಯಾಂಡಲೂಮ್ ಇಂಡಸ್ಟ್ರೀಸ್ ಇನ್ ಕರ್ನಾಟಕ ಆಂಡ್ ಸೊಲ್ಲಾಪುರ, ಏಷಿಯಾ ಪಬ್ಲಿಷಿಂಗ್ ಹೌಸ್, ಬಾಂಬೆ, ೧೯೫೯.**

ಅಖಿಲ ಭಾರತ ಕೈಮಗ್ಗ ನಿಗಮ ಹಾಗೂ ವ್ಯವಹಾರ ಮಂತ್ರಾಲಯ ಜಂಟಿಯಾಗಿ ಕೈಗೊಂಡ ಸಮೀಕ್ಷೆ. ಇಲ್ಲಿ ಪ್ರಮುಖವಾಗಿ ಕರ್ನಾಟಕದ ಕೈಮಗ್ಗ ಕೇಂದ್ರಿಕೃತ ಜಿಲ್ಲೆಗಳಾದ ಬಿಜಾಪೂರ, ಧಾರವಾಡ, ಬೆಳಗಾವಿ ಮತ್ತು ಸೋಲ್ಲಾಪುರ ಪ್ರದೇಶಗಳು ಕೈಮಗ್ಗ ಉದ್ದಿಮೆಯ ಆರ್ಥಿಕ ಸ್ಥಿತಿಗತಿಗಳ ಕುರಿತು ಅಧ್ಯಯನ ನಡೆಸಲಾಗಿದೆ. ಕೈಮಗ್ಗ ಬೆಳವಣಿಗೆಗೆ ಪೂರಕವಾಗಿ ಸರ್ಕಾರ ತೆಗೆದುಕೋಳ್ಳಬೇಕಾದ ಸಲಹೆ ಸೂಚನೆಗಳನ್ನು ಕೊಡಲಾಗಿದೆ.

೬. **ಇಂಟರ್‌ನ್ಯಾಷನಲ್ ಲೇಬರ್ ಆಫೀಸ್, ಹ್ಯಾಂಡಲೂಮ್, ವೀವ್ವಿಂಗ್ ಇನ್ ಇಂಡಿಯಾ, ನ್ಯೂಡೆಲ್ಲಿ. ೧೯೫೯.**

ಇದು ಮದ್ರಾಸ್ ಪ್ರಾಂತ್ಯದ ನೇಕಾರರಿಗೆ ಸಂಬಂಧಿಸಿದಂತೆ ಕೈಗೊಂಡ ಅಧ್ಯಯನವಾಗಿದೆ. ನೇಕಾರಿಕೆ ವೃತ್ತಿಯಲ್ಲಿ ನಿರತರಾಗಿರುವ ಕಾರ್ಮಿಕರ ಸ್ಥಿತಿಗತಿಗಳನ್ನು ತಿಳಿಯಲಾಗಿದೆ. ಭಾರತದಲ್ಲಿ ಸಾಂಸ್ಕೃತಿಯ ಒಂದು ಪ್ರತೀಕವಾಗಿರುವ ಕೈಮಗ್ಗ ಉದ್ಯಮಿಯು, ಕೈಗಾರಿಕೆಯ ಕ್ರಾಂತಿಯ ಹಿನ್ನೆಲೆಯಲ್ಲಿ ಹಿಂದುಳಿದಿರುವುದು, ಗ್ರಾಮೀಣ ಜನರ ಮೂಲ ಕುಲಕಸುಬಾಗಿರುವ ನೇಕಾರಿಕೆ ಹಾಗೂ ಅವರ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ಕುರಿತಾದ ಅಧ್ಯಯನವಾಗಿದೆ.

೭. ವಿ.ಬಿ.ಅಂಗಡಿ ಎಕನಾಮಿಕ್ಸ್ ಆಫ್ ಹ್ಯಾಂಡಲೂಮ್ ಆಂಡ್ ಪವರಲೂಮ್ ಇಂಡ್ರಸ್ಟ್ರೀಜ್ ಇನ್ ಕರ್ನಾಟಕ ಸ್ಟೇಟ್ ವಿಥ್ ರೇಫರೆನ್ಸ್ ಟು ಬಿಜಾಪೂರ ಡಿಸ್ಟ್ರಕ್ಟ್. ಪಿಎಚ್.ಡಿ., ಪ್ರಬಂಧ, ಕರ್ನಾಟಕ ವಿಶ್ವ ವಿದ್ಯಾಲಯ ಧಾರವಾಡ ೧೯೭೬

ಈ ಪಿಎಚ್.ಡಿ. ಪ್ರಬಂಧದಲ್ಲಿ ವಿ.ಬಿ. ಅಂಗಡಿಯವರು ವಿಜಾಪೂರ ಜಿಲ್ಲೆಯ ಕೈಮಗ್ಗ ಹಾಗೂ ವಿದ್ಯುತ್ ಚಾಲಿತ ಮಗ್ಗಗಳ ಪೈಪೋಟಿಯನ್ನು ಎದುರಿಸುವಲ್ಲಿ ಸೋತಿದೆ. ಕೈಮಗ್ಗದ ಉತ್ಪನ್ನಗಳಲ್ಲಿ ಆಧುನಿಕತೆಗೆ ಮಾರುಹೊದ ಜನ ಬಯಸುವ ಆಕರ್ಷಕ ವಿನ್ಯಾಸಗಳು ಇರುವುದಿಲ್ಲ. ಆದ್ದರಿಂದ ಇವು ಸ್ಥಳೀಯ ಮಾರುಕಟ್ಟೆಯನ್ನೆ ಅವಲಂಬಿಸಬೇಕಾಗುತ್ತದೆ. ಈ ಕೈಮಗ್ಗದ ಉತ್ಪನ್ನಗಳಿಗೆ ವಿದ್ಯುತ್‌ಚಾಲಿತ ಉತ್ಪನ್ನಗಳಂತೆ ಬೇಡಿಕೆ ಹೆಚ್ಚಿಸಿಕೊಳ್ಳವಲ್ಲಿ, ಗುಣಮಟ್ಟವನ್ನು ಕಾಪಾಡಿಕೊಳ್ಳುವಲ್ಲಿ ಹಾಗೂ ಬೆಲೆಯ ಸ್ಥಿರತೆಯನ್ನು ತರುವಲ್ಲಿ ಆಸಕ್ತಿ ತೋರಿಸುತ್ತಿಲ್ಲ ಎಂಬವುದನ್ನು ಹೇಳುತ್ತಾ ಮಾರುಕಟ್ಟೆಯನ್ನು ವಿಸ್ತರಿಸಿ ವ್ಯವಸ್ಥಿತಗೋಳಿಸಿ ನೇಕಾರಿಕೆ ಸೂಕ್ತ ತರಬೇತಿ ನೀಡುವುದು ಇತ್ಯಾದಿಗಳಿಂದ ಇಲ್ಲಿನ ಕೈಮಗ್ಗ ಉದ್ಯಮ ಉಳಿಸಬಹುದೆಂದು ವಿಶ್ಲೇಷಣೆ ಮಾಡಿದ್ದಾರೆ.

೮. ಈರಣ್ಣ ಹಟ್ಟಿ, ಕೈಮಗ್ಗ ಉದ್ಯಮಿ ಒಂದು ಸಮಸ್ಯೆಯೇ? ಐ.ಬಿ.ಎಚ್.ಎಸ್., ಪ್ರಕಾಶನ ಬನಹಟ್ಟಿ, ೧೯೮೦.

ಈರಣ್ಣ ಹಟ್ಟಿಯವರ ಕೈಮಗ್ಗ ಉದ್ದಿಮೆ ಒಂದು ಸಮಸ್ಯೆಯೇ? ಎಂಬ ಪುಸ್ತಕದಲ್ಲಿ ಕೈಮಗ್ಗ ಉದ್ದಿಮೆಯ ಬಗ್ಗೆ, ಕೈಮಗ್ಗದ ಸಮಸ್ಯೆಗಳ ಬಗ್ಗೆ ಆಳವಾದ ಅಧ್ಯಯನ ಮಾಡಿದ್ದಾರೆ. ಭಾರತದ ಕೈಮಗ್ಗ ಉದ್ದಿಮೆಯ ಪ್ರಾಚೀನತೆ, ಕೈಮಗ್ಗ ಉದ್ದಿಮೆಯ ಮಹತ್ವ, ಕೈಮಗ್ಗ ಉದ್ದಿಮೆಯ ಸಮಸ್ಯೆಗಳು ಹಾಗೂ ಕೈಮಗ್ಗ ಮತ್ತು ವಿದ್ಯುತ್‌ಚಾಲಿತ ಮಗ್ಗಗಳು ಎದುರಿಸುತ್ತಿರುವ ಸಮಸ್ಯೆಗಳ ಬಗ್ಗೆ ಮತ್ತು ಪರಿಹಾರಗಳ ಬಗ್ಗೆ ತಿಳಿಸಲಾಗಿದೆ.

೯. ಕಂದಗಲ್ಲ ಪಿ. ಎಸ್. ಇಳಕಲ್ಲ ಸೀರೆ: ಬಣ್ಣ ಹಾಗೂ ವಿನ್ಯಾಸ ಒಂದು ಅಧ್ಯಯನ, ಪಿಎಚ್.ಡಿ., ಮಹಾಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೨೦೦೫.

ಪಿ. ಎಸ್. ಕಂದಗಲ್ ಅವರು ತಮ್ಮ ಪ್ರಬಂಧದಲ್ಲಿ ಇಲಕಲ್ ಸೀರೆ ಹಾಗೂ ಬಣ್ಣ ಮತ್ತು ವಿನ್ಯಾಸದ ಬಗ್ಗೆ ಬೆಳಕು ಚಲ್ಲಿದ್ದಾರೆ. ಇವರು ತಮ್ಮ ಅಧ್ಯಯನದಲ್ಲಿ ಮಾರುಕಟ್ಟೆಯ ಉದ್ದೇಶವನ್ನು ಇಟ್ಟುಕೊಂಡ ಮಾರುಕಟ್ಟೆಯಲ್ಲಿ ಆಧುನಿಕ ಪೈಪೋಟಿಯಲ್ಲಿ ನೇಕಾರರ ಸೀರೆಗಳು ಯಾವ ರೀತಿಯಲ್ಲಿ ಬಣ್ಣ ಹಾಗೂ ವಿನ್ಯಾಸದಲ್ಲಿ ಬದಲಾವಣೆ ಗೊಳುತ್ತಿವೆ ಹಾಗೂ ಯಾವ ರೀತಿಯಲ್ಲಿ ಬದಲಾಗಬೇಕು ಎಂಬುದರ ಕುರಿತು ವಿವರಿಸಿದ್ದಾರೆ. ಮಾರುಕಟ್ಟೆಯ ಉದ್ದೇಶವನ್ನು ಗಮನದಲ್ಲಿ ಇಟ್ಟುಕೊಂಡು ಬಣ್ಣ, ವಿನ್ಯಾಸ ಹಾಗೂ ಗುಣಮಟ್ಟ ಇರುವ ಬಟ್ಟೆಗಳ ಅವಲಂಬಿತರು ಹೆಚ್ಚಾಗಿರುವುದನ್ನು ಪ್ರಬಂಧದಲ್ಲಿ ತಿಳಿಸಿದ್ದಾರೆ.

೧೦. ಮೀನಾಕ್ಷಿ ಕೆ. ದಕ್ಷಿಣ ಕನ್ನಡ ಕಾಸರಗೂಡಿನ ಶಾಲಿಯಾ/ದೇವಾಂಗ ಸಮುದಾಯದ ಅಧ್ಯಯನ, ಪಿಎಚ್.ಡಿ., ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೫.

ಇವರು ಪ್ರಮುಖವಾಗಿ ನೇಕಾರಿಕೆ ಸಮುದಾಯಗಳು ಸಾಂಸ್ಕೃತಿಕ ಬದಲಾವಣೆಯನ್ನು ಯಾವ ರೀತಿ ಹೊಂದುತ್ತವೆ ಎಂಬುದರ ಕುರಿತು ವಿವರಿಸಿದ್ದಾರೆ. ಈ ಪ್ರಬಂಧದಲ್ಲಿ ನೇಕಾರಿಕೆ ವೃತ್ತಿಯನ್ನು ಆಧರಿಸಿಕೊಂಡು ಬಂದಿರುವ ದೇವಾಂಗ/ಶಾಲಿಯರ ವೈಭವದ ಸಾಂಸ್ಕೃತಿಕ ಅಧ್ಯಯನ, ಅವರ ಆಚರಣೆಗಳು ಹಾಗೂ ಜಾತಿಗಳು ಒಳಪಂಗಡಗಳಾಗಿ ಹಲವೂ ಜಾತಿಗಳಾಗಿರುವುದರ ಬಗ್ಗೆ ವಿವರವನ್ನು ನೀಡಿದ್ದಾರೆ.

೧೧. **ಯಂಡಿಗೇರಿ ಎಸ್. ಎಸ್. ಮ್ಯಾನೆಜಮೆಂಟ್ ಆಫ್ ಕಾಸ್ಟ್ ಇನ್ ಹ್ಯಾಂಡಲೂಮ್ ಇಂಡಸ್ಟ್ರೀ ವಿಥ್ ಸ್ಪೇಷಲ್ ರೆಫರೆನ್ಸ್ ಟು ಹ್ಯಾಂಡಲೂಮ್ ಯುನಿಟ್ಸ್ ಇನ್ ಬಿಜಾಪೂರ ಡಿಸ್ಟ್ರೀಕ್ಟ್ ಆಫ್ ಕರ್ನಾಟಕ ಸ್ಟೇಟ್. ಪಿಎಚ್.ಡಿ., ಮಹಾಪ್ರಬಂಧ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೧೯೯೬.**

ಕುಮಾರಿ ಎಸ್. ಎಸ್. ಯಂಡಿಗೇರಿ ಯವರು ತಮ್ಮ ಪ್ರಬಂಧದಲ್ಲಿ ಪ್ರಮುಖವಾಗಿ ಅಂಖಂಡ ಬಿಜಾಪೂರ ಜಿಲ್ಲೆಯ ಸಂದರ್ಭದಲ್ಲಿ ಈ ಅಧ್ಯಯನವನ್ನು ಕೈಗೊಂಡಿದ್ದಾರೆ. ಆ ಒಂದು ಸಂದರ್ಭದಲ್ಲಿಯ ಈ ನೇಕಾರಿಕಾ ವ್ಯಾಪಾರವು ಕುಸಿದು ನೇಕಾರರ ಪರಿಸ್ಥಿತಿ ಬಹಳ ಗಂಭಿರವಾಗಿತ್ತು ಎನ್ನಬಹುದು. ಅವರು ಈ ಜಿಲ್ಲೆಯ ಪ್ರಮುಖ ನಗರಗಳಾದ ಹಾಗೂ ಬಟ್ಟೆಯ ವ್ಯಾಪಾರ ಮತ್ತು ಉತ್ಪನ್ನ ಕೇಂದ್ರಗಳಾದ ಗುಳೇದಗುಡ್ಡ ಮತ್ತು ಇಲ್ಲಕಲ್ ನಗರವನ್ನು ತಮ್ಮ ಅಧ್ಯಯನಕ್ಕೆ ಬಳಸಿಕೊಂಡಿದ್ದಾರೆ. ಇಲ್ಲಿ ಬಟ್ಟೆಗಳ ಉತ್ಪಾದನಾ ವೆಚ್ಚ, ಬೆಲೆ ಹಾಗೂ ಕಾರ್ಯಗಳ ಬಗ್ಗೆ ಅಧ್ಯಯನವನ್ನು ಮಾಡಿದ್ದಾರೆ. ಇಲ್ಲಿ ಪ್ರಮುಖವಾಗಿ ಇಲ್ಲಿನ ಜನರು ತಮ್ಮ ಸಾಂಪ್ರದಾಯಕ ನೇಕಾರಿಕೆ ಹಾಗೂ ಉತ್ಪನ್ನಗಳನ್ನೆ ಮುಂದುವರೆಸಿಕೊಂಡು ಬಂದಿರುವುದು ಈ ಸಮುದಾಯಗಳ ಹಿನ್ನೆಲೆಗೆ ಕಾರಣವನ್ನು ಇವರು ಪ್ರಸ್ತಾಪಿಸಿದ್ದಾರೆ. ಇವರು ಅಭಿವೃದ್ಧಿ ಹೊಂದಬೇಕಾದರೆ ಉತ್ಪಾದನಾ ವೆಚ್ಚ ಕಡಿಮೆ ಮಾಡಬೇಕು ಹಾಗೂ ಹೊಸ ಹೊಸ ವಿನ್ಯಾಸ, ನೈಸರ್ಗಿಕ ಬಣ್ಣವನ್ನು ಹೊಂದಬೇಕು ಮತ್ತು ಆಧುನೀಕರಣಕ್ಕೆ ಸಂಬಂಧಿಸಿದಂತೆ ಬಟ್ಟೆಯನ್ನು ಬದಾಲಾಯಿಸುವಂತಿರಬೇಕು ಹಾಗೂ ಮಾರಾಟ ವ್ಯವಸ್ಥೆ ಆಧುನಿಕರಣಗೊಳ್ಳ ಬೇಕು ಎಂದು ಸಲಹೆ ನೀಡಿದ್ದಾರೆ.

**ಉಪಸಂಹಾರ:**

ನೇಕಾರ ಸಮುದಾಯದ ಜನರು ನೇಕಾರರ ಸಹಕಾರಿ ಸಂಘಗಳ ಕಟ್ಟಿಕೊಂಡು ಸಹಕಾರಿ ಸಂಘಗಳ ಮುಖೇನ ತಮ್ಮ ಅಸ್ಥಿತ್ವವನ್ನು ತಮ್ಮ ತನವನ್ನು ಉಳಿಸಿಕೊಳ್ಳಲು ಹಾಗು ಸಾಮಾಜಿಕ ಆರ್ಥಿಕ ಅಭಿವೃದ್ಧಿಯಲ್ಲಿಯ ಸ್ಥಿತಿಗತಿಗಳನ್ನು ಹೇಗೆ ಆಧುನಿಕ ಜಗತ್ತಿನಲ್ಲಿ ಎದುರಿಸುತ್ತಿದ್ದಾರೆ ಎಂಬುವುದು ತಿಳಿಯುವುದು. ಅವರ ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ, ಆರ್ಥಿಕ, ರಾಜಕೀಯ ಮತ್ತು ಆಧುನಿಕತೆಯಲ್ಲಿ ಅವರು ಎದುರಿಸುತ್ತಿರುವ ಸವಾಲುಗಳನ್ನು ಅಧ್ಯಯನ ಮಾಡಬೇಕಾಗಿದೆ. ಆಧುನಿಕ ಜಗತ್ತಿನಲ್ಲಿ ನೇಕಾರರ ತಮ್ಮ ಮೂಲ ಸಂಪ್ರದಾಯಕ ಕಸುಬುನಿಂದ ಜೀವನವನ್ನು ಹೇಗೆ ನಿರ್ವಹಿಸುತ್ತಿದ್ದರು ಎಂಬುದರ ಸ್ಪಷ್ಟತೆಯನ್ನು ಕಂಡುಕೊಳ್ಳುವುದು ಮುಖ್ಯವಾಗಿದೆ. ಅಲ್ಲದೆ ಸರಕಾರಿ ಸೌಲಭ್ಯಗಳನ್ನು ಸಾಮಾನ್ಯ ಹಾಗೂ ಬಡ ನೇಕಾರರ ಮನೆ

ಮನೆ ತಲುಪುವಲ್ಲಿ ಈ ಸಹಕಾರಿ ಸಂಘಗಳ ಕಾರ್ಯ ವಿಶೇಷತೆಯನ್ನು ಕಂಡುಕೊಳ್ಳುವುದು ಪ್ರಮುಖವಾಗುತ್ತದೆ.

**ಟಿಪ್ಪಣಿಗಳು**

೧. ಸಾಂಬಮೂರ್ತಿ, ೨೦೦೦. ನೇಕಾರ ವೃತ್ತಿ ಪದಕೋಶ, ಪು.೨
೨. ಅದೇ ಪು.೨
೩. ಮಹೇಶ ತಿಪ್ಪಶೆಟ್ಟಿ, ೨೦೦೦. ಇಲ್ಲಕಲ್ ಸೀರೆ. ಪು. ೨ ಮತ್ತು ೩
೪. ಮಲ್ಲಿಕಾರ್ಜುನ ಬನ್ನಿ, ೨೦೧೦. ಗುಳೇದಗುಡ್ಡ ಖಣಗಳು. ಪು.೧
೫. ಭೈರಪ್ಪ ಕೆ, ೨೦೦೭. ಕೈಗಾರಿಕಾ ಸಮಾಜಶಾಸ್ತ್ರ, ಪು. ೧.
೬. ಭೈರಪ್ಪ ಕೆ. ೨೦೦೭. ಕೈಗಾರಿಕಾ ಸಮಾಜಶಾಸ್ತ್ರ, ಪು. ೩೧೯.

# ಅಧ್ಯಾಯ ಎರಡು

## ನೇಕಾರ ಸಮುದಾಯಗಳು, ನೇಕಾರ ವೃತ್ತಿ ಮತ್ತು ನೇಕಾರರ ಬದುಕಿನ ಸ್ಥಿತ್ಯಂತರ

೨.೧. ನೇಕಾರ ಸಮುದಾಯಗಳ ಪರಿಚಯ

೨.೨. ನೇಕಾರ ವೃತ್ತಿ

೨.೩. ನೇಕಾರರ ಬದುಕಿನ ಸ್ಥಿತ್ಯಂತರ

೨.೪. ಅಧ್ಯಯನದ ಭೌಗೋಳಿಕ ವ್ಯಾಪ್ತಿ

# ಅಧ್ಯಾಯ ಎರಡು

# ನೇಕಾರ ಸಮುದಾಯಗಳು, ನೇಕಾರ ವೃತ್ತಿ ಮತ್ತು ನೇಕಾರರ ಬದುಕಿನ ಸ್ಥಿತ್ಯಂತರ

## ೨.೧. ನೇಕಾರ ಸಮುದಾಯಗಳ ಪರಿಚಯ

ನೇಕಾರಿಕೆಯ ಮೂಲ ವೃತ್ತಿಯಿಂದ ಗುರುತಿಸಿಕೊಂಡಿದ್ದು, ಕಾಲಾನಂತರ ವರ್ಣಾಶ್ರಮದ ನಂಟಿನಿಂದ ಜಾತಿಯಾಗಿ ರೂಪುಗೊಂಡಿರುವುದು ನಮ್ಮ ಭಾರತೀಯ ಇತಿಹಾಸದಿಂದ ತಿಳಿದುಬರುತ್ತದೆ. ಜಾತಿಯ ಉಗಮದ ಸಂದರ್ಭದಲ್ಲಿ ನೇಕಾರರು, ಶ್ರಮಿಕ ವರ್ಗಕ್ಕೆ ಸೇರಿದ್ದರಿಂದ ಇವರನ್ನು ಸೇವೆ ಮಾಡುವರು ಎಂಬ ಆಧಾರದಲ್ಲಿ ಈ ಶ್ರಮಿಕವರ್ಗದ ಜನರನ್ನೂ ಸಹ ಜಾತಿ ಎಂಬ ಬಂಧನದಲ್ಲಿ ಸಿಲುಕುವಂತೆ ಮಾಡಲಾಯಿತು ಎಂಬುದು ಕಲ್ಪನಾತೀತ. "ಜನ್ಮನಾ ಜಾಯತೇಶೂದ್ರ: ಸಂಸ್ಕಾರತ್‌ದ್ವಿಜ ಉಚ್ಚತೇ" ಹುಟ್ಟುವಾಗ ಎಲ್ಲರೂ ಶೂದ್ರರಾಗಿಯೇ ಹುಟ್ಟುತ್ತಾರೆ, ನಂತರದ ಜೀವನದಲ್ಲಿ ಸಂಸ್ಕಾರ ಹೊಂದಿದವರು ದ್ವಿಜರಾಗುತ್ತಾರೆ. ಸಂಸ್ಕೃತ ಭಾಷೆಯಿಂದ ಈ ಉಕ್ತಿಯಲ್ಲಿರುವ ಸ್ಪಷ್ಟತೆ ಏನೆಂದರೆ, ಹುಟ್ಟಿನಿಂದ ಎಲ್ಲರೂ ಸರಿಸಮಾನರಾಗಿರುತ್ತಾರೆ. ನಂತರ ಗುಣ ಮತ್ತು ವೃತ್ತಿಗಳಿಗನುಗುಣವಾಗಿ ವಿವಿಧ ವರ್ಗಗಳಾಗುತ್ತವೆ. ಪರಿಸರವನ್ನು ಸೂಕ್ತ ರೀತಿಯಲ್ಲಿ ಸದುಪಯೋಗ ಪಡಿಸಿಕೊಂಡು ಅಭಿವೃದ್ಧಿ ಹೊಂದಿ ಸುಸಂಸ್ಕೃತರಾಗುತ್ತಾರೆ.

ಭಾರತೀಯ ಹಿಂದು ಸಮಾಜದಲ್ಲಿ, ಅಸ್ತಿತ್ವಕ್ಕೆ ಬಂದ ಚರ್ತುವರ್ಣ ವ್ಯವಸ್ಥೆಯು ಕ್ರಮೇಣ ಒಂದೇ ವೃತ್ತಿ ಅನುಸರಿಸುತ್ತಿದ್ದವರಲ್ಲಿಯೇ 'ನಾವು ನಮ್ಮವರು' ಎಂಬ ಭಾವನೆ, ಬೇರೆಯವರನ್ನು ಅನ್ಯರು ಎಂದು ಪರಿಗಣಿಸುವ ಭಾವನೆಗಳಿಗೆ ಜನಸಾಮಾನ್ಯರು ಮನಸೋತರು. ಇಂತಹ ಸಂಕುಚಿತ ಮನೋಭಾವ, ಸಾಮಾಜಿಕ ಸ್ಥಾನಮಾನಗಳಲ್ಲಿ ಅಂತರ, ಸಾಮಾಜಿಕ ಬದಲಾವಣೆ ಮೊದಲಾದವುಗಳಿಂದ ಜಾತಿಗಳು ಜನ್ಮತಾಳಿದವು ಹಾಗೂ ಕಠಿಣ ಸ್ವರೂಪ ರೀತಿಯಲ್ಲಿ ಮೂಡಿಬಂದವು. ಈ ವ್ಯವಸ್ಥೆಯಲ್ಲಿ ನೇಕಾರಿಕೆ ಸಮುದಾಯಗಳನ್ನು ಉಪಚರಿಸುವ ರೀತಿ ಕೆಳಮಟ್ಟದಲ್ಲಿತ್ತು.

ವೃತ್ತಿಯ ಆಧಾರದಲ್ಲಿ ಜಾತಿಗಳಾಗಿ ನೇಕಾರರ ಸಮುದಾಯಗಳು ಹಲವಾರು ಉಪ ಪಂಗಡಗಳಾಗಿರುವುದನ್ನು ಹಲವಾರು ಪ್ರದೇಶಗಳಲ್ಲಿ ಕಾಣುತ್ತವೆ. ಜಾತಿ ಪದ್ಧತಿಯು ಸಾಮಾಜಿಕ ಸ್ತರವಿನ್ಯಾಸದ ಒಂದು ವಿಶಿಷ್ಟ ಬಗೆ. ಇದು ಪ್ರಾಚೀನ ಹಾಗೂ ಆಧುನಿಕ ಸಮಾಜದಲ್ಲಿ ಹೆಚ್ಚಾಗಿ ಮುಂದುವರೆಸಿಕೊಂಡು ಬಂದಿವೆಂಬುವುದನ್ನು ಅಧ್ಯಯನಗಳಿಂದ ತಿಳಿದುಬರುತ್ತದೆ.

"ಭಾರತೀಯ ಸಮಾಜವನ್ನು ಅಧ್ಯಯನ ಮಾಡಲು ಬಂದ ವಿದೇಶಿ ಸಂಶೋಧನಕಾರರು ತಮ್ಮದೇ ಆದ ಶೈಲಿಯಲ್ಲಿ ಸಮುದಾಯಗಳನ್ನು ಹಾಗೂ ಜಾತಿ ವ್ಯವಸ್ಥೆಯನ್ನು ವಿವರಿಸಿದ್ದಾರೆ. ಸಮಾಜಶಾಸ್ತ್ರಜ್ಞರಾದ ಚಾರ್ಲ್ಸ್‌ಹಾರ್ಟನ್ ಕೂಲೆ ಇವರು, ವರ್ಗವು ಕಟ್ಟುನಿಟ್ಟಾಗಿ ಅನುವಂಶೀಯ ಗುಣಗಳನ್ನು ಅಳವಡಿಸಿಕೊಂಡಾಗ ಅದನ್ನೇ ಜಾತಿ ಎಂದು ಕರೆದರು."[೧] ಇಲ್ಲಿ **ಕೂಲೆ** ಅವರು ದೇಶದಲ್ಲಿ ನಂಬಿಕೊಂಡು ಬಂದಿರುವಂತ ಜಾತಿ ವ್ಯವಸ್ಥೆಯನ್ನು ಗುರುತಿಸಿದರು. ಆದರೆ ನಮ್ಮ ಭಾರತೀಯರು ಸಂಪ್ರದಾಯ ಪ್ರೀಯರು, ದೇವರಲ್ಲಿ ನಂಬಿಕೆ

ಉಳ್ಳವರು, ನೆರೆ ಹೊರೆಯವರೊಂದಿಗೆ ಬೆರೆಯುವವರು, ಇಂತಹ ಹಲವಾರು ನೈತಿಕ ಮೌಲ್ಯಗಳನ್ನು ತುಂಬಿಕೊಂಡ ಜನರು ಈ ಜಾತಿ ವ್ಯವಸ್ಥೆಗೆ ಹೇಗೆ ನೂಕಲಾಯಿತು ಎಂಬುವುದನ್ನು ತಾರ್ಕಿಕವಾಗಿ ವಿಚಾರ ಮಾಡಿದರೆ ಗೋಚರಿಸುತ್ತದೆ. ಇತರರು ಹೇಳುವಂತೆ, ಪ್ರಮುಖವಾಗಿ ತಂದೆ ತಾಯಿಯ ಜಾತಿಯನ್ನು ಅವರಿಗೆ ಹುಟ್ಟುವ ಮಕ್ಕಳಿಗೆ, ಜೊತೆಗೆ ಅನುವಂಶೀಕವಾಗಿ ಜಾತಿ ಸಮುದಾಯಗಳನ್ನು ಗುರುತಿಸುತ್ತಾರೆ.

ಮಾನವನು ನಿರಂತರವಾಗಿ ಭೂಮಿಯ ಜೊತೆಗೆ ಅನುಸಂಧಾನದ ಪ್ರತಿಫಲವಾಗಿ ಸಮೂಹ ಜೀವಿಯಾಗಿ ಜೀವನವನ್ನು ಆರಂಭಿಸಿದನು. ತದನಂತರ ತಾನು ತನ್ನದು ಎಂಬ ಭಾವನೆಯ ಅಂತರಾಳದ ತುಡಿತವೇ ಈ ವೃತ್ತಿ. ವೃತ್ತಿಯಿಂದ ಭಾರತದಲ್ಲಿ ಜಾತಿಗಳು, ಉಪಜಾತಿಗಳು, ಪಂಗಡಗಳು ಹಾಗೂ ಸಮುದಾಯಗಳ ಉಗಮಕ್ಕೆ ನಾಂದಿಯಾದವು. ನಮ್ಮ ಸಮಾಜದಲ್ಲಿ ಹಲವಾರು ಸಮುದಾಯಗಳು ಅಸ್ಥಿತ್ವದಲ್ಲಿವೆ. ಅವುಗಳಲ್ಲಿ ಪ್ರಮುಖವಾಗಿ ನೇಕಾರಿಕೆ ಸಮುದಾಯ. ಈ ಅಧ್ಯಯನದಲ್ಲಿ ನೇಕಾರಿಕೆ ವೃತ್ತಿಯನ್ನು ಮೈಗೂಡಿಸಿಕೊಂಡು ಸಮುದಾಯವನ್ನು ರೂಪಿಸಿಕೊಂಡಿರುವಂತ ನೇಕಾರರ ಒಳಪಂಗಡಗಳನ್ನು ಪರಿಚಯಿಸಲಾಗಿದೆ.

ನೇಕಾರರನ್ನು ಭಾರತದಾದ್ಯಂತ ಈ ಕೆಳಗಿನ ಹೆಸರುಗಳಿಂದ ಕರೆಯುತ್ತಾರೆ. ನೇಕಾರರು ಭಾರತದಾದ್ಯಂತ ಹರಡಿಕೊಂಡಿದ್ದಾರೆ. ಅಲ್ಲಲ್ಲಿ ನೇಯ್ಗೆ ವ್ಯಾಪಾರ, ಕೃಷಿಯನ್ನು ಅವಲಂಬಿಸಿ ಬದುಕನ್ನು ಕಟ್ಟಿಕೊಳ್ಳಲು ಪ್ರಯತ್ನಿಸಿದ್ದಾರೆ. ಪ್ರಮುಖವಾಗಿ ಕಂಡುಬರುವ ನೇಕಾರರ ಒಳಪಂಗಡಗಳ ಹೆಸರುಗಳು ಈ ರೀತಿಯಾಗಿ ಕಂಡುಬರುತ್ತವೆ. "ದೇವಾಂಗ–ದೇವಾಂಗ್, ಕೋಷ್ಠಿ–ಹಟಗಾರ, ಹಟಗಾರ್, ಜೇಡ್–ವಿಕಾಂಕ್, ಜುಲೋಹಿ, ಹಲ್ಲಾರ್, ಹಟಗಾರ್, ನೇಯ್ಗೆ, ಕುರುಹಿನಶೆಟ್ಟಿ, ಕುರ್ನಿ, ಬಿಳಿಮಗ್ಗ, ತೊಗಟ, ತೊಗಟರು, ತೊಗಟಿಗ, ತೊಗಟವೀರ, ತೋಗಟಗೇರ, ತೊಗಟವೀರ ಕ್ಷತ್ರಿಯ, ತೊಗಟ ಪುಷ್ಪಾಂಜಲಿ, ಸೋಲ್‌ಗ, ಜಂಬಾನ್, ಐರಿ, ಅವಿರ್; ಸಾಲೆ– ಪಟ್ಟಸಾಲೆ, ಪದ್ಮಸಾಲೆ, ಪದ್ಮಶಾಲೆ; ಕೈಕೋಳನ್, ಸೆಂಗುಂದರ್, ನೇಯ್ಕರ್, ಮರವರ, ಜಾಡರ್ ಜಾಂಡ್ರ, ಸ್ವಕುಳಸಾಲಿ, ಸ್ವಕುಳಸಾಲೆ."[3] ಈ ರೀತಿಯಲ್ಲಿ ನೇಕಾರರ ಒಳಪಂಗಡಗಳನ್ನು ಭಾರತದಲ್ಲಿ ಪ್ರಾದೇಶಿಕವಾಗಿ ಹೆಸರುಗಳು ಬೆಳೆದುಬಂದಿವೆ. ಈ ಸಂಶೋಧನಾ ಅಧ್ಯಯನದಲ್ಲಿ ಪ್ರಮುಖವಾಗಿ ದೇವಾಂಗ, ಹಟಗಾರ, ಪದ್ಮಸಾಲೆ, ಪಟ್ಟಸಾಲೆ ಮತ್ತು ಕುರುಹಿನಶೆಟ್ಟಿ ಸಮುದಾಯದ ಜನರನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

"ಹಂಜಿಯನ್ನೆ ತಾತಂದು, ತಂತುವನ್ನೆ ರಚಿಸಿ,
ಮುತ್ತು ತೆಗೆಯುವ ಅಣಿಯೋಳು, ಎಚ್ಚರದಾ ಕೊಂಬಿನೋಳು
ಮತ್ತೊಂದು ತಂತಿನೋಳ ಪೋಣಿಸಿ, ತನ್ನ ಅರ್ಧದೇಹನ್ನು ಭೂ ಗರ್ಭದಲ್ಲಿರಿಸಿ
ಸಕಲ ಅಂಗಣ್ಯರ ಅಂಗಮುಚ್ಚಿದ ದೇವಾಂಗನಿವನು"

ಇದು ನೇಕಾರರ ಬದುಕಿನ ಚಿತ್ರಣ ನೇಕಾರಿಕೆಯ ರಚನೆಯನ್ನು ಸಾರುತ್ತದೆ. ಈ ಪದ್ಯವನ್ನು ರಚಿಸಿದವರು ಕನ್ನಡದ ಸೆಕ್ಸಪಿಯರ್ ಹಾಗೂ ನಾಟಕ ರಚನೆಕಾರ ಎಂದು ಪ್ರಖ್ಯಾತಿ ಪಡೆದಿರುವ ದಿವಂಗತ ಶ್ರೀ ಕಂದಗಲ್ಲ ಹನುಮಂತರಾಯರು.

**ನೇಕಾರ ಸಮುದಾಯಗಳ ಒಳಪಂಗಡಗಳ ಪರಿಚಯ**

೧. **ದೇವಾಂಗ ಸಮುದಾಯ**

ದೇವರ ಅಂಗದಿಂದ ಜನಿಸಿದವರಿಂದ ಈ ಸಮುದಾಯದವರಿಗೆ 'ದೇವಾಂಗ' ಎಂದು ಕರೆದರು. ಅಲ್ಲದೇ ಈ ಸಮುದಾಯದಲ್ಲಿ ಅವರ ಕೌಶಲ್ಯದಿಂದ ದೇವತೆಗಳ ಪ್ರಾರ್ಥನೆಯನ್ನು ಈಡೇರಿಸಿದ್ದಕ್ಕಾಗಿ 'ದೇವಲ' ಎಂದು ಎರಡು ಹೆಸರುಗಳಿಂದ ಕೂಡಿರುವುದು. ಈ ಸಮುದಾಯದ ಜನರನ್ನು ಈ ಎರಡು ಹೆಸರುಗಳಿಂದ ಕರೆಯುತ್ತಿದ್ದಾರೆ.

೨. **ಪದ್ಮಶಾಲಿ ಸಮುದಾಯ**

ಈ ಸಮುದಾಯವು ನೇಕಾರಿಕೆಯನ್ನು ತಮ್ಮ ಕುಲದ ಕಸುಬು ಹಾಗೂ ನೇಕಾರಿಕೆಯ ಕುಶಲತೆಯನ್ನು ಮುಂದುವರೆಸಿಕೊಂಡಿದೆ. ಈ ಸಮುದಾಯದಲ್ಲಿ, ಕಾಳವಾಸುರನೆಂಬ ರಾಕ್ಷಸನ ಉಪಟಳ ನಿವಾರಣೆಗಾಗಿ ಶಿವನ ಆಜ್ಞೆಯಂತೆ ಮಾರ್ಕಂಡಯ ಮಹರ್ಷಿ ಯಜ್ಞವನ್ನು ನಡೆಸುತ್ತಾನೆ. ಪೂರ್ಣಾಹುತಿಯಾದ ಮೇಲೆ ವಿಷ್ಣುವಿನ ಅಂಶದಿಂದ ತೇಜಸ್ವಿಯಾದ ಒಂದು ಮಗ ಅಗ್ನಿಕುಂಡದಿಂದ ಹೊರಬರುತ್ತದೆ. ಅವನೇ ಭಾವನಾಋಷಿ.

೩. **ಸ್ವ-ಕುಳಸಾಲಿ ಸಮುದಾಯ**

ಈ ಸಮುದಾಯದ ಸೃಷ್ಟಿ ಪುರಾಣದ ಸಾರಾಂಶ ಹೇಳುವಂತೆ ಶಿವನು ತನ್ನ ನಾಲಿಗೆಯಿಂದ(ಜಿಹ್ವೇ) ಒಬ್ಬ ಪುರುಷನನ್ನು ಉತ್ಪನ್ನ ಮಾಡಿದನು. ಅವನಿಗೆ ಜೀವ್ಹಾಜಿ ಅಥವಾ ಜಿವೇಶ್ವರನೆಂದು ಕರೆದನು. ತನ್ನ ಕುಲವನ್ನು ಉದ್ದಾರ ಮಾಡುವ ಸಕುಲನೆಂದು ಹೆಸರಾದನು. ಈತನ ಜನ್ಮ ಶ್ರಾವಣ ಶುಕ್ಲತಯೋದಶಿ ಜಗತ್ತಿಗೆ ಬಟ್ಟೆಯನ್ನು ದಯಪಾಲಿಸಿದನೆಂದು ನಂಬಿಕೆ. ಈ ನಂಬಿಕೆಯಿಂದ ಅವರು ತಮ್ಮ ಕುಲಕಸುಬು ನೇಕಾರಿಕೆ ಎಂದು ಹೇಳುತ್ತಾರೆ. ಇಂದಿಗೂ ಕೆಲವೊಂದು ಸ್ಥಳಗಳಲ್ಲಿ ನೇಕಾರಿಕೆಯನ್ನು ಮಾಡಿಕೊಂಡು ಸಾಗುತ್ತಿದ್ದಾರೆ. ಈ ಸಮುದಾಯದ ಜನರು ಮಹಾರಾಷ್ಟ್ರದಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಕರ್ನಾಟಕದ ಬೆಳಗಾವಿ, ಚಿತ್ರದುರ್ಗ, ಬಳ್ಳಾರಿ ಮುಂತಾದ ಜಿಲ್ಲೆಗಳಲ್ಲಿ ಪ್ರಮುಖವಾಗಿ ಸಿಗುತ್ತಾರೆ. ಆದರೆ ಬಾಗಲಕೋಟ ಜಿಲ್ಲೆಯಲ್ಲಿ ಕಂಡುಬಂದಿದ್ದರೂ ಸಹ ಮೂಲ ವೃತ್ತಿಯಿಂದ ದೂರಸರಿದಿದ್ದಾರೆ.

೪. **ತೊಗಟವೀರ ಸಮುದಾಯ**

ತೊಗಟವೀರ ಸಮುದಾಯದ ಸಂಕ್ಷಿಪ್ತ ವಿವರಣೆ ನೋಡಬೇಕಾದರೆ, ಈ ಸಮುದಾಯದ ಜನರು ಇಂದಿಗೂ ಕರ್ನಾಟಕದಲ್ಲಿ ಪ್ರಮುಖವಾಗಿ ಗದಗ-ಬೆಟಗೇರಿ, ಬಳ್ಳಾರಿ, ಚಿತ್ರದುರ್ಗ, ಶಿವಮೊಗ್ಗ ಭಾಗಗಳಲ್ಲಿ ಕಂಡುಬರುತ್ತಾರೆ. ಇವರಲ್ಲಿ ಕೆಲವೊಂದು ಪ್ರದೇಶಗಳಲ್ಲಿ ಇಂದಿಗೂ ಮೂಲ ನೇಕಾರಿಕೆಯನ್ನು ಹೊಂದಿದ್ದಾರೆ.

೫. ಕುರುಹಿನಶೆಟ್ಟಿ ಸಮುದಾಯ

ಈ ಕುರುಹಿನಶೆಟ್ಟಿ ಸಮುದಾಯವು ನೇಕಾರಿಕೆಯ ವೃತ್ತಿಯನ್ನು ತನ್ನ ಪಾರಂಪರಿಕ ಹಾಗೂ ಮನೆತನದ ಕುಲಕಸುಬು ಎಂದು ಅನುಸರಿಸುತ್ತಾ ಬಂದಿದ್ದಾರೆ. ಈ ಸಮುದಾಯದ ಪ್ರಮುಖ ಆರಾಧಕರು ನೀಲಕಂಠ.(ಶಿವ) ಈ ಸಮುದಾಯದ ಜನರು ಬಾಗಲಕೋಟ ಜಿಲ್ಲೆಯಲ್ಲಿ ಪ್ರಮುಖವಾಗಿ ಗುಳೇದಗುಡ್ಡ, ಅಮೀನಗಡ, ರಬಕವಿ-ಬನಹಟ್ಟಿ, ಕೆರೂರ, ಜಮಖಂಡಿ, ಕಮತಗಿ, ಸೂಳಿಭಾವಿ ಹಾಗೂ ಇಲಕಲ್ಲ ನಗರಗಳಲ್ಲಿ ಕಂಡುಬರುತ್ತಾರೆ.

೬. ಪಟ್ಟಸಾಲಿ ಸಮುದಾಯ

ಪಟ್ಟಸಾಲಿ ಸಮುದಾಯವು ಪ್ರಮುಖವಾಗಿ ನೇಕಾರಿಕೆಯನ್ನು ಸಮುದಾಯದ ಮನೆಯ ಕಸುಬು ಎಂದು ಸ್ವೀಕರಿಸಿದ್ದಾರೆ. ಇಂದಿಗೂ ಈ ಸಮುದಾಯದ ಜನರು ಅನೇಕ ಕಡೆ ನೇಕಾರಿಕೆಯನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಒಂದು ಕಾಲದಲ್ಲಿ ಈ ವೃತ್ತಿಯಿಂದ ಜನರು ಸಂತೋಷದಿಂದ ಇರುತ್ತಿದ್ದರು. ಈ ವೃತ್ತಿಗೆ ಬಹಳ ಮನ್ನಣೆಯನ್ನು ನೀಡುತ್ತಿದ್ದರು ಎಂದು ಇಲ್ಲಿನ ಮಾಹಿತಿದಾರರ ಅಭಿಪ್ರಾಯವಾಗಿದೆ. ಈ ಸಮುದಾಯದ ಜನರು ಶಿವನ ಆರಾಧಕರಾಗಿದ್ದಾರೆ.

ಪಟ್ಟಸಾಲಿ ಸಮುದಾಯದಲ್ಲಿ ೧೦೧ ಗೋತ್ರಗಳನ್ನು ಹಾಗೂ ಬೆಡಗುಗಳನ್ನು ಕಂಡುಬರುತ್ತವೆ. ಈ ಸಮುದಾಯದ ಜನರು ಪ್ರಮುಖವಾಗಿ ಗುಳೇದಗುಡ್ಡ, ಬಾದಾಮಿ, ಇಳಕಲ್ಲ, ಅಮೀನಗಡ, ಜಮಖಂಡಿ, ಮಹಾಲಿಂಗಪೂರ, ಬಾಗಲಕೋಟ, ಮಲ್ಲಾಪುರ ಗ್ರಾಮ ಹಾಗೂ ಮುಂತಾದ ನಗರ, ಪಟ್ಟಣ, ಗ್ರಾಮಗಳಲ್ಲಿ ನೇಕಾರಿಕೆಯಲ್ಲಿ ಮತ್ತು ಇನ್ನಿತರ ವೃತ್ತಿಗಳಲ್ಲಿ ತೊಡಗಿಕೊಂಡಿರುವುದು ಕಂಡುಬಂದಿದೆ.

## ೨.೨ ನೇಕಾರ ವೃತ್ತಿ

### ಪ್ರಾಚೀನ ಹಾಗೂ ಮಧ್ಯಕಾಲಿನ ಭಾರತದ ನೇಕಾರಿಕೆ

"ಭಾರತವು ಪ್ರಾಚೀನ ಕಾಲದಿಂದಲೂ ಹತ್ತಿ ಬಟ್ಟೆ ಹಾಗೂ ರೇಷ್ಮೆ ಬಟ್ಟೆಗಳ ಉತ್ಪಾದನೆಯಲ್ಲಿ ತನ್ನದೆಯಾದ ಛಾಪನ್ನು ಮೂಡಿಸುತ್ತಾ ಬಂದಿದೆ. ಪ್ರಪಂಚದ ಇನ್ನುಳಿದ ದೇಶಗಳಿಗಿಂತ ಮುಂಚಿತವಾಗಿ ಹತ್ತಿಯ ಬಟ್ಟೆಯು ನಮ್ಮ ದೇಶದಲ್ಲಿ ಬಳಕೆಯಲ್ಲಿರುವುದು ಇತಿಹಾಸದಿಂದ ತಿಳಿಯುತ್ತದೆ. ಆದ್ದರಿಂದ ಭಾರತವು ಹತ್ತಿಬಟ್ಟೆಯ ತವರೂರು ಎಂದು ಕರೆಯುವುದರಲ್ಲಿ ಹೆಮ್ಮೆ ಎನಿಸುತ್ತದೆ."[೩] ಬೇರೆ ಬೇರೆ ಕಾಲಘಟ್ಟಗಳಲ್ಲಿ ಭೇಟಿ ನೀಡಿರುವ ವಿದೇಶಿಗರಲ್ಲಿ ಪ್ರಮುಖರಾದ ಫಾಹಿಯಾನ, ಹುಯನ್‌ತ್ಸಾಂಗ್, ಬರ್ಮಿಯರ್ ಮುಂತಾದವರು ಭಾರತೀಯರ ಕೈಮಗ್ಗ ಉದ್ಯಮ ಹಾಗೂ ಕಲಾತ್ಮಕ ವಿನ್ಯಾಸಗಳ ಕುರಿತು ತಿಳಿಸಿದ್ದಾರೆ. "ಹರಪ್ಪಾ ಮತ್ತು ಮಹೊಂಜೊದಾರ್ ಪ್ರಾಚೀನ ನಗರಗಳಲ್ಲಿ ನಡೆಸಿದ ಉತ್ಖನನಗಳಿಂದ ಭಾರತೀಯರು ಸುಮಾರು ೫೦೦೦ ವರ್ಷಗಳ ಹಿಂದೆ ಬಟ್ಟೆ ನೇಯುವ ಕಲೆಯನ್ನು ಹಾಗೂ ಬಣ್ಣಗಾರಿಕೆಯಲ್ಲಿ ಅದ್ಭುತ ಕಲಾ ನೈಪುಣ್ಯತೆಯನ್ನು ಸಾಧಿಸಿದ್ದ ಬಗ್ಗೆ ತಿಳಿದುಬರುತ್ತದೆ."[೪] ಭಾರತೀಯ ಪ್ರಾಚೀನ ಗ್ರಂಥಗಳಾದ ವೇದ-ಉಪನಿಷತ್, ರಾಮಾಯಣ-

ಮಹಾಭಾರತಗಳಲ್ಲಿ ನೇಕಾರಿಕೆಯ ಬಗ್ಗೆ ಉಲ್ಲೇಖಗಳಿವೆ. ಪ್ರಸಂಗಗಳನ್ನು ನೋಡುವಾಗ ನೇಕಾರಿಕೆಯ ಬಗ್ಗೆ ರಾಮಾಯಣದಲ್ಲಿ ಸೀತೆಯ ಸೆರಗಿನ ವಿವರಣೆ, ದ್ರೌಪದಿಯ ವಸ್ತ್ರಾಪಹರಣ ಸನ್ನಿವೇಶಗಳು ಸೀರೆ ಬಳಕೆಯ ಬಗ್ಗೆ ವಿವರಣೆಯನ್ನು ನೀಡುತ್ತವೆ. ಮನುಷ್ಯನ ಮೂಲಭೂತ ಸೌಕರ್ಯಗಳನ್ನು ಎತ್ತಿ ತೋರಿಸುವ ಹಾಗೂ ಒಂದಕ್ಕೊಂದು ಪೂರಕವಾಗಿ ಬೆಳೆದು ಬಂದಿರುವ ಕುಲಕಸುಬುಗಳಾಗಿ ಸಾಗಿರುವುದರ ಕುರಿತು ವಿದ್ವಾಂಸರ ಹೇಳಿಕೆಗಳನ್ನು ಪರಿಶೀಲಿಸಿದಾಗ ಅಪರೂಪದ ಹೇಳಿಕೆಗಳು ಸಿಗುತ್ತವೆ.

"ಉಂಕಿಯ ನಿಗೂಚಿ, ಸರಿಗೆಯ ಸಮಗೊಳಿಸಿ
ಸಮಕಾಲನಿಕ್ಕಿ ಅಣಿಯೋಳ ಮುಟ್ಟದೆ
ಹಿಡಿದ ಲಾಳಿಯ ಮುಳ್ಳು ಕಂಡಿಕೆಯ ನುಂಗಿತ್ತು
ಈ ಸೀರೆಯ ನೇಯ್ದವ ನಾನೋ ನೀನೋ? ರಾಮನಾಥ"[೫]

"ಎಲ್ಲವು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ
ಒಕ್ಕಲಿಗ ಹೊಟ್ಟೆಗೀಯುವ, ನೇಕಾರ ಬಟ್ಟೆ
ಒದಗಿಸುವ, ಎಲ್ಲರೂ ಇವರಿಬ್ಬರಿಗೆ ಉಪಕೃತರು,
ಆದುದರಿಂದಲೇ ರಾಟಿ-ಮೇಟಿ
ಗಳೇರಡು ನಿಲ್ಲೆ ಜಗದಾಟವೇ ಕೆಡಕು-ಎಂದ ಸರ್ವಜ್ಞ"[೬]

ಈ ಮೇಲಿನ ವಚನ ಹಾಗೂ ತ್ರಿಪದಿಗಳು ನೇಕಾರಿಕೆಯ ಉಪಯುಕ್ತತೆ, ಕೃಷಿಗೂ ಮತ್ತು ನೇಕಾರಿಕೆ ಇರುವಂತ ಅವಿನಾಭಾವ ಸಂಬಂಧ ಬಗ್ಗೆ ತಿಳಿಸುತ್ತದೆ. ೭ನೇ ಶತಮಾನದ ದೇವರ ದಾಸಿಮಯ್ಯನವರು ಮೂಲತ ನೇಕಾರಿಕೆಯ ಕುಟುಂಬದ ಹಿನ್ನೇಲೆಯವರು ಹಾಗೂ ನೇಕಾರಿಕೆಯಲ್ಲಿನ ಅನುಭವಗಳನ್ನು ವರ್ಣಿಸಿದ್ದಾರೆ. ಸುಮಾರು ೧೪-೧೫ ಶತಮಾನದ ಸರ್ವಜ್ಞನು ಹೇಳಿರುವಂತೆ ನೇಕಾರಿಕೆಗೆ ಮತ್ತು ಬೇಸಾಯಕ್ಕೆ ಅವಿನಾಭಾವ ಸಂಬಂಧ ಹಾಗೂ ಇದನ್ನು ಮರೆತರೆ ಜಗತ್ತಿಗೆ ಆಪತ್ತು ಬಂದೊದಗಬಹುದು.

ಮಧ್ಯಕಾಲದ ಅವಧಿಯಲ್ಲಿ ಭಾರತವು ಗ್ರಾಮೀಣ ಮಟ್ಟದಲ್ಲಿ ಅತಿ ಹೆಚ್ಚು ಸಣ್ಣ ಉತ್ಪನ್ನಗಳನ್ನು ಹಾಗೂ ದೇಶಿಯ ಉತ್ಪನ್ನಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಉತ್ಪಾದಿಸಲ್ಪಡಲಾತ್ತಿತ್ತು. ಗ್ರಾಮೀಣ ಹಾಗೂ ನಗರ ಸಮುದಾಯಗಳಲ್ಲಿ ನೇಕಾರಿಕೆಯು ಕಂಡುಬರುವುದರ ಬಗೆಗೆ ಉಲ್ಲೇಖಗಳಿವೆ. ಈ ಸಂದರ್ಭದಲ್ಲಿ ರಾಜ ಮನೆತನಗಳು ಕಂಡುಬರುತ್ತಿದ್ದು, ಅವರ ಆಸ್ಥಾನಗಳಲ್ಲಿ ನೇಕಾರಿಕೆಗೆ ಹಾಗೂ ನೇಕಾರಿಕೆ ಮಾಡುವ ಕೆಲಸಗಾರರಿಗೆ ಸಾಮಾಜಿಕ ಸ್ಥಾನಮಾನ ಹಾಗೂ ಆಸ್ಥಾನದಲ್ಲಿ ವಾಸಕ್ಕೆ ಸ್ಥಳಾವಕಾಶ ನೀಡುತ್ತಿದ್ದರೆಂದು ತಿಳಿದುಬರುತ್ತದೆ. ಸುಲ್ತಾನರು ಮಾಮೂಲಿ ಕೆಲಸಗಾರರ ಜೊತೆಗೆ ಸುಮಾರು ೪೦೦೦ ಜನ ರೇಷ್ಮೆ ನೇಕಾರರನ್ನು ನೇಮಿಸಿಕೊಳ್ಳುತ್ತಿದ್ದರು. ಆ ಸಂದರ್ಭದಲ್ಲಿ ಬೃಹತ್ ಕೈಗಾರಿಕೆಗಳಾಗಲಿ, ಕಾರ್ಖಾನೆಗಳಾಗಲಿ ಇರಲಿಲ್ಲ. ಈ ನೇಕಾರಿಕೆಯ ಉತ್ಪಾದಕರು, ಇತರೆ ಉತ್ಪಾದನೆ ಮಾಡುವ ಕರಕುಶಲಕರ್ಮಿಗಳು ತಾವು ತಯಾರಿಸಿರುವ ಉತ್ಪಾದನಾ ವಸ್ತುಗಳನ್ನು ಮುಕ್ತವಾಗಿ ಮಾರಾಟ ಮಾಡುವ ಅವಕಾಶವನ್ನು ಪಡೆದಿದ್ದರು. ಉದ್ಯಮಶೀಲ

ಬಂಡವಾಳಶಾಹಿಗಳು ಈ ಕರಕುಶಲ ವಸ್ತುಗಳ ಉತ್ಪಾದಕರನ್ನು ಹಾಗೂ ನೇಕಾರರನ್ನು ನೇಮಿಸಿಕೊಳ್ಳುವಂತಹ ಪರಿ ಈ ಸಂದರ್ಭದಲ್ಲಿ ಎದ್ದು ಕಾಣುತ್ತಿತ್ತು.

"ಕೃಷಿಯು ಹೆಚ್ಚಿನ ಜನರ ಮುಖ್ಯ ಕಸುಬಾಗಿದ್ದರೂ ದೇಶದ ನಗರ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ಪ್ರಮುಖವಾದ ಕೆಲವು ಸಣ್ಣ ಕೈಗಾರಿಕೆಗಳು ಕಂಡುಬರುತ್ತಿದ್ದವು. ಅವುಗಳಲ್ಲಿ ಪ್ರಮುಖವಾಗಿ ಹೇಳುವುದಾದರೆ, ಹತ್ತಿ, ರೇಷ್ಮೆ ಹಾಗೂ ಉಣ್ಣೆ ಬಟ್ಟೆಗಳ ತಯಾರಿಕೆ ಸೇರಿದಂತೆ ವಸ್ತ್ರ ತಯಾರಿಕೆ ಬಣ್ಣ ಹಾಕುವುದು, ಬಟ್ಟೆಯಮೇಲೆ ಚಿತ್ರನಗಳನ್ನು ಹಾಕುವುದು, ಮುದ್ರಣವನ್ನು ಅಚ್ಚುಹಾಕುವುದು ನಡೆಯತ್ತಿತ್ತು. ಅಲ್ಲದೇ ಸಕ್ಕರೆ ಕೈಗಾರಿಕೆ, ಕಲ್ಲು ಕೆಲಸ, ಕಾಗದದ ತಯಾರಿಕೆಗಳು ಪ್ರಮುಖವಾಗಿ ಉದ್ಯಮಗಳಾಗಿ ಬೆಳೆದವು. ಇತರೆ ಉಪ ಕೈಗಾರಿಕೆಗಳಾದ ಪಾದರಕ್ಷೆಗಳ ತಯಾರಿಕೆ, ಆಯುಧಗಳ ತಯಾರಿಕೆಯಲ್ಲಿ ನಿರತರಾಗಿದ್ದರು".[೭] ಈ ರೀತಿಯಾಗಿ ಮಧ್ಯಕಾಲದಲ್ಲಿ ಬಟ್ಟೆ ನೇಕಾರಿಕೆಯು ಉಳಿದ ಉದ್ಯಮಗಳಂತೆ ಬೆಳವಣಿಗೆ ಹೊಂದಿತು.

ಭಾರತೀಯ ಕಲಾತ್ಮಕ ಕೈಮಗ್ಗದ ಉತ್ಪನ್ನಗಳಿಗೆ ಪ್ರಪಂಚದಾದ್ಯಂತ ಬಹುಬೇಡಿಕೆ ಉಂಟು. ದೇಶದ ಬನಾರಸ ಸೀರೆಗಳು, ಢಾಕಾದ ಮಸ್ಲೀನ್ ಬಟ್ಟೆಗಳು, ಧರ್ಮಾವರಂ, ಕಾಂಜವರಂ ಸೀರೆಗಳು, ಗುಜರಾತ ಹಾಗೂ ರಾಜಸ್ಥಾನ ಕಸೂತಿ ಬಟ್ಟೆಗಳು, ರಾಜ್ಯದ ಮೈಸೂರ ಸಿಲ್ಕ ಸಾರಿ, ಮೊಳ್ಕಾಲಮೂರು ಸೀರೆ, ಇಲಕಲ್ಲ ಸೀರೆ, ಗುಳೇದಗುಡ್ಡ ಖಣ, ಗದಗ-ಬೇಟಗೇರಿ ಕಾಟನ್ ಸೀರೆಗಳು ಇಂದಿಗೂ ಸಾಂಪ್ರದಾಯಿಕವಾಗಿ ಬೇಡಿಕೆಗಳನ್ನು ಉಳಿಸಿಕೊಂಡಿವೆ. ಭಾರತೀಯರು ಈ ಕಲೆಯಲ್ಲಿ ಸಾಧಿಸಿದ ನೈಪುಣ್ಯತೆ ಪ್ರಗತಿಯನ್ನು ಸೂಚಿಸುತ್ತದೆ. ಅತಿ ನಾಜೂಕಿನ ೨೦ ಅಡಿ ಅಗಲದ ಮಸ್ಲಿನ್ ಬಟ್ಟೆಗಳನ್ನು ಒಂದು ರಂಧ್ರದ ಮುಖಾಂತರ ತೋರಿಸಬಹುದು. ಸೀರೆಯನ್ನು ಒಂದು ಬೆಂಕಿಯ ಪೊಟ್ಟಣದಲ್ಲಿ ಇಡುವಂತೆ ತಯಾರಿಸುವ ಕಲೆ ನೇಕಾರರಿಗೆ ಒಲಿದಿರುವುದು. ಈ ತರಹದ ವಿಶಿಷ್ಟ ಕುಶಲತೆಗೆ ಎಲ್ಲರೂ ತಲೆದೂಗಲೆಬೇಕು.

**ಕರ್ನಾಟಕದಲ್ಲಿ ನೇಕಾರಿಕೆ:** "ಕನ್ನಡ ನಾಡಿನ ಸಂಸ್ಕೃತಿಯಲ್ಲಿ ನೇಕಾರಿಕೆ ಹಾಸುಹೊಕ್ಕಾಗಿ ಬೆರತುಕೊಂಡಿದೆ. ಪ್ರಾಚೀನ ಕಾಲದಿಂದಲೂ ಕರ್ನಾಟಕದಲ್ಲಿ ನೇಕಾರಿಕೆ ಪ್ರಸಿದ್ಧಿಯನ್ನು ಪಡೆದಿದೆ. ಅಲ್ಲದೆ ಬಟ್ಟೆ ತಯಾರಿಸಲು ಬಳಸುತ್ತಿದ್ದ ನೂಲಿಗೆ, ಮಗ್ಗಗಳಿಗೆ, ಬಣ್ಣಗಳಿಗೆ ತೆರಿಗೆ ಹಾಕಲಾಗುತ್ತಿತ್ತು. ೧೯೭೬ರಲ್ಲಿ ಕೈಗೊಂಡ ಕೈಮಗ್ಗ ಗಣತಿಯ ಪ್ರಕಾರ ಕರ್ನಾಟಕದಲ್ಲಿ ೧,೦೨,೨೩೪ ಕೈಮಗ್ಗಗಳನ್ನು ಹಾಗೂ ೪೭,೦೨೩ ನೇಕಾರರ ಮನೆಗಳನ್ನು ಗುರುತಿಸಲಾಗಿದೆ".[೮] "ಇಳಕಲ್ಲ ಸೀರೆ ಉಟ್ಟು ಗುಳೇದಗುಡ್ಡದ ಖಣ ತೊಟ್ಟು ಹೊರಟಾಳ ನೋಡ ಚೆಲುವೆ" ಎಂಬ ನಾಣ್ಣುಡಿ ಈ ಭಾಗದಲ್ಲಿ ಜನಪ್ರೀಯವಾಗಿದೆ. ಬಾಗಲಕೋಟ ಶಿಲ್ಪಕಲೆಗೆ ಪ್ರಸಿದ್ಧಿ ಪಡೆದಂತೆ, ಇಳಕಲ್ಲ ಸೀರೆ ಮತ್ತು ಗುಳೇದಗುಡ್ಡದ ಖಣಗಳು ಪ್ರಸಿದ್ಧಿಯನ್ನು ಹೊಂದಿದೆ. ಬಾಗಲಕೋಟೆ ಜಿಲ್ಲೆಯ ಇಳಕಲ್ಲ, ಅಮೀನಗಡ, ಕಮತಗಿ, ಸೂಳಿಭಾವಿ, ಗುಡೂರು, ರಬಕವಿ, ಬನಹಟ್ಟಿ ಮುಂತಾದ ಊರುಗಳು ಕೈಮಗ್ಗದ ಸೀರೆಗಳನ್ನು ತಯಾರಿಸುವ ಪ್ರಮುಖ ಕೇಂದ್ರಗಳಿವೆ.

**ಬಟ್ಟೆ ಹಾಗೂ ಅರಿವೆ ಎಂಬ ಪದದ ಉತ್ಪತ್ತಿ:**

ಆಂಗ್ಲ ಭಾಷೆಯ ಕ್ಲಾತ್ ಎಂಬ ಪದವು ಕನ್ನಡದಲ್ಲಿ 'ಅರಿವೆ', ಬಟ್ಟೆ, ವಸ್ತ್ರ, ಕಪಡಾ ಎಂದು ಸಾಮಾನ್ಯವಾಗಿ ನಮ್ಮ ಪ್ರಾದೇಶಿಕ ಭಾಷೆಯಲ್ಲಿ ಕರೆಯುತ್ತೆವೆ.

'ಅರಿವೆ' ಅಥವಾ ಬಟ್ಟೆ ಎಂದರೆ, ಉಣ್ಣೆ, ಹತ್ತಿ, ರೇಷ್ಮೆ ಹಾಗೂ ಪ್ರಾಣಿ ಮತ್ತು ಸಸ್ಯ ಜನ್ಯಗಳಿಂದ ನಿರ್ಮಿತವಾದವುಗಳು ಎಂದು ನಿಖರವಾಗಿ ತಿಳಿಯುತ್ತೆವೆ.

'ಕರ್ಪಡ' ಎಂಬ ಶಬ್ದವು ದೇವನಾಗರಿ ಶಬ್ಧದಿಂದ ಬಂದಿರುವುದು ಎಂಬುವುದು ಭಾಷಾತಜ್ಞರ ಅಭಿಪ್ರಾಯವಾಗಿದೆ.

"ಟೆಕ್ಷಟಾಯಿಲ್ಸ್' ಎಂಬ ಇಂಗ್ಲಿಷಪದವು, ಲ್ಯಾಟಿನ್‌ಭಾಷೆಯ'ಟೆಕ್ಸರ್' ಎಂಬಪದದಿಂದ ಉತ್ಪತ್ತಿಹೊಂದಿದೆ. ಇದರ ಅರ್ಥ 'ನೇಯು' ಅಥವಾ ಹೊಲಿಯುವುದು ಎಂದಾಗುತ್ತದೆ".[5] ನೇಕಾರಿಕೆ ಎಂದರೆ ನೇಯುವ ಕೆಲಸ. ಬಟ್ಟೆಯನ್ನು ನೇಯುವಲ್ಲಿ ಬಳಸುವ ಸಾಧನವೇ 'ಮಗ್ಗ'(ಲೂಮ್). ಮಾನವನ ಶಕ್ತಿಯ ಮೇಲೆ ಅವಲಂಬಿತವಾದ ಮಗ್ಗಕ್ಕೆ 'ಕೈಮಗ್ಗ'(ಹ್ಯಾಂಡಲೂಮ್) ಎಂದು ಹಾಗೂ ವಿದ್ಯುತ್ ಶಕ್ತಿಯನ್ನು ಬಳಸಿಕೊಂಡು ಮಾನವನ ಸಹಾಯದ ಜೊತೆಯಲ್ಲಿ ಯಾಂತ್ರಿಕವಾಗಿ ನಡೆಯುವ ಮಗ್ಗಕ್ಕೆ ಯಾಂತ್ರಿಕ ಮಗ್ಗ ಹಾಗೂ ವಿದ್ಯುತ್ ಚಾಲಿತ ಮಗ್ಗ(ಪವರಲೂಮ್)ಎಂದು ಕರೆಯುತ್ತಾರೆ. ಸಾಮಾನ್ಯ ಅರ್ಥದಲ್ಲಿ ಎಳೆಗಳನ್ನು ಸರಿಸಮನಾಗಿ ಜೋಡಿಸುವುದನ್ನು ನೇಕಾರಿಕೆ ಎಂದು ಕರೆಯುತ್ತಾರೆ. ಅದನ್ನು ನಿರ್ವಹಿಸುವ ಮನುಷ್ಯನನ್ನು ನೇಕಾರ ಎಂದು ಹೇಳಬಹುದಾಗಿದೆ. ಸಂಪೂರ್ಣ ಮಾನವ ಶಕ್ತಿ ಸಂಪನ್ಮೂಲಗಳ ಮೇಲೆ ಅವಲಂಬಿತವಾಗಿ ನಡೆಯುವ ಬಟ್ಟೆ ತಯಾರಿಕಾ ಉದ್ಯಮಕ್ಕೆ ಕೈಮಗ್ಗ ನೇಕಾರಿಕಾ ಉದ್ಯಮವೆಂದು ಹಾಗೂ ಸಂಪೂರ್ಣವಾಗಿ ವಿದ್ಯುತ್ ಶಕ್ತಿಯ ಆಧಾರದಲ್ಲಿ ಮನುಷ್ಯನ ಸಹಾಯದಿಂದ ನಡೆಯುವ ಮಗ್ಗದ ಕೆಲಸವನ್ನು ವಿದ್ಯುತ್ ನೇಕಾರಿಕೆ ಎಂದು ಸಾಮಾನ್ಯವಾಗಿ ಜನರು ಹೇಳುವಂತದ್ದಾಗಿದೆ.

ಕೈಮಗ್ಗದ ಉತ್ಪನ್ನಗಳನ್ನು ನೋಡಿದಾಗ ಹಲವಾರು ರೀತಿಯಲ್ಲಿ ತಯಾರಾಗುವ ಹಾಗೂ ಸೂಕ್ಮವಾದ ಮತ್ತು ಬಣ್ಣದಿಂದ ಕೂಡಿರುವಂತ ಬಟ್ಟೆಗಳನ್ನು ಭಾರತದಲ್ಲಿ ಹಿಂದಿನಿಂದಲೂ ಉಳಿಸಿಕೊಂಡು ಬರಲಾಗಿದೆ. ಭಾರತದ ಗ್ರಾಮೀಣ ಜನರ ಪ್ರಮುಖ ಗುಡಿ ಕೈಗಾರಿಕೆಯಾಗಿದೆ. ಕೈಮಗ್ಗ ನೇಕಾರಿಕೆಯು ಹೆಚ್ಚಾಗಿ ಮನೆಯಲ್ಲಿಯೆ ಕುಳಿತುಕೊಂಡು ನೇಯುವುದರಿಂದ ಇದು ಎಲ್ಲರೂ ತಯಾರಿಸುವಂತ ಮನೆಯಲ್ಲಿ ಮಾಡುವಂತ ಕಸುಬಾಗಿದೆ. ಇದರಲ್ಲಿ ಪ್ರಮುಖವಾಗಿ ಮಹಿಳೆಯರು ಈ ಕಾರ್ಯದಲ್ಲಿ ಪೂರ್ಣವಾಗಿ ತೊಡಗಿರುವ ಉದಾಹರಣೆಗಳನ್ನು ಕಾಣುತ್ತೇವೆ. ನೇಕಾರಿಕೆಯು ಪಾರಂಪರಿಕ ಕೆಲಸವಾಗಿರುವುದರಿಂದ ಭಾರತದಲ್ಲಿ ನಿರಂತರವಾಗಿ ಅದರ ಜೊತೆಯಲ್ಲಿ ಬೆರತು ತಿಳಿದು ಕೊಂಡಿರುತ್ತಾರೆ. ಇವರು ಹೆಚ್ಚಿನ ಶಿಕ್ಷಣ ಪಡೆದವರಲ್ಲಿಲ. ನೇಕಾರಿಕೆಯ ಎಲ್ಲ ಕೌಶಲ್ಯಗಳನ್ನು ಅವರು ಸ್ವ-ಅನುಭವದಿಂದ ರೂಢಿಸಿಕೊಂಡಿರುತ್ತಾರೆ.

ಭಾರತದಲ್ಲಿ ಹಲವಾರು ಪ್ರದೇಶದಲ್ಲಿ ಈ ವೃತ್ತಿಯನ್ನು ವಂಶಪರಂಪರೆಯಿಂದ ಮಾಡಿಕೊಂಡು ಬಂದಿರುವುದಕ್ಕೆ ಹಲವಾರು ಸಮುದಾಯಗಳನ್ನು ಇಂದಿಗೂ ಈ ವೃತ್ತಿಯಿಂದ ಗುರುತಿಸಲು ಸಾಧ್ಯವಾಗಿದೆ. ಅಂತಹ ಸಮುದಾಯಗಳಲ್ಲಿ ಪ್ರಮುಖವಾಗಿ ಕರ್ನಾಟಕದಲ್ಲಿನ ಉತ್ತರ ಕರ್ನಾಟಕದ ವ್ಯಾಪ್ತಿಯಲ್ಲಿ ನೋಡುವುದಾದರೆ, ದೇವಾಂಗ, ಸ್ವಕುಳಸಾಲಿ, ಹಟಗಾರ, ಚಿಕ್ಕಕುರುಹಿನಶೆಟ್ಟಿ, ಬಿಳಿಜಾಡರು, ಪಟ್ಟಸಾಲಿ ಜಾಡರು, ಮುಂತಾದ ನೇಕಾರಿಕಾ ಒಳ ಪಂಗಡಗಳು ಕಂಡುಬರುತ್ತವೆ. ಆದ್ದರಿಂದ ನೇಕಾರಿಕೆಯ ಜನಸಮುದಾಯದ ಅಧ್ಯಯನಕ್ಕೆ ಹಾಗೂ ನೇಕಾರಿಕೆಯ ನೈಪುಣ್ಯತೆಯನ್ನು ಕಾಣಲು ನಮಗೆ ಅನುಕೂಲವಾಗಿದೆ. ಹಲವಾರು ಸಮುದಾಯಗಳನ್ನು ಇಂದಿಗೂ ತಮ್ಮ ಪ್ರಾದೇಶಿಕ ಪಾರಂಪರಿಕ ಉತ್ಪನ್ನಗಳನ್ನೆ ನೇಯ್ದುಕೊಂಡು ತಮ್ಮ ಉಪಜೀವನನ್ನು ಕಳೆಯುತ್ತಿದ್ದಾರೆ.

ನೇಕಾರಿಕೆ 'ವ್ಯಕ್ತಿಕೇಂದ್ರ' ವೃತ್ತಿಯಾಗದೆ, ಸಾಮೂಹಿಕವಾಗಿ ನಡೆಯುವ ಉದ್ಯಮವಾಗಿ ಬೆಳೆದುನಿಂತಿದೆ. ಇಂದು ನೇಕಾರರ ಸ್ಥಿತಿಗತಿಗಳ ಮೇಲೆ ಮಾತ್ರ ಪ್ರಭಾವ ಬೀರದೆ ದೇಶದ ಆರ್ಥಿಕತೆಯ ಮೇಲೂ ಪ್ರಭಾವ ಬೀರುವಂತಹ ವೃತ್ತಿಯಾಗಿದೆ. ಅಷ್ಟೇ ಅಲ್ಲದೆ ಸಾಂಸ್ಕೃತಿಕ ಜಗತ್ತಿನಲ್ಲಿ ಅಗ್ರಸ್ಥಾನವನ್ನು ಪಡೆದಿದೆ. ಕೈಮಗ್ಗ ನೇಕಾರಿಕೆಯು ಇತರ ಪೂರಕ ಉದ್ಯೋಗಗಳಾದ ಹತ್ತಿ, ರೇಷ್ಮೆ ವ್ಯವಸಾಯ, ಬಣ್ಣಗಾರಿಕೆ ಮುಂತಾದವುಗಳ ಪರೋಕ್ಷ ಬೆಳವಣಿಗೆಗೆ ಕಾರಣವಾಗಿದೆ.

**ನೇಯ್ಗೆಯ ನೇಕಾರನ ವೃತ್ತಿಯ ಪ್ರಕ್ರಿಯೆ:**

"ನೇಕಾರಿಕೆಯಲ್ಲಿ ಮೊದಲು ಬಟ್ಟೆ ನೇಯುವ ಮುಂಚಿತವಾಗಿ ಹಲವಾರು ರೀತಿಯಲ್ಲಿ ಪೂರ್ವ ತಯಾರಿ ನಡೆಯುತ್ತದೆ. ಆ ಪೂರ್ವ ತಯಾರಿಕೆಯು ರೇಷ್ಮೆ, ನೂಲು ಇತರೆ ತರಹದ ಕಚ್ಚಾ ವಸ್ತುಗಳಿಗೆ ಸಂಬಂಧಿಸಿರುತ್ತದೆ. ಇಲ್ಲಿ ರೇಷ್ಮೆ, ನೂಲಿನ ಹಾಗೂ ಉಣ್ಣೆಯ ಬಟ್ಟೆಯ ಬಗ್ಗೆ ವಿವರಣೆ ನೀಡಲಾಗಿದೆ. ಕಚ್ಚಾವಸ್ತು ಪಡೆದ ನಂತರದಲ್ಲಿ ನೂಲನ್ನು ಹದ ಮಾಡಲು ರೀಲ್‌ಗಳ ಮೂಲಕ ಹಲವಾರು ಎಳೆಗಳನ್ನು ಜೋಡಿಸುವಂತ ಕಾರ್ಯ ಮಾಡುವರು. ನಂತರ ಕೆಲಸಕ್ಕೆ ಪಾಗಡಿ ಅಥವಾ ಲಡಿಗಳು(ನೂಲು) ಅಂದರೆ ನೂಲು ಬಹು ತೆಳವಾದ ರೂಪದಲ್ಲಿರುವುದರಿಂದ ಅದನ್ನು ಹಲವಾರು ಎಳೆಗಳಿಂದ ಕೂಡಿಸಿ ನೇಯ್ಗೆಗೆ ಕೊಡಲು ಸಿದ್ದಪಡಿಸಿರುವ ನೂಲನ್ನು ಪಾಗಡಿ ಅಥವಾ ಲಡಿ ಎಂದು ಕರೆಯುತ್ತಾರೆ. ಈ ಪ್ರಕ್ರಿಯೆಯು ಇಂದು ಯಂತ್ರಗಳಿಂದ ನಿರ್ವಹಿಸಲಾಗುತ್ತದೆ ಎಂದು ಶ್ರೀ ಬಸವರಾಜ ಹುಳಬುತ್ತಿಯವರು ಅಭಿಪ್ರಾಯ.

**ಬಣ್ಣ ಹಾಕುವುದು:** ಕಚ್ಚಾ ಸಾಮಗ್ರಿ ರೂಪದಲ್ಲಿ ಬಂದಿರುವಂತ ಪಾಗಡಿಯನ್ನು ತಮ್ಮ ಬೇಡಿಕೆಯ ಆಧಾರದಲ್ಲಿ ಅವುಗಳಿಗೆ ಬಣ್ಣವನ್ನು ಹಾಕಿಸುವಂತ ಕ್ರಿಯೆ ನಡೆಯುತ್ತದೆ. ಇದನ್ನು ಮಾಡುವವರು ಬಣಗಾರರು ಮತ್ತು ನೀಲಗಾರರ ವರ್ಗದವರು. ಸೀರೆ ಹಾಗೂ ಖಣಗಳ ತಯಾರಿಕೆಯಲ್ಲಿ ಮತ್ತು ಮಾರಾಟವನ್ನು ಹೆಚ್ಚಿಸಲು ಪ್ರಮುಖವಾಗಿ ಆಕರ್ಷಕವಾಗಲು ಬಣ್ಣವು ಅತಿ ಮುಖ್ಯವಾಗಿರುತ್ತದೆ. ಮೊದಮೊದಲು ಸಾಂಪ್ರದಾಯಿಕವಾಗಿ

ಸಸ್ಯಜನ್ಯ ಹಾಗೂ ಪ್ರಾಣಿಜನ್ಯ ಬಣ್ಣಗಳನ್ನು ಬಳಸುತ್ತಿದ್ದ ಜನರು, ಇಂದು ಬೇಡಿಕೆಯ ಪರಿಣಾಮ ಹಾಗೂ ಶ್ರಮ ಕಡಿಮೆ ಇರುವಂತ ಕೆಲಸವನ್ನು ಮಾಡಲು, ರಾಸಾಯನಿಕ ಸಹಿತ ಬಣ್ಣವನ್ನು ಬಳಸುತ್ತಿದ್ದಾರೆ. ಬಣ್ಣಗಾರಿಕೆಯು ಒಂದು ಕೌಶಲ್ಯಬರಿತ ವೃತ್ತಿ, ಏಕೆಂದರೆ ನೂಲಿಗೆ ಬಳಿಸಿದ ಬಣ್ಣವು ಯಾವುದೇ ರೀತಿಯಲ್ಲಿ ಮಾಸಿ ಹೋಗದಂತೆ ಬಣ್ಣದ ಮಿಶ್ರಣ ಮಾಡುವಂತ ಕುಶಲತೆಯು ಅವರಲ್ಲಿ ಕಂಡುಬರುತ್ತದೆ. ಬಣ್ಣವನ್ನು ಮಿಶ್ರಣಮಾಡುವಂತ ಸಂದರ್ಭದಲ್ಲಿ ವ್ಯತ್ಯಾಸವುಂಟಾದರೆ ಆ ನೂಲಿನ ಗುಣಮಟ್ಟ ಕೆಡುವುದು ಹಾಗೂ ಸೀರೆಯು ಆಕರ್ಷಕವಾಗಿರುವುದಿಲ್ಲ. ಅದಲ್ಲದೆ ಬಣ್ಣದ ತಯಾರಿಕೆಯಲ್ಲಿ ಆರೋಗ್ಯದ ಕ್ರಮಗಳು ಮುಖ್ಯವಾಗಿರುತ್ತವೆ. ಸ್ವಲ್ಪ ವ್ಯತ್ಯಾಸ ಕಂಡರೂ ಕಣ್ಣಿನ ಹಾಗೂ ಚರ್ಮಗಳ ರೋಗಗಳಿಗೆ ತುತ್ತಾಗುವ ಸಾಧ್ಯತೆಯಿದೆ. ಆದ್ದರಿಂದ ಈ ಪ್ರಕ್ರಿಯೆ ಸಾಮಾನ್ಯವಾಗಿ ನೂಲಿನ ಬೇಡಿಕೆಗೆ ಅನುಗುಣವಾಗಿ ವಿವಿಧ ಬಣ್ಣವನ್ನು ಮಾಡುವಂತ ಕ್ರೀಯೆ ನಡೆಯುತ್ತದೆ. ಈ ಬಣ್ಣದ ಘಟಕಗಳು ಈ ವ್ಯಾಪ್ತಿಯಲ್ಲಿ ಹೆಚ್ಚು ಕಂಡುಬರುತ್ತವೆ. ಇದನ್ನು ಬಣ್ಣಗಾರಿಕೆ ಮಾಡುವ ಶ್ರಿ ಶ್ರೀಕಾಂತ ಮಲಜಿಯವರು ತಿಳಿಸಿದ್ದಾರೆ.

**ನೂಲನ್ನು ಸಡಿಲಗೊಳಿಸುವುದು ಮತ್ತು ಡಬ್ಬಿ ತೊಡುವುದು.**

ನೂಲಿಗೆ ಬಣ್ಣ ಹಾಕಿ ಒಣಗಿಸಿದ ಮೇಲೆ ಅದನ್ನು ಸಡಿಲಗೊಳಿಸಿ 'ಡಬ್ಬಿಗಳ'ಮೇಲೆಸುತ್ತುವ ಕ್ರೀಯೆಗೆ ಡಬ್ಬಿ ಅಥವಾ ರೀಲಿಂಗ್ ಎಂದು ಕರೆಯುತ್ತಾರೆ. ಸೀರೆ ಹಾಗೂ ಖಣಗಳ ಹಾಸನ್ನು ತಯಾರಿಸಲು ಬೇಕಾದ ಚಮಕಾ, ರೇಷ್ಮೆಯನ್ನು ನೇಕಾರರಿಗೆ ಬಳೆಗಳ ರೂಪದಲ್ಲಿ ಕೊಡಲಾಗುತ್ತದೆ. ರಾಟೆಮುದ್ದೆ ಹಾಗೂ ಕೋಲುಗಳ ಸಹಾಯದಿಂದ ಟಿನ್ ಡಬ್ಬಿಗಳ ಮೇಲೆ ಚಮಕಾ, ರೇಷ್ಮೆ ಎಳೆಗಳನ್ನು ಸುತ್ತಲಾಗುತ್ತದೆ. ಈ ತೋಡುವ ಅಥವಾ ಬಳೆ ಸುತ್ತುವ ಕೆಲಸವನ್ನು ವಯಸ್ಸಿನ ಭೇದವಿಲ್ಲದೆ ಎಲ್ಲಾ ಹೆಣ್ಣುಮಕ್ಕಳು ನಿರ್ವಹಿತ್ತಾರೆ. ಇದಕ್ಕೆ ಕಿರು ಉದ್ಯಮದಂತೆ ಬೇರೆ ಕೆಲಸಗಾರರು ಮಾಡುತ್ತಾರೆ. ಈ ಕೆಲಸವನ್ನು ನೇಕಾರರು ಮಾಡುತ್ತಾರೆ. ಎಂದು ಮಾಹಿತಿದಾರರಾದ ಶ್ರೀ ಶಂಕರ ಹಿಪ್ಪರಗಿ ಅವರು ತಿಳಿಸಿದ್ದಾರೆ.

**ನೂಲನ್ನು ಹೊಯ್ಯುವುದು ಅಥವಾ ಹರಿ ಟಾಣಗಿ ಮಾಡುವುದು.**

ಡಬ್ಬಗೆ ಸುತ್ತಲಾದ ರೇಷ್ಮೆ ಅಥವಾ ಚಮಕಾವನ್ನು ಬಿಡಿಸಿ ಟಾಣಿಗೆ ಎಂಬ ಸಾಧನಕ್ಕೆ ಸುತ್ತುತ್ತಾ ಹೋಗುವ ಕ್ರಿಯೆಗೆ ಹೊಯ್ಯುವುದು ಅಥವಾ ಹರಿಟಾಣಿಗೆ ಹಾಕುವುದು ಎಂದು ಕರೆಯತ್ತಾರೆ ಈ ವಿಧಾನದಿಂದ ಡಬ್ಬಿಗೆ ಸುತ್ತಲಾದ ನೂಲಿನ ಎಳೆಗಳನ್ನು ಸೀರಿ ನೇಯಲು ಬೇಕಾದ ಹಾಸಿನ ಅಳತೆಗೆ ಪರಿವರ್ತಿಸಿಕೊಳ್ಳುತ್ತಾರೆ. ಇದಕ್ಕೆ ಬಳಸುವ ಸಾಧನಕ್ಕೆ 'ಹಾಸಿನಹರಿ' ಎಂತಲೂ ಕರೆಯುತ್ತಾರೆ. ಈ ಕ್ರಿಯೆಯು ಸಾಮಾನ್ಯವಾಗಿ ಬಯಲು ಪ್ರದೇಶದಲ್ಲಿ ಮನೆ ಅಂಗಳದಲ್ಲಿ ಅಥವಾ ಖಾಲಿ ಪ್ರದೇಶದಲ್ಲಿ ಟಾನಗಿಯನ್ನು ಹದಮಾಡುತ್ತಾರೆ. ಎಂದು ನೇಯಿಗೆ ತಿಳುವಳಿಕೆದಾರ ಶ್ರೀ ಸಂಗಪ್ಪ ಮೊರಬದ ಹೇಳುತ್ತಾರೆ.

**ಹಾಸನ್ನು ಅಂಟುಹಾಕುವುದು**

ಸೀರೆಯ ಹಾಸನ್ನು(ಟಾಣಗಿ) ತಯಾರಿಸಿಕೊಂಡ ಮೇಲೆ ಅದಕ್ಕೆ 'ಮಿನಸರಿ ಅಂಟು'ಹಾಕುವ ಕ್ರಿಯೆಯೆ ಅಂಟು ಹಾಕುವುದು. ಮಿನಸರಿ ಅಥವಾ ನೀರನ್ನು ಅಂಟು ಮಿಶ್ರಣಮಾಡಿದ ಜಿಗುಟನ್ನು ಪ್ರತಿ ಲೀಟರ್‌ನೀರಿಗೆ ೧೩ ಗ್ರಾಂ ಕುಡಿಸುತ್ತಾರೆ. ಸರಿಯಾಗಿ ಅಂಟು ಕರಗಿದ ಮೇಲೆ ಇದಕ್ಕೆ ಎರಡು ಲೀಟರ್ ತಣ್ಣೀರನ್ನು ಕೂಡಿಸಿಬಂದ ದ್ರಾವಣದಲ್ಲಿ ಟಾಣಗಿಯನ್ನು ಸಂಪೂರ್ಣವಾಗಿ ನೆನಸಿಟ್ಟು ಹದಿನೈದು ನಿಮಿಷಗಳ ಕಾಲ ಬಿಟ್ಟು ಆ ಮೇಲೆ ಬಿಸಿಲಿನಲ್ಲಿ ಉಂಕಿಹರಿಯ ಮೇಲೆ ಹಾಸಿ ಒಣಗಿಸಲಾಗುವುದು. ಇದರಿಂದಾಗಿ ನೂಲಿನ ಎಳೆಗಳು ಬೀರುಸಾಗಿ ನೇಯಲು ಅನುಕೂಲಕರವಾಗುತ್ತದೆ (ಹಾಸಿನ ಹರಿ ಹಾಗೂ ಉಂಕಿನ ಹರಿ ಬೇರೆ ಬೇರೆ ಆಗಿರುತ್ತವೆ.) ಸೀರೆಯ ವಡ್ಲದ ನೂಲಿಗೆ ಮಾತ್ರ(ವಡ್ಲ ಅಂದರೆ-ಸೀರೆ ಅಥವಾ ಖಣಗಳ ನಡುಭಾಗದಲ್ಲಿರುವ ಹಾಸು) ಅಂಟನ್ನು ಹಾಕುತ್ತಾರೆ. ಆದರೆ ಸಾಮಾನ್ಯವಾಗಿ ಸೀರೆಯ ದಡಿ ಹಾಗೂ ಮೇಲ್ ಸೆರಗಿನ ಭಾಗದಲ್ಲಿ ಉಪಯೋಗಿಸುವ ನೂಲಿಗೆ ಅಂಟನ್ನು ಹಾಕಲಾಗುವುದಿಲ್ಲ. ಎಂದು ಶ್ರೀ ಗೋಪಾಲ ಮುಸಿಗೇರಿ ಅವರು ಹೇಳುತ್ತಾರೆ.

**ಟಾಣಗಿ ಹಾಕುವುದು**

ಸೀರೆಯ ಹಾಗೂ ಖಣಗಳ ವಡ್ಲದ ಹಾಸಿನ ನೂಲಿನ ಎಳೆಗಳನ್ನು ಸೆರಗಿನ ಎಳೆಗಳಿಗೆ ಕೊಂಡಿಗಳ ರೂಪದಲ್ಲಿ ಜೊಡಿಸುವ ಕೆಲಸಕ್ಕೆ ಟಾಣಗಿ ಹಾಕುವುದು. ಇದಕ್ಕಾಗಿ ಕಟ್ಟಿಗೆಯಿಂದ ತಯಾರಿಸಿದ ಟಾಣಹರಿ ಎಂಬ ಸಾಧನವನ್ನು ಉಪಯೋಗಿಸುತ್ತಾರೆ.

ಟಾಣಗಿ ಹಾಕುವ/ಸೆರಗಿಗೆ ಕೊಂಡಿ ಹಚ್ಚುವ ಕ್ರಿಯೆ ಇಳಕಲ್ಲ ಸೀರೆ ವೈಶಿಷ್ಟವೂ ಹೌದು. ಪಾರಂಪರಿಕ ಇಳಕಲ್ಲ ಸೀರೆಗಳಲ್ಲಿ ಎದ್ದು ಕಾಣುವ 'ಟೋಪ ತೆನಿ ಸೆರಗಿನ' ಮತ್ತು ವಡ್ಲದಲ್ಲಿ ಬಳಕೆಯಾಗುವ ನೂಲು ಹಾಗೂ ಬಣ್ಣಗಳಲ್ಲಿ ಸಾಕಷ್ಟು ವ್ಯತ್ಯಾಸಗಳನ್ನು ಕಾಣಬಹುದು. ಸಾಮಾನ್ಯವಾಗಿ ವಡ್ಲಕ್ಕು ೧೨೦ ಡಿನೀಯರ್ ಚಮಕಾ ಸೆರಗಿಗಾಗಿ ೭೫ ಡಿನೀಯರ ರೇಷ್ಮೆಯನ್ನು ಬಳಸುತ್ತಾರೆ. ವಡ್ಲದ ಚಮಕ ಮತ್ತು ಸೆರಗಿನ ರೇಷ್ಮೆಯ ಎಳೆಗಳನ್ನು ಕೊಂಡಿಯಕಾರದಲ್ಲಿ ಜೊಡಿಸುವ ಟಾಣಗಿಹಾಕುವ ಕ್ರಿಯೆ ಇಳಕಲ್ಲ ಸೀರೆಯ ನೇಕಾರಿಕೆಯ ಒಂದು ಪ್ರಮುಖ ಹಂತವು ಹೌದು. ಆದರೆ ಗುಳೇದಗುಡ್ಡ ಖಣಗಳಿಗೆ ಟಾಣಗಿಯನ್ನು ಕೊಂಡಿ ಹಾಕುವುದಿಲ್ಲ ಮೇಲಾಗಿ ಕೆಚ್ಚುವ ಕ್ರಿಯೆ ನಡೆಯುತ್ತದೆ. ಎಂದು ಶ್ರೀ ನಾಗಪ್ಪ ಲಕ್ಷ್ಮಪ್ಪ ಗುಡ್ಡದ ಅವರು ಹೇಳುತ್ತಾರೆ

**ಹಣಗಿ ಕೆಚ್ಚುವುದು;**

ಸೀರೆಯನ್ನು ಬೇಕಾದ ಅಳತೆಗೆ ನೇಯ್ದು ನಂತರ ಅದನ್ನು ಅಡ್ಡಲಾಗಿ ಕೊಯ್ಯಲಾಗುತ್ತದೆ. ಹೀಗೆ ಮಾಡುವಾಗ ಸುಮಾರು ೪ ಇಂಚು ನೇಯ್ದ ಸೀರೆ ಹಣಗೆಯ ಒಂದು ಬದಿಯಲ್ಲಿ ೧೦ರಿಂದ ೧೨ ಸೆಂಟಿ

ಮೀಟರ್‌ನಷ್ಟು ಉದ್ದದ ನೂಲಿನ ಎಳೆಗಳು ಉಳಿಯುವ ಹಾಗೆ ಸೀರೆಯನ್ನು ಮಗ್ಗದ ಮೇಲೆಯೆ ಕತ್ತರಿಸಲಾಗುತ್ತದೆ. ಹಣಗಿಯನ್ನು ಮಗ್ಗದಿಂದ ಹೊರ ತೆಗದ ನಂತರ 'ಕೆಚಗುಣಿಕಿಗಳ'ಸಹಾಯದಿಂದ ನಿಲ್ಲಿಸಿ ಹಳೆಹಾಸಿನ ಎಳೆಗಳನ್ನು ಹೊಸ ಹಾಸಿನ ಎಳೆಗಳೊಂದಿಗೆ ಜೋಡಿಸುವ ಕ್ರಿಯೆಗೆ ಹಣಗಿ ಕೆಚ್ಚುವುದು. ಈ ವಿಧಾನ ಎಲ್ಲ ವಿದಧ ಕೈಮಗ್ಗ ಬಟ್ಟೆಗಳ ತಯಾರಿಕೆಯಲ್ಲಿ ಕಂಡುಬರುತ್ತದೆ. ಬೇರೆ ಬೇರೆ ವಿನ್ಯಾಸದ ಸೀರೆ ಹಾಗೂ ಖಣಗಳ ತಯಾರಿಕೆಯಲ್ಲಿ ಬೇರೆ ಬೇರೆ ನೂಲುಗಳನ್ನು, ಬಣ್ಣ ಬಣ್ಣದ ನೂಲುಗಳನ್ನು ಜೋಡಿಸಲು ಹಣಗಿಗಳನ್ನು ಸಿದ್ದಪಡಿಸಿರುತ್ತಾರೆ. ಸೀರೆ, ಖಣಗಳು, ಪಟಗಾ ಹಾಗೂ ಇತರೆ ಕೈಮಗ್ಗದ ಉತ್ಪನ್ನಗಳಲ್ಲಿ ನಡೆಯುವ ಪ್ರಮುಖ ಕ್ರಿಯೆ. ಈ ಕ್ರಿಯೆಯು ಕೈಮಗ್ಗ ಹಾಗೂ ವಿದ್ಯುತ್ ಚಾಲಿತ ಮಗ್ಗಗಳಲ್ಲಿ ನಿರಂತರವಾಗಿ ಸಾಗುತ್ತಲಿದೆ. ಎಂದು ಶ್ರೀಮತಿ ದುಂಡವ್ವ ಮೊರಬದ ಅಭಿಪ್ರಾಯ ಬಿಚ್ಚಿಟ್ಟರು.

**ಮಡಕಿ ಕಟ್ಟುವುದು:**

ಕೆಚ್ಚಿದ ಹೊಸ ನೂಲನ್ನು ಹಣಗಿಯಿಂದ ಮಗ್ಗಕ್ಕೆ ಜೋಡಿಸುವ ಕ್ರಿಯೆಗೆ ಮಡಿಕೆ ಕಟ್ಟುವುದೆಂದು ಕರೆಯುತ್ತಾರೆ. ಇದು ಪ್ರತಿಸಲ ಹಣಗಿಯನ್ನು ಕೆಚ್ಚಿದ ನಂತರ ನೂಲನ್ನು ಹದ ಮಾಡಿ ನೇಯುವುದಕ್ಕೆ ಸಹಕರಿಸಲು ಸಹಾಯವಾಗುತ್ತದೆ. ಇದು ಟಾನು ಕೋಲಗಳ ಮೂಲಕವಾಗಿ ಮಗ್ಗದ ಎದುರು ಇರುವ ಮಿನಿ ಗೂಟಕ್ಕೆ ಕಟ್ಟಲಾಗುತ್ತದೆ. ಇದು ಹಾಸು ಹೂಡಿದಹಾಗೆ ಕಾಣುವುದು ಇದರಿಂದ ಮುಂದೆ ಮಗ್ಗವು ಸರಾಗವಾಗಿ ಸಾಗಲು ಅನುಕೂಲ ಮಾಡಿಕೊಡುತ್ತದೆ. ಈ ಮಡಕಿ ಕಟ್ಟುವುದು ಕೈಮಗ್ಗದ ಕುಣಿಮಗ್ಗಗಳಲ್ಲಿ ಈ ವ್ಯವಸ್ಥೆ ಕಂಡುಬರುವುದು. ಆದರೆ ವಿದ್ಯುತ್ ಚಾಲಿತ ಹಾಗೂ ಆಟೋಮೇಟಿಕ್ ಕೈ ಮಗ್ಗಗಳಿಗೆ ಮಡಕಿ ಕಟ್ಟುವುದಿಲ್ಲ. ಅದರ ಬದಲು ಹಾಸು ಎಳೆಗಳನ್ನು ಬಿಮ್ ಮೂಲಕ ಸುತ್ತಿರುತ್ತಾರೆ. ಎಂದು ಶ್ರೀ ಮಲಕಾಜಪ್ಪ ಸಮಗಂಡಿ ಅವರು ಹೇಳುತ್ತಾರೆ.

**ಹೊಕ್ಕಿನ ಕಂಡಿಕೆಯನ್ನು ಸಿದ್ದಗೊಳಿಸುವುದು**

ನೇಕಾರಿಕೆಯಲ್ಲಿ ಪ್ರಮುಖ ಕೆಲಸ ಹೊಕ್ಕನ್ನು ಕಂಡಿಕೆಗೆ ಸುತ್ತುವುದು. ಇದು ಹೊಕ್ಕು ಎಂದರೆ ಸೀರೆ ಉತ್ಪಾದಿಸುವ ಕ್ರಿಯೆಯಲ್ಲಿ ಅದರ ಹಾಸುವಿನ ನಡುವೆ ಹರಿದಾಡುವ ಎಳೆ(ಹೊಕ್ಕು) ಇರುತ್ತದೆ. ಆ ಹೊಕ್ಕಿನ ಎಳೆ ಹಾಸಿನೊಂದಿಗೆ ಬೆರತು ಸುಂದರ ಬಟ್ಟೆಯಾಗುತ್ತದೆ. ನೇಯುವ ಕ್ರಿಯೆಯಲ್ಲಿ ನೂಲನ್ನು ಲಾಳಿಯ ಸಹಾಯದಿಂದ ಹಾಸುಗೆ ಅಡ್ಡಲಾಗಿ ಸೇರಿಸುತ್ತಾ ಹೋಗಲಾಗುತ್ತದೆ. ಅದಕ್ಕಾಗಿ ಹೊಕ್ಕುವಿನ ಕಂಡಿಕೆಯನ್ನು ಸಿದ್ದಪಡಿಸಿಕೊಳ್ಳಬೇಕು. ಬಳೆಗಳ ರೂಪದಲ್ಲಿರುವ ಹತ್ತಿಯ ನೂಲನ್ನು ಮೊದಲು ಹಟ್ಟಿ (ಬಿದಿರಿನ ಕೋಲು) ಸುತ್ತುವರು. ಇದಕ್ಕೆ ಬಳೆ ತೊಡುವುದು ಎಂದು ಕರೆಯುತ್ತಾರೆ. ನಂತರ ಹಟ್ಟಿಗೆ ಸುತ್ತಲಾದ ನೂಲನ್ನು ಚರಕದ ಸಹಾಯದಿಂದ ಕಂಡಿಕೆಗೆ ಸುತ್ತುವರು. ಆ ಕಂಡಿಕೆಗಳನ್ನು ಲಾಳಿಯಲ್ಲಿ ಸೇರಿಸಿ ಸೀರೆಯ ಹಾಗೂ ಖಣಗಳ ಹೊಕ್ಕನ್ನು ನೇಯುವರು.

ಶುದ್ಧ ರೇಷ್ಮೆ ಸೀರೆಗಳನ್ನು ಹೊರತುಪಡಿಸಿದರೆ ಸಾಮಾನ್ಯವಾಗಿ ಇಳಕಲ್ಲ ಮಾದರಿ ಸೀರೆ ಹಾಗೂ ಗುಳೇದಗುಡ್ಡ ಖಣಗಳನ್ನು ನೇಯಲು ಕರಿ ನೂಲಿನ ಕಂಡಿಕೆಗಳನ್ನು ಹೆಚ್ಚಾಗಿ ಬಳಸಲಾಗುತ್ತದೆ. ಎಳೆಗಳ ಮೇಲೆ ಎಳೆಗಳನ್ನು ಸೇರಿಸುತ್ತಾ ಹೋಗುವ ಈ ಕ್ರಿಯೆ ನಿಧಾನವಾಗಿದೆ. ಪ್ರತಿ ನೇಕಾರ ಒಂದು ದಿನದಲ್ಲಿ (ಸುಮಾರು ೮ ರಿಂದ ೧೦ ಗಂಟೆಯವರೆಗೆ) ಸಾಮಾನ್ಯವಾಗಿ ೨,೩,೫ ಮೀಟರ್ ಸೀರೆಯನ್ನು ಹಾಗೂ ಖಣಗಳನ್ನು ನೇಯುತ್ತಾರೆ. ಪ್ರತಿ ಮಗ್ಗದಿಂದ ಒಂದು ತಿಂಗಳ ಅವಧಿಯಲ್ಲಿ ಸುಮಾರು ೧೯ ಮೊಳದ ೬ ಸೀರೆಗಳನ್ನು ತಯಾರಿಸುತ್ತಾರೆ. ನೇಕಾರಿಕೆಯಲ್ಲಿ ಮಹಿಳೆಯರು ಸಹ ಕೆಲಸ ಮಾಡುತ್ತಾರೆ. ಎಂದು ಶ್ರೀಮತಿ ಲಕ್ಷ್ಮೀ ನಾರಾ ಅವರು ತಿಳಿಸಿದ್ದಾರೆ. ನೇಕಾರಿಕೆಯಲ್ಲಿ ಮಹಿಳೆ: ಈ ನೇಕಾರಿಕೆಯಲ್ಲಿ ಮಹಿಳೆಯು ಪುರುಷರಷ್ಟೆ ಸರಿಸಮನಾದ ಕಾರ್ಯವನ್ನು ಈ ನೇಕಾರಿಕೆ ವೃತ್ತಿಯಲ್ಲಿ ಮಾಡುತ್ತಾಳೆ. ಎಂದು ಹಿರಿಯರಾದ ಶ್ರೀ ಶೇಖರಪ್ಪ ಹೊಸಮನೆ ಅಭಿಪ್ರಾಯವಾಗಿದೆ.

**ಮಗ್ಗಗಳಲ್ಲಿ ಪ್ರಕಾರಗಳು ಹಾಗೂ ಕೈಮಗ್ಗಗಳಲ್ಲಿ ಸ್ಥಿತ್ಯಂತರ**

'ಮಗ್ಗ'ನೂಲಿನ ಎಳೆಗಳನ್ನು ಬಳಸಿ ಬಟ್ಟೆಯನ್ನು ನೇಯುವ ಒಂದು ಸಾಧನ. ಇದರ ಸಹಾಯದಿಂದ ನೇಯ್ಗೆಯ ನಡುಹಾಸುವಿಗೆ ಅಡ್ಡವಾಗಿ ಬಿಗುವಿನಿಂದ ನೂಲಿನ ಎಳೆಗಳನ್ನು ಸೇರಿಸುತ್ತಾ ಹೋಗುವ ಕ್ರಿಯೆಗೆ ನೇಯುವುದು ಎಂದು ಕರೆಯುತ್ತಾರೆ. ಮಗ್ಗದ ಆಕಾರದ ಮತ್ತು ಅದರ ತಾಂತ್ರಿಕ ಲಕ್ಷಣಗಳು ಹಾಗೂ ಅದರ ಕೌಶಲ್ಯಗಳ ಮೇಲೆ ಮಗ್ಗಗಳನ್ನು ಈ ಕೆಳಗಿನಂತೆ ವಿಂಗಡಿಸಬಹುದು.

೧. **ತೂರು ಲಾಳಿ ಕುಣಿ ಕೈಮಗ್ಗ:** ಈ ಕೈಮಗ್ಗದಲ್ಲಿ ನೇಯುವಾಗ ನೇಕಾರ ನೂಲಿನ ಲಾಳಿಯನ್ನು ಹಾಸಿಗೆ ಅಡ್ಡವಾಗಿ ಒಂದು ಬದಿಯಿಂದ ಕೈಯಿಂದ ಹಾಯಿಸಿ ಎದುರು ಬದಿಯಲ್ಲಿ ಇನ್ನೊಂದು ಕೈಯಿಂದ ಲಾಳಿಯನ್ನು ಹಿಡಿದುಕೊಳ್ಳುತ್ತಾ ಹೋಗುವನು. ಇದು ಬಹಳ ನಿಧಾನವಾದ ಕ್ರಿಯೆಯಾಗಿದ್ದು ಬಹಳ ಪರಿಶ್ರಮದ ಕೆಲಸ. ಈ ವಿಧಾನದಲ್ಲಿ ಬೇರೆ ಬೇರೆ ವಿನ್ಯಾಸಗಳನ್ನು ನೇಯುವುದು ಹಾಗೂ ಅಳವಡಿಸಿಕೊಳ್ಳಲು ಸಾಕಷ್ಟು ಆಸ್ಪದ ಇರುವುದಿಲ್ಲ. ಈ ಕೈಮಗ್ಗವನ್ನು ಮಗ್ಗದ ಕುಣಿಯ ಮೇಲೆ ನಿಲ್ಲಿಸಲಾಗಿರುತ್ತದೆ. ಇಲ್ಲಿ ಕುಣಿ ರಹಿತ ಹಾಗೂ ಕುಣಿ ಸಹಿತ ಕೈಮಗ್ಗಗಳು ಇದ್ದವು. ಕುಣಿಯಲ್ಲಿ ಕುಳಿತು ಕಾಲಿನಿಂದ ತುಳಿಯುತ್ತಾ ನೇಯುತ್ತಾ ಹೋಗುತ್ತಾರೆ. ಇಂತಹ ಕೈ ಮಗ್ಗಗಳು ನಮ್ಮ ದೇಶದಲ್ಲಿ ಕ್ರಿ.ಪೂ. ೫೦೦೦ ವರ್ಷಗಳಿಂದ ಉಪಯೋಗಿಸುತ್ತಿದ್ದಾರೆ ಈ ಮಗ್ಗಗಳ ಮೂಲಕ ೪ ರಿಂದ ೫ ಮೀಟರ್ ಬಟ್ಟೆ ನೇಯಲು ಸುಮಾರು ೧೨ ಘಂಟೆ ಬೇಕಾಗುವುದು. ಕಾಲಾನಂತರ ಇವುಗಳ ಆಕಾರ ಹಾಗೂ ವಿನ್ಯಾಸಗಳಲ್ಲಿ ಬದಲಾಗುತ್ತಾ ಸಾಗಿದವು.

೨. **ಹಾರು ಲಾಳಿ ಕುಣಿ ಕೈಮಗ್ಗ:** ಕೈಮಗ್ಗ ಕ್ಷೇತ್ರದಲ್ಲಿ ಕ್ರಾಂತಿಯನ್ನೆ ಉಂಟುಮಾಡಿದ ಈ ಹಾರು ಲಾಳಿ ಮಗ್ಗದ ಸಂಶೋಧನೆಯಿಂದ ಕೈಮಗ್ಗದ ಉತ್ಪನ್ನ ಗಣನೀಯ ಪ್ರಮಾಣದಲ್ಲಿ ಏರಲು

ಸಹಾಯವಾಯಿತು. ಕ್ರಿ.ಶ. ೧೭೩೩ರಲ್ಲಿ ಇಂಗ್ಲೆಂಡ ದೇಶದ ಬ್ಯೂರಿಯಾ ಜಾನ್ ಕೇ ಎಂಬ ವಿಜ್ಞಾನಿ ಕಂಡುಹಿಡಿದನು. ಹಾರು ಲಾಳಿ ಕೈಮಗ್ಗದಲ್ಲಿ ಲಾಳಿಯನ್ನು ಕೈಯಿಂದ ಹಾಕುವ ಬದಲಾಗಿ ಶೆಟಲ್ ಮುಖಾಂತರ ವೇಗವಾಗಿ ಒಂದು ತುಂದಿಯಿಂದ ಇನ್ನೊಂದು ತುದಿಗೆ ಚಲಿಸುವಂತೆ ಮಾಡಲಾಗಿರುತ್ತದೆ. ಕೈ ಹಿಡಿಯ(ಒಗ್ಗಟ್ಟು)ನ್ನು ಜಗ್ಗುವುದರ ಮುಖಾಂತರ ನೂಲಿನ ಕಂಡಿಕೆಯನ್ನು ಹೊತ್ತುಕೊಂಡು ಲಾಳಿ ಅಡ್ಡಲಾಗಿ ಸೀರೆಯ ಒಂದು ಬದಿಯಿಂದ ಇನ್ನೊಂದು ಬದಿಗೆ ಚಲಿಸುವುದರಿಂದ ನೇಯಲು ಅನಕೂಲವಾಗುತ್ತದೆ. ಇಲ್ಲಿ ಮನುಷ್ಯನ ಶ್ರಮ ಕಡಿಮೆ ಹಾಗೂ ಉತ್ಪಾದನೆ ಹೆಚ್ಚಾಗ ತೊಡಗಿತು. ಇವು ಇಂದಿಗೂ ಬಾಗಲಕೋಟ ಜಿಲ್ಲೆಯಲ್ಲಿ ಕೈಮಗ್ಗಗಳು ಸೀರೆ ಹಾಗೂ ಖಣಗಳ ನೇಯಲು ಹೆಚ್ಚಾಗಿ ಬಳಸುವುದು ಕಂಡುಬರುತ್ತವೆ.

೩. **ಹಾರು ಲಾಳಿಯ ಚೌಕಟ್ಟಿನ ಕೈಮಗ್ಗ:** ಕುಣಿ ಮಗ್ಗಗಳಲ್ಲಿ "ಕುಣಿ"ಮಗ್ಗದಕೆಳಗೆ ಇರುವುದರಿಂದ ಇದರಲ್ಲಿ ಕಸ-ಕಡ್ಡಿ, ಕ್ರಿಮಿ, ಕೀಟಗಳು ಸೇರುವ ಅಪಾಯವಿರುತ್ತದೆ. ಆದ್ದರಿಂದ ಕುಣಿಗಳ ಬದಲಾಗಿ ಮಗ್ಗವನ್ನು ಭೂಮಿಯ ಮೇಲಿಂದ ಎತ್ತರದಲ್ಲಿ ಒಂದು ಕಟ್ಟಿಗೆಯ ಚೌಕಟ್ಟಿನ ಮೇಲೆ ನಿಲ್ಲಿಸಿ ನೇಯಲು ಅನುಕೂಲ ಮಾಡಿಕೊಡುವ ಉದ್ದೇಶದಿಂದ, ಹಾರು ಲಾಳಿಯ ಚೌಕಟ್ಟಿನ ಮಗ್ಗಗಳು ಚಾಲ್ತಿಗೆ ಬಂದವು. ಈ ಮಗ್ಗಗಳು ಹೆಚ್ಚಿನ ಸ್ಥಳವನ್ನು ಆಕ್ರಮಿಸಿ ಕೊಳ್ಳುವುದರಿಂದ ಮತ್ತು ಇವುಗಳ ಬೆಲೆ ಕುಣಿ ಮಗ್ಗಗಳಿಗಿಂತ ಹೆಚ್ಚಾಗಿರುವುದರಿಂದ ಹಾಗೂ ಈ ಮಗ್ಗಗಳು ಹೆಚ್ಚಿನ ಪ್ರಮಾಣದಲ್ಲಿ ತಾಂತ್ರಿಕ ದೋಷಗಳು ಕಂಡುಬರುವುದರಿಂದ ಇವುಗಳನ್ನು ಬಳಸುವುದು ಕಡಿಮೆ ಕಂಡುಬಂದಿದೆ. ಎಂದು ಹಿರಿಯ ನೇಕಾರರಾದ ಶ್ರೀ ಯಮನಪ್ಪ ತಂಬೂರಿ ಹಾಗೂ ಹಿರಿಯರುಗಳ ಅಭಿಪ್ರಾಯವಾಗಿದೆ.

**ಕೈಮಗ್ಗದ ಉತ್ಪನ್ನಗಳು:**

ಬಾಗಲಕೋಟ ಜಿಲ್ಲೆಯಲ್ಲಿ ತಯಾರಿಸುವ ಪ್ರಮುಖ ಕೈಮಗ್ಗ ಉತ್ಪನ್ನಗಳಲ್ಲಿ ಗುಳೇದಗುಡ್ಡದ ಖಣ, ಇಳಕಲ್ಲ ಮಾದರಿಯ ಸೀರೆಗಳು ಪಾರಂಪರಿಕವಾಗಿ ಬೆಳೆದು ಬಂದಿರುವುದರಿಂದ ಬಹಳ ಪ್ರಸಿದ್ದಿಯಾಗಿವೆ. ಈ ಪ್ರದೇಶದಲ್ಲಿ ಇಂದು ಆಧುನಿಕ ಶೈಲಿಯ ರೇಷ್ಮೆ ಸೀರೆಗಳು, ಕಾಟನ್ ಬಟ್ಟೆಗಳು, ಕಾಟನ್ ಸೀರೆಗಳು, ಚಮಕಾ ಸೀರೆಗಳನ್ನು ಉತ್ಪಾದಿಸುತ್ತಿದ್ದಾರೆ.

**ಬಾಗಲಕೋಟ ಜಿಲ್ಲೆಯ ಭಾಗದ ಬಟ್ಟೆಯಲ್ಲಿನ ಪ್ರಮುಖ ಉತ್ಪನ್ನಗಳು:**

ಶುದ್ಧ ರೇಷ್ಮೆ ಸೀರೆಗಳು
ರೇಷ್ಮೆ-ಕಾಟನ್ ಸೀರೆಗಳು
ಚಮಕಾ-ಕಾಟನ್ ಸೀರೆಗಳು
ಶುದ್ಧ ರೇಷ್ಮೆ ಖಣಗಳು
ರೇಷ್ಮೆ-ಕಾಟನ್ ಖಣಗಳು
ಚಮಕಾ-ಕಾಟನ್ ಖಣಗಳು
ಪಾಲಿಸ್ಟರ್ ಕಾಟನ್ ಖಣಗಳು
ಪಾಲಿಸ್ಟರ್-ಪಾಲಿಸ್ಟರ್ ಖಣಗಳು

ಈ ಮೇಲ್ಕಾಣಿಸಿದ ಉತ್ಪನ್ನಗಳನ್ನು ಭಾಗದಲ್ಲಿ ಉತ್ಪಾದಿಸಲಾಗುತ್ತದೆ. ಈ ರೀತಿ ತಯಾರಾದ ಉತ್ಪನ್ನಗಳು ಹಲವು ವಿನ್ಯಾಸಗಳು, ಹಲವು ವಿಧದ ಸೀರೆ ಹಾಗೂ ಖಣಗಳನ್ನು ಇಲ್ಲಿನ ನೇಕಾರರು ಉತ್ಪಾದಿಸುವಲ್ಲಿ ಸಿದ್ಧಹಸ್ತರು. ಇವರು ಇಂದಿಗೂ ಕೈಮಗ್ಗದಲ್ಲಿಯ ಉತ್ಪನ್ನಗಳನ್ನೆ ಹೆಚ್ಚು ನೇಯುತ್ತಾರೆ. ಇಲ್ಲಿನ ಸೀರೆಗಳಲ್ಲಿ ಅವುಗಳ ಅಳತೆಯ ಆಧಾರದ ಮೇಲೆ ಮೂರು ವಿಧಗಳಾಗಿವೆ. ಅವುಗಳು ೧೨ವಾರಿನ ಸೀರೆಗಳು(೫.೪ ಮೀಟರ್), ೧೬ವಾರಿನ ಸೀರೆಗಳು(೭.೨ ಮೀಟರ್), ೧೮ವಾರಿನ ಸೀರೆಗಳು(೮.೧ ಮೀಟರ್)ನ ಸೀರೆಗಳನ್ನು ನೇಯುತ್ತಾರೆ. ಗುಳೇದಗುಡ್ಡ ಖಣಗಳಲ್ಲಿ ರೇಷ್ಮೆ ಹಾಗೂ ಚಮಕಾ ನೂಲುಗಳಲ್ಲಿ ೫ಹುಂಜ, ೬ಹುಂಜ, ೮ಹುಂಜ ಎಂದು ಅದರ ಶುದ್ಧತೆ ಆಧಾರದಲ್ಲಿ ಗುರುತಿಸುತ್ತಾರೆ. ಇವು ಸಾಂಪ್ರದಾಯಕ ವಿನ್ಯಾಸಗಳನ್ನು ಹೊಂದಿರುತ್ತವೆ. ಈ ಸಾಂಪ್ರದಾಯಿಕ ವಿನ್ಯಾಸಗಳ ಹಾಗೂ ಪ್ರಕೃತಿಯಲ್ಲಿ ಸಿಗುವಂತ ಹೂ, ಗಿಡ, ಪ್ರಾಣಿ, ಪಕ್ಷಿಗಳ ಹೆಸರಿನಿಂದಿರುವುದುಕಂಡುಬರುತ್ತವೆ. ಉದಾ: ಇಳಕಲ್ ಮಾದರಿ ಸೀರೆಗಳಲ್ಲಿ ತೋಪ್ ತೆನಿ, ರಾಘಾವಳಿ, ಮಲ್ಲಿಗೆ ಖಣ, ತೆರು ಖಣ ಮುಂತಾದವುಗಳು.

**ಉತ್ಪನ್ನಗಳ ಮಾರಾಟದ ವ್ಯವಸ್ಥೆ:**

ಈ ಸಾಂಪ್ರದಾಯಿಕ ಉತ್ಪನ್ನಗಳಾದ ಇಳಕಲ್ಲ ಸೀರೆ, ಗುಳೇದಗುಡ್ಡದ ಖಣಗಳನ್ನು ಹೆಚ್ಚಾಗಿ ಕೊಂಡುಕೊಳ್ಳುವುದು ಮಹಾರಾಷ್ಟ್ರದ ಹಲವಾರು ಜಿಲ್ಲೆಗಳಲ್ಲಿ ಹಾಗೂ ಉತ್ತರ ಕರ್ನಾಟಕದ ಗ್ರಾಮೀಣ ಪ್ರದೇಶದ ಜನ. ಆದ್ದರಿಂದ ಇದರ ಉತ್ಪನ್ನದ ಪ್ರಮಾಣವು ಹೆಚ್ಚಾಗಿದ್ದು ಇದರ ಮಾರಾಟದ ಪ್ರಮಾಣ ದಿನದಿಂದ ದಿನಕ್ಕೆ ಕಡಿಮೆಯಾಗುತ್ತಿದೆ. ಇಲ್ಲಿ ಈ ಉತ್ಪಾದನೆಗಳನ್ನು ಮಾರಾಟ ಮಾಡುವುದರಲ್ಲಿ ಹಲವಾರು ವ್ಯವಸ್ಥೆಗಳು ಕಂಡುಬರುತ್ತವೆ. ನೇರ ಮಾರಾಟ, ಬಂಡವಾಳಶಾಹಿಗಳಿಗೆ ಮಾರಾಟ ಹಾಗೂ ಹೊರ ರಾಜ್ಯದ ವ್ಯಾಪಾರಿಗಳು ಉತ್ಪನ್ನಗಳನ್ನು ತಯಾರಿಸಲು ಮುಂಗಡ ಹಣನೀಡುವ ವ್ಯವಸ್ಥೆ.

**ನೇಕಾರಿಕೆ ಹಾಗೂ ಮಾರುಕಟ್ಟೆಯ ಕ್ರಿಯೆಯ ವಿನ್ಯಾಸ (ಸೀರೆ ಹಾಗೂ ಖಣ ಉತ್ಪಾದನೆಗಳ ವಿವಿಧ ಹಂತಗಳು ೧) ನೇಯ್ಗೆಯ ಪೂರ್ವದಲ್ಲಿನ ಕೆಲಸಗಳು ೨) ನೇಯುವ ಕ್ರೀಯೆ ೩) ಉಡುಪು ತಯಾರಿಸಿದ ನಂತರದ ಹಂತ**






**ನೇಕಾರಿಕೆಯ ಉದ್ದಿಮೆ ವ್ಯವಸ್ಥೆ:**

ನೇಕಾರಿಕೆಯಲ್ಲಿ ಖಾಸಗಿ ವಲಯ, ಸಹಕಾರಿ ವಲಯ ಹಾಗೂ ಸರಕಾರಿ ವಲಯದಲ್ಲಿ ಉದ್ದಿಮೆಯು ನಿರಂತರವಾಗಿ ನಡೆಯುತ್ತಲಿದೆ. ಇದರಲ್ಲಿ ಪ್ರಮುಖವಾಗಿ ಖಾಸಗಿ ವಲಯಗಳಲ್ಲಿ ನೇಕಾರಿಕೆಯನ್ನು ಮಾಡುತ್ತಿದ್ದಾರೆ. ಈ ಭಾಗದಲ್ಲಿ ಹೆಚ್ಚಾಗಿ ನಡೆದುಕೊಂಡು ಸಾಗುತ್ತಲಿದೆ. ಇಲ್ಲಿ ಸಹಕಾರಿ ಕ್ಷೇತ್ರದಲ್ಲಿ ನೇಕಾರಿಕೆಗಳು ನಡೆಯುತ್ತಿದ್ದರು, ಅದರ ಮೂಲ ವ್ಯಾಪಾರಿಯು ಖಾಸಗಿಯಾಗಿ ನಡೆಯುತ್ತಿರುತ್ತದೆ. ಆದರೂ ಈ ಸಂದರ್ಭದಲ್ಲಿ ಅದನ್ನು ಚರ್ಚಿಸಬೇಕಾದ ವಿಷಯವಾಗಿದೆ.

೧. **ಖಾಸಗಿ ವಲಯ:** ಖಾಸಗಿ ವಲಯದಲ್ಲಿರುವರ ನೇಕಾರಿಕೆಯು ಪ್ರಮುಖವಾಗಿ ಕಂಡುಬಂದರು ಅದರಲ್ಲಿ ಎರಡು ಭಾಗಗಳಾಗಿ ನೋಡಬಹುದಾಗಿದೆ.

**ಅ. ಸ್ವತಂತ್ರ ನೇಕಾರರು:** ಸ್ವತಂತ್ರ ನೇಕಾರ ತನ್ನದೆ ಆದ ಕೈಮಗ್ಗವನ್ನು ಹೊಂದಿದ್ದು. ಬಟ್ಟೆ ನೇಯಲು ಬೇಕಾದ ಕಚ್ಚಾಮಾಲನ್ನು ಸ್ವಂತ ಹಣದಿಂದ ಖರೀದಿಸಿ, ಕುಟುಂಬದ ಇತರ ಸದಸ್ಯರ ಸಹಾಯದಿಂದ ಬಟ್ಟೆಯನ್ನು ನೇಯ್ದು ಮಾರಾಟ ಮಾಡುತ್ತಾನೆ. ಅವರು ತಯಾರಿಸಿದ ಉತ್ಪನ್ನಕ್ಕೆ ಸ್ವತಂತ್ರವಾಗಿರುತ್ತಾರೆ ಹಾಗೂ ಅವರಿಗೆ ಮಾರುವಂತ ಹಕ್ಕು ಇರುತ್ತದೆ. ಇಲ್ಲಿ ಅವರು ಈರೀತಿಯಿಂದ ಸ್ವತಂತ್ರವಾಗಿದ್ದರು ಇಲ್ಲಿ ಮಾರುಕಟ್ಟೆಯ ಆಧಾರದಲ್ಲಿ ಮಾರಾಟ ಮಾಡಬೇಕಾಗುತ್ತದೆ. ಒಳ್ಳೆಯ ಬೆಲೆ ಇದ್ದರೆ ಜೀವನದಲ್ಲಿ ಆ ನೇಕಾರರು ಸಿಹಿ ಊಟ ಮಾಡುತ್ತಾರೆ. ಆದರೆ ಬೆಲೆ ಕುಸಿತದಿಂದ ಬಂಡವಾಳವು ಮರಳಿ ಬಾರದಂತಾಗುತ್ತದೆ. ಹೀಗಾಗಿ ನೇಕಾರರ ಸ್ಥಿತಿ ಗಂಭೀರವಾಗಿರುವುದು.

**ಆ. ಮಾಲಿಕತ್ವದ/ಮುಂಗಡು ನೇಕಾರರು:** ಈ ನೇಕಾರರು ನೇಯುವ ಕಚ್ಚಾಮಾಲನ್ನು ಮಾಲೀಕರ ಕಡೆ ತೆಗೆದುಕೊಂಡು ಬರುತ್ತಾರೆ. ಅದನ್ನು ನೇಯ್ದು ಕೊಡಲು ಮುಂಗಡವಾಗಿ ಕಚ್ಚಾ ಮಾಲು ಪಡೆಯುತ್ತಾರೆ. ಇಲ್ಲಿ ಹಣವಿದ್ದ ನೇಕಾರರು ಹಣಕೊಟ್ಟು ಕಚ್ಚಾ ಮಾಲು ಖರೀಧಿಸಬಹುದು, ಹಣ

ಇಲ್ಲದ ಬಡವನು ಮುಂಗಡವಾಗಿ ನೂಲನ್ನು ತೆಗೆದುಕೊಂಡು ಬರುತ್ತಾನೆ. ಕುಟುಂಬ ಇದು ಖರೀಧಿ ಮಾಡಿದ ಮಾಲನ್ನು ಸೀರೆ ಹಾಗೂ ಖಣವನ್ನು ತಯಾರಿಸಿದ ನಂತರ ಮಾರುಕಟ್ಟೆಯ ಬೆಲೆಯಲ್ಲಿ ಮಾರಾಟ ಮಾಡುತ್ತಾರೆ. ಈ ಮಾಲೀಕತ್ವದಲ್ಲಿ ನೇಕಾರಿಕೆಯಲ್ಲಿಯು ನೇಕಾರರು ಮಾರುಕಟ್ಟೆ ಕಡಿಮೆ ಇದ್ದಾಗ ಕಷ್ಟವನ್ನು ಅನುಭವಿಸುತ್ತಾರೆ.

ಬಾಗಲಕೋಟ ಜಿಲ್ಲೆಯಲ್ಲಿ ಸಹಕಾರಿ ಕ್ಷೇತ್ರಕ್ಕಿಂತಲೂ, ಖಾಸಗಿ ಒಡೆತನದ ನೇಕಾರಿಕೆಯು ಸದ್ಯದ ಸ್ಥಿತಿಯಲ್ಲಿ ಕಂಡುಬರುತ್ತದೆ. ಈ ಖಾಸಗಿ ಒಡೆತನದ ನೇಕಾರಿಕೆಯಲ್ಲಿ ಮುಂಗಡ ಪದ್ದತಿ ನೇಕಾರಿಕೆ, ಸಟ್ಟಾ ನೇಕಾರಿಕೆ ಪದ್ದತಿ ಹಾಗು ರೋಕಡಾ ಪದ್ದತಿ ಎಂಬ ಮೂರು ರೀತಿಯ ಪದ್ದತಿ ಇರುವುದು ಕಂಡು ಬರುತ್ತದೆ.

**ಅ) ಮುಂಗಾಡ ಪದ್ದತಿ:** ಈ ಪದ್ದತಿಯಲ್ಲಿ ನೇಕಾರರಿಗೆ ೧೫ ರಿಂದ ೩೦ ಸೀರೆಗಳಿಗೆ ಬೇಕಾಗುವಷ್ಟು ಕಚ್ಚಾ ಮಾಲನ್ನು ಒಂದೇ ಸಲ ಪೂರೈಸಲಾಗುತ್ತದೆ. ನೇಕಾರರು ಕುಟುಂಬದ ಸದಸ್ಯರೆಲ್ಲರ ಸಹಾಯದಿಂದ ತೋಡುವುದು, ಕೆಚ್ಚುವುದು, ಹಾಸುವುದು, ಮುಂತಾದ ಪೂರ್ವ ತಯಾರಿ ಕೆಲಸಗಳನ್ನು ಕುಟುಂಬಗಳೇ ಮಾಡುತ್ತವೆ. ಸೀರೆ ಅಥವಾ ಖಣವನ್ನು ತಯಾರಿಸಿ ಮಾಲೀಕರಿಗೆ ತಂದು ಕೊಡುತ್ತಾರೆ. ಇದರ ಪ್ರತಿಫಲವಾಗಿ ನೇಕಾರರು ನೇಯ್ದು ಕೂಲಿಯನ್ನು ಪಡೆಯುತ್ತಾರೆ. ಕಚ್ಚಾ ವಸ್ತುವಿನ ಬೆಲೆಗಳ ಏರಿಳಿತಗಳು ನೇಕಾರನನ್ನು ಭಾದಿಸುವುದಿಲ್ಲ. ಅವರು ದುಡಿದಂತೆ ಮಜೂರಿ ಸಿಗುತ್ತದೆ.

**ಆ) ಸಟ್ಟಾ ಪದ್ಧತಿ:** ಈ ಪದ್ಧತಿಯಲ್ಲಿ ನೇಕಾರರು ಸೀರೆ ವ್ಯಾಪಾರಸ್ತರಿಂದ ಹಣವನ್ನು ಸಾಲದ ರೂಪದಲ್ಲಿ ಪಡೆದುಕೊಂಡು ಆ ಹಣದಿಂದ ಸೀರೆಗೆ ಹಾಗೂ ಖಣಗಳಿಗೆ ಬೇಕಾದ ಕಚ್ಚಾ ನೂಲು ಖರೀಧಿಸಿ, ಸೀರೆ ಅಥವಾ ಖಣವನ್ನು ನೇಯ್ದು ಮರಳಿ ಅದೇ ಧಣಿಗಳಿಗೆ ಅಥವಾ ವ್ಯಾಪಾರಿಗೆ ಮಾರಾಟ ಮಾಡುತ್ತಾರೆ. ವ್ಯಾಪಾರಸ್ಥರು ಮಾರುಕಟ್ಟೆ ದರದ ಅನುಸಾರ ಶುದ್ಧ ವಸ್ತುವನ್ನು ಖರೀದಿಸುತ್ತಾರೆ. ಇದರಲ್ಲಿ ನೇಕಾರರಿಗೆ ಕಚ್ಚಾ ಮಾಲಿನ ಹಣ ಹಾಗೂ ಸುದ್ಧ ಮಾಲನ್ನು ತಯಾರಿಸುವ ಹಂತದ ವೆಚ್ಚ ಹೋಗಲಾಗಿ ಎಷ್ಟು ಹಣ ಉಳಿಯುತ್ತದೆಯೋ. ಅದೆ ಅವನ ಲಾಭ ಅಥವಾ ಮಜೂರಿ, ಕೆಲವೊಮ್ಮೆ ಕಚ್ಚಾ ಮಾಲಿನ ಬೆಲೆ ಹೆಚ್ಚಾಗಿ ಶುದ್ಧ ವಸ್ತುವಿನ ಬೆಲೆ ಕಡಿಮೆ ಅಥವಾ ಸ್ಥಿರವಾಗಿ ಉಳಿದಾಗ ನೇಕಾರರು ನಷ್ಟಕ್ಕೆ ಒಳಗಾಗುವುದುಂಟು.

**ಇ) ರೊಕಡಾ ನೇಕಾರ ಪದ್ಧತಿ:** ಈ ಪದ್ಧತಿಯಲ್ಲಿ ನೇಕಾರರು ತಮ್ಮ ಸ್ವಂತ ಬಂಡವಾಳದಿಂದ ಕಚ್ಚಾ ಮಾಲನ್ನು ಖರೀಧಿಸಿ ಸೀರೆ ತಯಾರಿಸಿ, ಬೆಲೆ ಬಂದ ನಂತರ ಮಾರಾಟ ಮಾಡುತ್ತಾರೆ. ಈ ನೇಕಾರರು ಸ್ವತಂತ್ರವಿದ್ದು ಉಳಿದ ನೇಕಾರರಿಗಿಂತ ಆರ್ಥಿಕವಾಗಿ ಸಬಲರಾಗಿರಬಹುದಾಗಿದೆ. ಇವರು ಸ್ವಂತ ಕೈಮಗ್ಗಗಳನ್ನು ಹೊಂದಿದ್ದು ಕೆಲವು ಸೀರೆಗಳನ್ನು ನೇಯ್ದ ಮೇಲೆ ಅವುಗಳನ್ನು ದಲ್ಲಾಳಿ ಅಥವಾ ಮಾಲಿಕರಿಗೆ ಮಾರಾಟ ಮಾಡಿ ಬಂದ ಹಣದಲ್ಲಿ ಸ್ವಲ್ಪ ಭಾಗವನ್ನು ಸ್ವಂತ ಖರ್ಚಿಗೆ ಬಳಸಿಕೊಂಡು

ಉಳಿದ ಭಾಗವನ್ನು ಮರಳಿ ಸೀರೆಗೆ ಬೇಕಾದ ಕಚ್ಚಾಮಾಲನ್ನು ಕೊಳ್ಳಲು ವಿನಿಯೋಗಿಸಿಕೊಳ್ಳುತ್ತಾರೆ ಎಂದು ಶ್ರೀ ಹನಮಂತಪ್ಪ ಗೋಪಾಲಪ್ಪ ಪಲಮಾರಿ ಅವರು ಹೇಳುತ್ತಾರೆ.

**೨. ಸಹಕಾರಿ ವಲಯ**

ನೇಕಾರರಿಂದ ನೇಕಾರರಿಗಾಗಿ ಸ್ಥಾಪಿಸಲ್ಪಟ್ಟ ಈ ಸಹಕಾರಿ ಸಂಘಗಳು, ನೇಕಾರರು ಉತ್ಪಾದಿಸಿದ ಉತ್ಪನ್ನಗಳು ಸದಾಕಾಲ ಒಳ್ಳೆ ಮಾರುಕಟ್ಟೆ ಪಡೆಯಲು ಪ್ರೋತ್ಸಾಹ ನೀಡುತ್ತವೆ. ಈ ಸಹಕಾರಿ ಸಂಘಗಳ ಮೂಲಭೂತ ಕರ್ತವ್ಯಗಳಾದ ನೂಲಿನ ಖರೀದಿ, ಸದಸ್ಯರುಗಳಿಗೆ ನೂಲಿನ ಪೂರೈಕೆ, ನೇಯ್ದ ಸೀರೆಗಳ ಸಂಗ್ರಹ, ಕೂಲಿ ವಿತರಣೆ ಹಾಗೂ ಉತ್ಪನ್ನಗಳ ಮಾರಾಟ ಇವುಗಳನ್ನು ನಿರ್ವಹಿಸಿಕೊಂಡು ಹೋಗುವುದಾಗಿದೆ. ಇದರ ಜೊತೆಗೆ ಸರಕಾರದಿಂದ ದೊರೆಯುವ ಸೌಲಭ್ಯಗಳನ್ನು ನೇಕಾರರಿಗೆ ತಲುಪಿಸುವ ಹೊಣೆಯನ್ನು ಸಹ ಈ ಸಹಕಾರಿ ಸಂಘಗಳು ನಿರ್ವಹಿಸುತ್ತವೆ.

ಬಾಗಲಕೋಟ ಜಿಲ್ಲೆಯ ಮೊದಲ ಸಹಕಾರಿ ಸಂಘ ೧೯೩೬ರಲ್ಲಿ ಕಮತಗಿಯ ಗ್ರಾಮದಲ್ಲಿ ದಿ ಬಿಜಾಪೂರ ಡಿಸ್ಟ್ರಿಕ್ಟ್ ಇಂಡಸ್ಟ್ರಿಯಲ್ ಕೊ-ಆಪರೇಟಿವ್ಹ ಅಸೋಸಿಯೆಷನ್ ಲಿ, ಕಮತಗಿ ಎಂಬ ಹೆಸರಿನೊಂದಿಗೆ ಸ್ಥಾಪಿಸಲ್ಪಟ್ಟಿತ್ತು. ದಿನಾಂಕ ೨೫.೦೬.೧೯೪೨ರಲ್ಲಿ ದಿ ಇಳಕಲ್ಲ ನೇಕಾರ ಸಹಕಾರಿ ಉತ್ಪಾದಕರ ಸಂಘ ಆರಂಭವಾಯಿತು. ಸದ್ಯ ಇಳಕಲ್ಲ ನಗರದಲ್ಲಿ ೧೮ ಸಹಕಾರಿ ಸಂಘಗಳು ಅಸ್ಥಿತ್ವದಲ್ಲಿವೆ. ಇವುಗಳಲ್ಲಿ ಸಹಕಾರಿ ಸಂಘಗಳು ಲಾಭಕರವಾಗಿವೆ ಎಂದು ತಿಳಿಯುತ್ತದೆ. ಬಾಗಲಕೋಟ ಜಿಲ್ಲೆಯಲ್ಲಿ ಒಟ್ಟು ೧೪೩ ನೇಕಾರಿಕೆಯ ಸಹಾಕಾರಿ ಸಂಘಗಳು ಅಸ್ಥಿತ್ವದಲ್ಲಿದ್ದರು, ಅವುಗಳಲ್ಲಿ ಬೆರಳೆನಿಕೆಯಷ್ಟೆ ಸಹಕಾರಿ ಸಂಘಗಳು ಮಾತ್ರ ಪ್ರಗತಿಯ ಹಾದಿಯಲ್ಲಿವೆ. ಇದರಲ್ಲಿ ಸೂಳಿಭಾವಿಯ ಶಾಖಾಂಬರಿ ನೇಕಾರಿ ಸಹಕಾರಿ ಸಂಘವು ಜಿಲ್ಲೆಯಲ್ಲಿಯೇ ಉತ್ತಮ ಸಹಕಾರಿ ಸಂಘ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ನೇಕಾರರೂ ಸಹಕಾರಿ ಸಂಘದಲ್ಲಿ ಸದಸ್ಯರಾಗಲು ಈ ಕೆಳಗಿನ ನಿಯಮಗಳು ಜಾರಿಯಲ್ಲಿವೆ. ೧) ಸದಸ್ಯರಾಗುವವರ ಕನಿಷ್ಟ ವಯಸ್ಸು ೧೮ಕ್ಕಿಂತ ಮೇಲೆ ಇರಬೇಕು. ೨) ಸ್ಥಳೀಯ ನಿವಾಸಿಯಾಗಿರಬೇಕು. ೩) ಮೂಲ ಉದ್ಯೋಗ ನೇಕಾರಿಕೆ ಇರಬೇಕು. ಆದರೆ ಅವನು ಕಚ್ಚಾ ನೂಲಿನ ಅಥವಾ ಸೀರೆ ದಲ್ಲಾಳಿಯಾಗಿರಬಾರದು ೪) ಬೇರೆ ಸಹಕಾರಿ ಸಂಘದ ಸದಸ್ಯನಾಗಿರಬಾರದು.

**೩. ಸರಕಾರಿ ವಲಯ**

ಕರ್ನಾಟಕ ಕೈಮಗ್ಗ ಕ್ಷೇತ್ರದಲ್ಲಿ ನೇಕಾರರ ಸರ್ವಾಂಗೀಣ ಬೆಳವಣಿಗೆಯ ಉದ್ದೇಶವನ್ನು ಇಟ್ಟುಕೊಂಡು ೧೯೭೫ರಲ್ಲಿ ಕರ್ನಾಟಕ ಕೈಮಗ್ಗ ಅಭಿವೃದ್ಧಿ ಸಂಘ (ಕೆಎಚ್‌ಡಿಸಿ) ಅಸ್ಥಿತ್ವಕ್ಕೆ ಬಂದಿತು. ಇದು ಕರ್ನಾಟಕ ರಾಜ್ಯದ ಒಂದು ಉದ್ಯಮವಾಗಿದೆ. ಇದರ ಕೇಂದ್ರ ಕಛೇರಿ ಬೆಂಗಳೂರಿನಲ್ಲಿದೆ. ರಾಜ್ಯಾದ್ಯಾಂತ ಇದು ಶಾಖೆಗಳನ್ನು ಹೊಂದಿದೆ. ಬಾಗಲಕೋಟ ಜಿಲ್ಲೆಯ ಇಳಕಲ್ಲ, ರಬಕವಿ ಹಾಗೂ ಬನಹಟ್ಟಿ ನಗರಗಳಲ್ಲಿ ಹಾಗೂ ಕಮತಗಿಯಲ್ಲಿ ಕೆಎಚ್‌ಡಿಸಿ ಶಾಖೆಗಳಿವೆ. ಇಳಕಲ್ಲ ನಗರದಲ್ಲಿ ಮೇ ೧೯೭೬ರಲ್ಲಿ ಈ ಶಾಖೆಯು ಕೆಲಸ ಆರಂಭಿಸಿದೆ. ಪಾರಂಪರಿಕೆ ಇಳಕಲ್ಲ ಸೀರೆ ತಯಾರಿಕೆಯನ್ನು

ಉತ್ತೇಜಿಸುವುದರ ಜೊತೆಗೆ ಹೊಸ ವಿನ್ಯಾಸದ ಬಟ್ಟೆಗಳ ಉತ್ಪನ್ನಗಳನ್ನು ಪ್ರೋತ್ಸಾಹಿಸಿ ಮಾರುಕಟ್ಟೆಯನ್ನು ವಿಸ್ತರಿಸಿಕೊಳ್ಳುವ ಕಾರ್ಯಕ್ರಮಗಳನ್ನು ಕೆಎಚ್‌ಡಿಸಿ ಹಾಕಿಕೊಳ್ಳುತ್ತಾ ಬಂದಿದೆ. ಸರಕಾರ ಹಾಕಿಕೊಳ್ಳುವ ನೇಕಾರರ ಅಭಿವೃದ್ಧಿ ಕಾರ್ಯಕ್ರಮಗಳನ್ನು ಸಮರ್ಪಕವಾಗಿ ನೇಕಾರರ ಬಾಗಿಲಿಗೆ ತಲುಪಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತಿದೆ. ೧೯೮೪-೮೫ರಲ್ಲಿ ಡಚ್ಚ ಸಹಕಾರದ ಅಡಿಯಲ್ಲಿ ನೇಕಾರರಿಗಾಗಿ ಇಳಕಲ್ಲ ನಗರದಲ್ಲಿ ೧೫೪ ಕೆಲಸದ ಮನೆಗಳನ್ನು ನಿರ್ಮಿಸಿ ವಿತರಣೆ ಮಾಡಲಾಗಿದೆ. ಸ್ವಂತ ಮಗ್ಗವಿಲ್ಲದ ಕಾರ್ಮಿಕರಿಗೆ ನೇಯಲು ಅನುಕೂಲವಾಗುವಂತೆ ಸಾಮೂಹಿಕ ನೇಯ್ಗೆ ಕಾರ್ಯಕ್ರಮಗಳನ್ನು ಕೆಎಚ್‌ಡಿಸಿ ನೀಡಿದೆ. ಈ ವೃತ್ತಿಯನ್ನು ಕಲೆಯಲು ಆಸಕ್ತಿ ಉಳ್ಳವರಿಗೆ ತರಬೇತಿಯನ್ನು ಕೊಡುವುದರ ಜೊತೆಗೆ ಕೈಮಗ್ಗ ಉದ್ಯಮಕ್ಕೆ ಸಂಬಂಧಿಸಿದಂತೆ ಹಲವಾರು ಕಾರ್ಯಕ್ರಮಗಳನ್ನು ಹಾಕಿಕೊಳ್ಳಲಾಗುತ್ತಿದೆ. ಕೆಎಚ್‌ಡಿಸಿಯಲ್ಲಿ ಸದಸ್ಯನಾಗುವ ಪ್ರತಿಯೊಬ್ಬನಿಗೆ ಪಾಸ್ ಬುಕ್ಕ ವಿತರಿಸಲಾಗುತ್ತದೆ. ಸೀರೆ ಅಥವಾ ಬಟ್ಟೆ ತಯಾರಿಸಲು ಬೇಕಾದ ಕಚ್ಚಾ ವಸ್ತು ಹಾಗೂ ನೂಲು ಅವನಿಗೆ ಪೂರೈಸಿ ಬೇಕಾದ ವಿನ್ಯಾಸ ಸೀರೆ ಅಥವಾ ಬಟ್ಟೆಯನ್ನು ನೇಯ್ದುಕೊಂಡು ಬರಲು ನೇಕಾರರಿಗೆ ಹೇಳಲಾಗುತ್ತಿದೆ. ನೇಯ್ದ ಬಟ್ಟೆಯನ್ನು ಅವನು ಮರಳಿ ಕೇಂದ್ರಕ್ಕೆ ತಂದು ಕೊಟ್ಟಾಗ ಅವನಿಗೆ ಅದರ ಕೂಲಿಯನ್ನು ನೀಡುತ್ತಾರೆ. ನೇಯ್ಗೆ ಕೆಲಸವನ್ನು ಮುಂದುವರೆಸಿಕೊಂಡು ಹೋಗಲು ಕಚ್ಚಾ ಮಾಲನ್ನು ಪೂರೈಸಲಾಗುತ್ತದೆ, ಪೂರೈಸಿದ ಕಚ್ಚಾ ನೂಲಿನ ವಿವರ, ತಯಾರಿಸಿದ ಸೀರೆಯ ವಿವರ, ಕೊಡಬೇಕಾದ ಹಾಗೂ ಪಡೆದ ಕೂಲಿಯ ಎಲ್ಲಾ ವಿವರಗಳನ್ನು ಪಾಸ್ ಬುಕ್ಕನಲ್ಲಿ ನಮೂಧಿಸಲಾಗುತ್ತದೆ. ಹೊಸ ವಿನ್ಯಾಸವುಳ್ಳ ಬಟ್ಟೆಯನ್ನು ನೇಯಲು ಬೇಕಾದ ಸಲಕರಣೆಗಳ ಖರೀದಿಗೆ ಬ್ಯಾಂಕಿನಿಂದ ಸಾಲವನ್ನು ಪಡೆಯಲು ಕೂಡಾ ಕೆಎಚ್‌ಡಿಸಿ ಸಹಕರಿಸುತ್ತಿದೆ. ವರ್ಷದ ೧೨ ತಿಂಗಳು ನೇಕಾರರಿಗೆ ಕೆಲಸ ನೀಡುತ್ತಾ ಅವರ ಸರ್ವತೋಮುಖ ಅಭಿವೃದ್ಧಿಗೆ ಶ್ರಮವಹಿಸುತ್ತದೆ. ಆದರೆ ಸರಿಯಾದ ಸಮಯದಲ್ಲಿ ನೇಯ್ದ ಕೂಲಿ ಬಂದು ತಲುಪುವುದಿಲ್ಲ ಎಂದು ನೇಕಾರರ ಅಭಿಪ್ರಾಯವಾಗಿದೆ.

**ನೇಕಾರಿಕೆಯಲ್ಲಿ ಬಳಸುವ ಕಚ್ಚಾ ನೂಲು**

ಈ ವ್ಯಾಪ್ತಿಯಲ್ಲಿ ಪ್ರಮುಖವಾಗಿ ಬಳಸುವಂತ ನೂಲಿನ ಬಳಕೆಯ ವಿಧಗಳನ್ನು ಹೇಳಬಹುದಾಗಿದೆ. ಹತ್ತಿಯ ನೂಲು, ರೇಷ್ಮೆಯ ನೂಲು, ಚಮಕಾ(ಆರ್ಟ ಸಿಲ್ಕ್), ಜರಿ(ಪ್ಲಾಸ್ಟಿಕ್), ಚೈನಾ ರೇಷ್ಮೆ, ಇವುಗಳನ್ನು ನೇಕಾರರು ವಿನ್ಯಾಸಗಳಿಗೆ ಹಾಗೂ ಮಾಲೀಕ ವರ್ಗದವರು ಹಾಗೂ ಸಹಕಾರಿ ಸಂಘದಿಂದ ಯಾವ ಪ್ರಕಾರದ ನೂಲು ಬಳಸಲು ಸಲಹೆಯ ಮೇರೆಗೆ ತಮ್ಮ ಹಣಗಿಯನ್ನು ಕೆಚ್ಚಿಕೊಂಡು ನೇಯುತ್ತಾರೆ.

**ನೇಕಾರಿಕೆಯಲ್ಲಿ ಬಟ್ಟೆಗಳಿಗೆ ಬಳಸುವ ಬಣ್ಣಗಳ ವಿಶೇಷತೆ:** ಸಾಂಪ್ರದಾಯ ಉತ್ಪನ್ನಗಳಾದ ನೇಕಾರಿಕೆಯಲ್ಲಿನ ಇಳಕಲ್ಲ ಮಾದರಿಯ ಸೀರೆಗಳಲ್ಲಿ ಹಾಗೂ ಗುಳೇದಗುಡ್ಡ ಖಣಗಳಲ್ಲಿ ಇರುವ 'ಬಣ್ಣವು ನೋಡಲು ಬಲುಚೆಂದ ದೇಹಕ್ಕೆ ಬಲು ಆನಂದ' ಈ ಮಾತು ಕಳೆದ ೨೦ ವರ್ಷಗಳ ಹಿಂದೆ ಜನರು ಆಡಿಕೊಳ್ಳುತ್ತಿದ್ದರೆಂದು ಹಿರಿಯರು

ಹೇಳುತ್ತಾರೆ. ಈ ಉತ್ಪನ್ನಗಳು ಬಹಳ ಪ್ರಾಚೀನವಾದ್ದದವು ಎಂದು ತಿಳಿಯುತ್ತದೆ. ಈ ಪ್ರದೇಶವು ಗುಡ್ಡಗಾಡಿನ ಭೂಮಿಯನ್ನು ಹೊಂದಿರುವ ಪ್ರದೇಶ. ಆದ್ದರಿಂದ ಇಲ್ಲಿ ನೈಸರ್ಗಿಕ ಬಣ್ಣಗಳನ್ನು ಖಣ ಹಾಗೂ ಸೀರೆಗಳ ನೂಲಿಗೆ ಬಳಸುತ್ತಿದ್ದರು ಎಂದು ಇಲ್ಲಿಯ ನೇಕಾರರು ಹೇಳುತ್ತಾರೆ. ಆದರೆ ಇಂದು ನೈಸರ್ಗಿಕ ಬಣ್ಣಗಳನ್ನು ಬಳಸುವುದಿಲ್ಲ ಅದಕ್ಕೆ ರಾಸಾಯನಿಕ ಬಣ್ಣಗಳನ್ನು ಮಾತ್ರ ಬಳಸುತ್ತಿರುವುದು ಕಂಡುಬರುತ್ತದೆ.

ಇಳಕಲ್ಲ ಸೀರೆ ಹಾಗೂ ಗುಳೇದಗುಡ್ಡ ಖಣಗಳನ್ನು ನೇಯುವ ನೇಕಾರರೂ ಈ ಬಣ್ಣಗಳ ಬಗ್ಗೆ ಈ ರೀತಿಯಲ್ಲಿ ತಿಳಿಸುತ್ತಾರೆ. ನೈಸರ್ಗಿಕ ಬಣ್ಣಗಳ ಬಗ್ಗೆ ಹೇಳುತ್ತಾ ಅವರು 'ಕಚ್ಚಾ ನೂಲಿಗೆ ನೈಸರ್ಗಿಕ ಬಣ್ಣವನ್ನು ಗೀಡಮೂಲಿಕೆಗಳಿಂದ ಉಪಯೋಗಿಸಿ ಬಣ್ಣವನ್ನು ನೂಲುಗಳಿಗೆ ಲೇಪಣ(ಬಣ್ಣ ಹಚ್ಚುವುದು) ಮಾಡುತ್ತಿದ್ದರು. ಹತ್ತಿ ನೂಲಿಗೆ ಸಸ್ಯ ಜನ್ಯದಿಂದ ಕಪ್ಪು ನೀಲಿ ಬಣ್ಣವನ್ನು ತಯಾರಿಸುತ್ತಿದ್ದರು. ಇದು ಇಂದಿಗೂ ಗಿಡದ ಎಲೆಗಳ ರಸದಿಂದ ಸವಳು ಸುಟ್ಟ ಸುಣ್ಣ ಮತ್ತು ಪಟಗವನ್ನು ಬಳಸುತ್ತಿದ್ದರು. ಕೆಂಪು ಹಳದಿ ಬಣ್ಣಕ್ಕಾಗಿ ಮಡ್ಡಿ ಬೇರಿನ ತೊಗಟೆಯನ್ನು, ಸೆವೆಳು, ಕುಸುಬಿ, ಶೇಂಗಾ, ಎಣ್ಣಿ, ಬಾಳೆ ಗಿಡದ ಭಸ್ಮವನ್ನು ಬಳಸುತ್ತಿದ್ದರು. ಹಾಗೆ ಪ್ರಾಣಿ ಜನ್ಯವನ್ನು ಉಪಯೋಗಿಸಿಕೊಂಡು ಕೆಂಪು, ಕಾಕೀ, ನೀಲ ಬಣ್ಣಗಳನ್ನು ಹೆಣ್ಣು ಕೀಟವನ್ನು ಒಣಗಿಸಿ ಪುಡಿಮಾಡಿ ಬಣ್ಣಗಳಿಗೆ ಬಳಸುತ್ತಾರೆ. ಪಟಗ, ಶೇಂಗಾ ಎಣ್ಣಿ, ಬಾಳೆಗೀಡದ ಭಸ್ಮವನ್ನು ಉಪಯೋಗಿಸುತ್ತಾರೆ. ಕಪಟ ಹಾಗೂ ಕುಸುಬಿ, ಶೇಂಗಾ ಎಣ್ಣಿ ಬಾಳೆಗಿಡದ ಬಸ್ಮವನ್ನು ಬಳಸುತ್ತಾರೆ. ರೇಷ್ಮೆ ವಸ್ತ್ರಗಳ ಬಣ್ಣಕ್ಕೆ ಈ ಕ್ಷೇತ್ರದಲ್ಲಿ ಮುಖ್ಯವಾಗಿ ಹಳದಿ ಬಣ್ಣವನ್ನು ತಯಾರಿಸಲು ಕಪೀಲಿ ಬೀಜಗಳನ್ನು ಉಪಯೋಗಿಸಿಕೊಂಡು ಹಾಗೂ ಅಂಟವಾಳು ಕಾಯಿಯನ್ನು ಬಳಸುತ್ತಿದ್ದರು. ಅದೇ ರೀತಿಯಲ್ಲಿ ಕೆಂಪು ಬಣ್ಣಕ್ಕೆ ಡಾಣಿ, ಪಿಸ್ತಾಪೂಳ ಅಂಟವಾಳು ಕಾಯಿ, ಕಾಕಡಿ ಹಾಗೂ ನಿಂಬೆ, ಪಟಗಾ ಮೀನಸೆರಿ ಅಂಟು ಮುಂತಾದ ಪ್ರಾಣಿಜನ್ಯ ಮೂಲಿಕೆಗಳಿಂದ ತಯಾರಿಸುತ್ತದ್ದರು. ಇತರೆ ನೂಲುಗಳಿಗೆ ಬಣ್ಣಗಳನ್ನು ಬಳಸುವುದು, ಚಮಕಾ ನೂಲಿಗೆ ಬಳಸುವ ಬಣ್ಣಗಳು ಕೆಂಪು, ಗುಲಾಬಿ ಇದಕ್ಕೆ ಇನ್ನೊಂದು ಹೆಸರು ರಾಣಿ, ಕೇಸರಿ, ಹಸಿರು, ನೀಲಿ, ಜಾಂಬಳಿ, ಬಿಳಿ, ಕರಿ, ಹಲದಿ(ಲಿಂಬಾವಳಿ) ಎಂಬ ಬಣ್ಣವನ್ನು ನೂಲಿಗೆ ಬಣ್ಣ ಮಾಡುತ್ತಾರೆ. ಹತ್ತಿಯ ನೂಲಿನ ಬಟ್ಟೆಗಳಿಗೆ ಮುಖ್ಯವಾಗಿ ಕರಿ ಬಣ್ಣ, ಕೆಂಪು ಬಣ್ಣ ಹಾಗೂ ಬಿಳಿ ಬಣ್ಣವನ್ನು ಎದ್ದುತ್ತಾರೆ. ರೇಷ್ಮೆಯ ನೂಲಿಗೆ ಹಾಕುವಂತ ಬಣ್ಣಗಳನ್ನು ನೋಡಿದಾಗ ಕೆಂಪು, ಹಸಿರು, ನೀಲಿ, ಹಳದಿ, ಕಪೀಲಿ, ಜಾಂಬಳಿ, ಆಸ್ಮಮನಿ, ರಾಮಾ, ಗುಲಾಬಿ, ಫಿಕೋಜಿ, ಜಸ್ಸಾರ್, ಕಾಪರ್, ಕರಿ, ಬಿಳಿ, ಮೇಹಂದಿ, ಕೇಸರಿ, ಮರೂನ್ ಹಾಗೂ ಮಜೆಂಡಾ ಬಣ್ಣಗಳನ್ನು ಬಳಸುತ್ತಾರೆ. ಇತರೆ ಬಣ್ಣಗಳ ಕಚ್ಚಾ ವಸ್ತುಗಳು ಬಂಗಾರ ವರ್ನದ ಪಾಲಿಸ್ಟರ್ ಜರಿ, ಕೆಂಪುವರ್ಣದ ಜರಿಯ ಬಣ್ಣಗಳನ್ನು ಈ ನೂಲುಗಳಿಗೆ ಖೇಲ್ ಎದ್ದುತ್ತಾರೆ.

ಸೀರೆಯ ಭಾಗಗಳನ್ನು ವಿಂಗಡಿಸಿ ನೋಡಿದಾಗ ಸೀರೆಯ ಯಾವ ಭಾಗಗಳಿಗೆ ಯಾವ ಬಣ್ಣ ಹೊಂದುತ್ತದೆ ಎಂದು ನೋಡುವುದಾದರೆ,

ಸೀರೆಯ ದಡಿಯ ಹಾಸಿನ ಭಾಗಕ್ಕೆ ಕೆಂಪು, ಬಿಳಿ, ಹಳದಿ, ಮತ್ತು ವರ್ಣದ ಜರಿ ಹಸಿರು ಅಥವಾ ಕಪ್ಪುಬಣ್ಣದ ನೂಲನ್ನು ಕೆಲವು ವಿಶೇಷ ವಿನ್ಯಾಸಗಳಿಗಾಗಿ ಉಪಯೋಗಿಸಲಾಗುತ್ತದೆ. ಅದೇ ಸೀರೆಯ ಹೊಕ್ಕುಗೆ ಬಳಸುವ ಬಣ್ಣ ಕಪ್ಪು(ಕರಿ). ಇದು ಸೀರೆ ಹಾಗೂ ಖಣಗಳಿಗೆ ಮುಖ್ಯವಾದ ಬಣ್ಣವಾಗಿ ನೇಕಾರರು ಬಳಸುತ್ತಾರೆ.

ಸೀರೆಯ ಮೇಲ್ ಸೆರಗಿನ ಭಾಗ ಯಾವ ಬಣ್ಣಗಳಿಂದ ಕೂಡಿರುತ್ತದೆ ಎಂಬುದನ್ನು ತಿಳಿದುಕೊಂಡಾಗ ಈ ರೀತಿಯಾದ ಮಾಹಿತಿ ಸಿಗುತ್ತದೆ. ಕೆಂಪು ಬಣ್ಣವನ್ನು ಮಾತ್ರ ಇದಕ್ಕೆ ಬಳಸಲಾಗುವುದು. ಅದರ ಹೊಕ್ಕುವಿನ ನೂಲಿನ ಬಣ್ಣಗಳನ್ನು ನೋಡಿದಾಗ ಕೆಂಪು ಮತ್ತು ಬಿಳಿ ಬಣ್ಣವನ್ನು ಹೆಚ್ಚು ಬಳಸುತ್ತಾರೆ. ಖಣಗಳಿಗೂ ಇದೆ ತೆರನಾಗಿ ಬಳಸುತ್ತಾರೆ. ಹಾಗೂ ಹಳದಿ ಬಣ್ಣವನ್ನು ಬಳಸುತ್ತಾರೆ.

ಸೀರೆಯ ವಡ್ಲ ಈ ಭಾಗಕ್ಕೆ ಹಾಸುವಿನ ಬಣ್ಣಗಳನ್ನು ಹಳದಿ, ಗುಲಾಬಿ, ಫಿರೋಜಿ, ನೀಲಿ, ಕಪ್ಪು ಮತ್ತು ಬಿಳಿ ಇಲ್ಲಿ ಪ್ಲೇನ್ ಸೀರೆಗಳಿಗಾಗಿ ಯಾವುದಾದರೊಂದು ಬಣ್ಣದ ನೂಲು ಹಾಗೂ ವಿನ್ಯಾಸಗಳುಳ್ಳ ಸೀರೆಗಳಿಗಾಗಿ ಎರಡು ಅಥವಾ ಹೆಚ್ಚು ಬಣ್ಣಗಳ ನೂಲನ್ನು ಬಳಕೆ ಮಾಡುತ್ತಾರೆ. ಹೊಕ್ಕುವಿನ ಬಣ್ಣಗಳನ್ನು ನೋಡಿದಾಗ ಕಪ್ಪು ಬಣ್ಣವನ್ನು ಮುಖ್ಯವಾಗಿ ಉಪಯೋಗಿಸುವುದಲ್ಲದೆ ಚೌಕಾಣಿ ಮಾಡುವಾಗ ಇತರೆ ಬಣ್ಣ ಬಳಸುತ್ತಾರೆ.

ಇಳೆಸೆರಗು ಈ ಭಾಗದಲ್ಲಿ ಹೊಂದುವಂತ ಪ್ರಮುಖ ಬಣ್ಣಗಳೆಂದರೆ ಇಲ್ಲಿ ವಡ್ಲದ ಮೇಲೆ ಬಳಸುವಂತ ನೂಲನ್ನು ಇಲ್ಲಿ ಸಾಮಾನ್ಯವಾಗಿ ಬಳಸಲಾಗುತ್ತದೆ. ಇದು ವಡ್ಲದ ಮುಂದುವರೆದ ಭಾಗವೆಂದು ನೇಕಾರರು ಹೇಳುತ್ತಾರೆ. ಈ ಸೀರೆಯ ಹೊಕ್ಕು ಪ್ರಮುಖವಾಗಿ ಕೆಂಪು ಮತ್ತು ಬಿಳಿ ಹಾಗೂ ಹಳದಿ ಬಣ್ಣವನ್ನು ಹೆಚ್ಚಾಗಿ ಉಪಯೋಗಿಸುತ್ತಾರೆ.

ಈ ಬಣ್ಣಗಾರಿಕೆಯನ್ನು ಪರಂಪರಾಗತವಾಗಿ ಮುಂದುವರೆಸಿಕೊಂಡು ಬಂದಿರುವ ಕುಟುಂಬಗಳನ್ನು ನೊಡುತ್ತೇವೆ. ಆ ಬಣ್ಣವನ್ನು ಮಾಡುವಂತ ಕುಟುಂಬದ ನೇಕಾರರಿಗೆ ನೀಲಗಾರರು ಹಾಗೂ ಬನಗಾರರು ಎಂದು ಕರೆಯುತ್ತಾರೆ. ಬಣ್ಣಗಳಲ್ಲಿ ವಿಶೇಷವಾಗಿರುವುದು ನೈಸರ್ಗಿಕ ಬಣ್ಣಗಳು, ಇಂದು ಯಾವ ಬಣ್ಣದ ಘಟಕಗಳಲ್ಲಿ ಖೇಲನ್ನು ಹಾಕಿಕೊಡುವುದಿಲ್ಲ. ಹುನಗುಂದ ಹಾಗೂ ಬಾದಾಮಿ ತಾಲೂಕಿನಲ್ಲಿ ಕನಿಷ್ಟ ೨೦ಕ್ಕಿಂತಲೂ ಹೆಚ್ಚು ಬಣ್ಣದ ಮನೆಗಳಿದ್ದವು ಎಂದು ಹೇಳುವ ನೇಕಾರರೂ, ಇಂದು ಬಣ್ಣವನ್ನು ಮಾಡುವಂತ ಕುಟುಂಬಗಳನ್ನು ಹೆಸರಿನಿಂದ ಕರೆಯುವುದಾಗಿದೆ. ಈ ಹಿಂದೆ ಬಣ್ಣ ಹಾಕುವುದನ್ನೇ ಮೂಲ ಉದ್ಯೋಗವೆಂದು ಹೇಳುತ್ತಿದ್ದವರೆಲ್ಲ ಇಂದು ಇನ್ನೊಂದು ಪರ್ಯಾಯ ಉದ್ಯೋಗವನ್ನು ಮಾಡುತ್ತಿದ್ದಾರೆ. ಇಂದಿನ ರಾಸಾಯನಿಕ ಬಣ್ಣಗಳು ಮನುಷ್ಯನ ಆರೋಗ್ಯದ ಮೇಲೆ ಹಾಗೂ ಚರ್ಮದ ಮೇಲೆ ದುಷ್ಪರಿಣಾಮ ಬೀರುವುದರಿಂದ ಈ ಬಣ್ಣಗಾರಿಕೆಯನ್ನು ಕೈಬಿಟ್ಟಿರುವುದು ಕಂಡುಬರುತ್ತದೆ. ಇಂದು ನೇರವಾಗಿ ಶುದ್ದ ಬಣ್ಣವನ್ನು ಹೊಂದಿರುವ ನೂಲುಗಳು ನೇರವಾಗಿ ಮಾರುಕಟ್ಟೆಗಳಿಂದ ಗ್ರಾಹಕರ ಕೈಗೆ ಸಿಗುವುದರಿಂದ ಬಣ್ಣದ ಘಟಕಗಳು ಕಡಿಮೆಯಾಗಿವೆ. ಇಂದು ೦೮ ಚಾಲನೆಯಲ್ಲಿರುವ ಬಣ್ಣದ ಘಟಕಗಳು ಕಂಡುಬರುತ್ತವೆ. ಸಹಕಾರಿ ಕ್ಷೇತ್ರದ

ವ್ಯಾಪ್ತಿಯೊಳಗಡೆ ೦೧ ಬಣ್ಣದ ಘಟಕವನ್ನು ಮಾತ್ರ ಹೊಂದಿರುವುದು ಕಂಡುಬರುತ್ತದೆ. ಅದು ಶ್ರೀ ಶಾಖಾಂಬರಿ ನೇಕಾರ ಸಹಕಾರಿ ಸಂಘ, ಸೂಳಿಬಾವಿಯಲ್ಲಿ ಕಂಡುಬರುತ್ತದೆ. ಇನ್ನುಳಿದ ಪ್ರದೇಶಗಳಲ್ಲಿ ಖಾಸಗಿಯ ಒಡೆತನದಲ್ಲಿಯ ಬಣ್ಣದ ಘಟಕಗಳು ಕಾರ್ಯನಿರ್ವಹಿಸುತ್ತಿವೆ.

**ನೇಕಾರಿಕೆಯಲ್ಲಿ ವಿನ್ಯಾಸಗಳು ಹಾಗು ಕೌಶಲ್ಯಗಳು.**

ಈ ನೇಕಾರಿಕೆಯು ಒಂದು ಕುಶಲಭರಿತವಾದ ಹಾಗೂ ಶ್ರಮಭರಿತ ಕಾರ್ಯವಾಗಿದೆ. ಆದ್ದರಿಂದ ಈ ವೃತ್ತಿಯಲಿ ತೊಡಗಿಕೊಂಡಿರುವ ನೇಕಾರನಿಗೆ ಮೈಯಲ್ಲಾ ಕಣ್ಣಾಗಿರಬೇಕು ಎಂದು ಹಿರಿಯರಾದ ಬಸಪ್ಪ ಮೊರಬದ ಅವರು ತಮ್ಮ ಅನುಭವದ ಮಾತಿನಲ್ಲಿ ಹೇಳಿದ್ದಾರೆ. ಇಲ್ಲಿ ಬಣ್ಣ ಮಾಡುವುದರಿಂದ ಹಿಡಿದು ಅದರ ಎಲ್ಲ ಪ್ರಕ್ರಿಯೆಗಳಲ್ಲಿ ನೇಕಾರನ ಕೌಶಲ್ಯವು ಒಳಗೊಂಡಿರುತ್ತದೆ. ಇದರಲ್ಲಿ ಹಲವಾರು ಬಗೆಯ ವಿನ್ಯಾಸಗಳನ್ನು ಹೊಂದಿರುವಂತ ಸೀರೆ ಹಾಗೂ ಖಣಗಳನ್ನು ನೋಡುತ್ತೇವೆ. ಆ ಬಣ್ಣಗಳ ಮಿಶ್ರಣ, ವಿನ್ಯಾಸಗಳ ನಿರ್ಮಾಣದಲ್ಲಿ ಸಾಕಾಳಾವನ್ನು ತಯಾರಿಸುವುದು, ಸೀರೆಗೆ ಕೊಂಡಿ ವಿನ್ಯಾಸದ ಕಲೆ, ನೇಯುವ ಪ್ರಕ್ರಿಯೆಯಲ್ಲಿಯ ವಿನ್ಯಾಸಗಳಿಗೆ ತಕ್ಕ ಹಾಗೆ ಲಾಳಿಗಳನ್ನು ಓಡಿಸುವುದು. ದಡಿಯವಿನ್ಯಾಸವನ್ನು ತಯಾರಿಸುವಲ್ಲಿ ನೇಕಾರನ ಕೈಚಳಕ ಮುಂತಾದ ಕೌಶಲ್ಯಗಳನ್ನು ಹಾಗೂ ವಿನ್ಯಾಸಗಳನ್ನು ನೇಕಾರಿಕೆಯ ಕಲೆಯಲ್ಲಿ ಅಡಗಿರುತ್ತವೆ. ಎಂದು ಶ್ರೀ ಬಸಪ್ಪ ಮೊರಬದ ಅವರು ಹೇಳುತ್ತಾರೆ.

**ಇಳಕಲ್ಲ ಸೀರಗಳ ವಿನ್ಯಾಸ**

ಸೀರೆಗಳು ಎಂದಾಕ್ಷಣ ಅದರದೆಯಾದ ಭಾಗಗಳನ್ನು ನೋಡುತ್ತೇವೆ. ಆ ವಿನ್ಯಾಸಗಳು ಸೀರೆಗಳ ಭಾಗಗಳಿಗೆ ತಕ್ಕ ಹಾಗೆ ವಿನ್ಯಾಸಗಳನ್ನು ಮಾಡುವಂತ ಕಲೆ ನೇಕಾರರಿಗಿದೆ. ವಿನ್ಯಾಸಗಾರರು ಆದಂತಹ ಬಡಿಗ ವೃತ್ತಿಯ ನೇಕಾರರು ಹಾಗೂ ಬಡಿಗಿತನ ಮಾಡುವ ಸಮುದಾಯದ ಜನರು ಈ ವಿನ್ಯಾಸಗಳನ್ನು ತಯಾರಿಸುತ್ತಾರೆ. ಇಲ್ಲಿ ಬಡಿಗತನದ ಕೌಶಲ್ಯ ಹಾಗೂ ನೇಕಾರನ ವಿನ್ಯಾಸ ಸೃಷ್ಟಿಯ ಕಲೆ ಸೇರಿಕೊಂಡು ಒಂದು ವಿನ್ಯಾಸಕ್ಕೆ ಅಡಿ ಇಡುತ್ತಾರೆ. ಇಂತಹ ವಿನ್ಯಾಸಗಳಲ್ಲಿ ಹಲವಾರು ಪ್ರಮುಖವಾದ ವಿನ್ಯಾಸಗಳನ್ನು ಈ ಕೆಳಗೆ ವಿವರಿಸಲಾಗಿದೆ.

- ಸೀರೆಯ ವಿನ್ಯಾಸಗಳಲ್ಲಿ ತಲೆ ಸರಗಿನಮೇಲಿನ ವಿನ್ಯಾಸಗಳು ಇವುಗಳಲ್ಲಿ ಪ್ರಮುಖವಾಗಿ ಟೋಪತೆನೆ ಸೆರಗೂ ಹಾಗೂ ಟೋಪ ಅಥವಾ ಪತ್ತಲ್ ಸೆರಗೂ ಕಂಡುಬರುತ್ತವೆ.
- ಸೀರೆ ದಡಿಗಳ ವಿನ್ಯಾಸದಲ್ಲಿ ಪ್ರಮುಖವಾಗಿ ಚಿಕ್ಕಿ ಪರಸಾ ದಡಿ, ಜಂ ಚಿಕ್ಕ ಪರಸಾದಡಿ, ಗಾಡಿ ಅಥವಾ ಗಾಯತ್ರಿ ದಡಿ, ಗೋಮಿ ದಡಿ, ಗೋಡ್ಡ ಪರಸಾ ದಡಿ, ರುಫೀಲ್ ದಡಿ ಮುಂತಾದ ವಿನ್ಯಾಸಗಳನ್ನು ಇಲ್ಲಿಯ ನೇಕಾರರು ಉಪಯೋಗಿಸುತ್ತಿದ್ದಾರೆ.

- ನಿರ್ದಿಷ್ಟ ಜಾಮಿತಿ ಹೊಂದಿದ ಇಳಕಲ್ಲ ಸೀರೆಗಳು ಅಂದರೆ ಪಟ್ಟೆ ಅಥವಾ ಗೇರೆ ವಿನ್ಯಾಸದ ಸೀರೆಗಳು, ಚೌಕೋನ ವಿನ್ಯಾಸದ ಸೀರೆಗಳು, ದ್ವಿ ಚೌಕೋನ ವಿನ್ಯಾಸದ ಸೀರೆಗಳು, ಆಯತಾಕಾರದ ವಿನ್ಯಾಸದ ಸೀರೆಗಳು, ಹಾಗೂ ಚಿಕ್ಕಿ ವಿನ್ಯಾಸದ ಸೀರೆಗಳನ್ನು ನೋಡುತ್ತೇವೆ.
- ಮೇಲ್ ಸೆರಗು ವಿನ್ಯಾಸಗಳು ಟೋಪ ತೆನಿ ಸೆರಗೂ, ಪತ್ತಲ್ ತೊಪ ತೆನಿ ಸೆರಗೂ ಕಂಡುಬರುತ್ತವೆ.
- ವಡ್ಲಗಳಲ್ಲಿ(ಗರ್ಭ) ಇರುವ ವಿನ್ಯಾಸಗಳನ್ನು ನೋಡಲಾಗಿ ರಾಘಾವಳಿ, ಢಘಳಾ, ಚೌಕಾಣಿ, ಮಠಾಣಿ, ಕಡ್ಡಿ, ಪಂಚರಂಗಿ ಕಡ್ಡಿ ಎಳ್ಳುಹೂ, ಸಾದಾ ಕೊಂಡಿ ಚಿಕ್ಕಿ, ಎಳ್ಳಹೂ ಕೊಂಡಿಚಿಕ್ಕಿ, ರಾಸ್ತಾ, ಪತಂಗ ಶರ್ಟಿಂಗ್, ಪ್ಲೇನ್, ಛಾಯಾ ಶರ್ಟಿಂಗ್, ಮಧಘ, ಮಧುಪ ರಾಘಾವಳಿ, ಮಧುಘ್ ಕಡ್ಡಿ, ಅಯ್ಯಂಗಾರ ಚಕ್ಸ್, ಪಂಚರಂಗಿ ರಾಸ್ತಾ, ಚದುರಂಗ ಚಿಕ್ಕ, ಜಬ್ರಾ ರಿಕ್ಕ ಮುಂತಾದ ವಿನ್ಯಾಸಗಳನ್ನು ನೋಡಬಹುದು.
- ಪ್ಲೇನ್ ವಿನ್ಯಾಸಗಳಲ್ಲಿ ಎರಡು ರೀತಿಯ ವಿನ್ಯಾಸಗಳನ್ನು ನೋಡುತ್ತೇವೆ. ಕರಿಚಂದ್ರಕಾಳಿ ಹಾಗೂ ಬಿಳಿ ಬಣ್ಣದ ಪ್ಲೇನ್ ಸೀರೆಗಳು.
- ಸೀರೆಯ ದಡಿ ಮತ್ತು ಅಂಚುಗಳ ವಿನ್ಯಾಸಗಳನ್ನು ನೋಡಿದಾಗ ಚಿಕ್ಕಿ ಪರಾಸ, ಗೋಮಿ, ಗಾಡಿ(ಗಾಯತ್ರಿ) ರುಫಿಲ್ ಹಾಗೂ ಸಾಟನ್ ವಿಧದ ವಿನ್ಯಾಸಗಳು ಕಂಡುಬರುತ್ತವೆ. ಎಂದು ಶ್ರೀ ನಾಗೇಶ ಬಸಪ್ಪ ಜಯಾ ಹಾಗೂ ವೀರೇಶ ಚಿದಾನಂದ ಇಟಗಿ ಅವರು ಹೇಳುತ್ತಾರೆ.

**ಗುಳೇದಗುಡ್ಡ ಖಣಗಳ ವಿನ್ಯಾಸ**

ಇಳಕಲ್ಲ ಸೀರೆ ಹಾಗೂ ಗುಳೇದಗುಡ್ಡ ಖಣಗಳ ವಿನ್ಯಾಸಗಳು ಬಹಳ ಪ್ರಸಿದ್ದಿಯನ್ನು ಪಡೆದಿವೆ. ಆದರೂ ಈ ಸೀರೆ ಹಾಗೂ ಖಣಗಳು ಸಂಬಂಧಿಕರಂತೆ ಜೋಡಿ ಮಾರಾಟವನ್ನು ನೋಡಲಾಗಿದೆ. ಇವು ಸಾಂಪ್ರದಾಯಿಕವಾಗಿ ಜನರನ್ನು ಆಕರ್ಷಿಸುತ್ತವೆ. ಇಂತಹ ಖಣಗಳಲ್ಲಿ ಹಲವಾರು ವಿನ್ಯಾಸಗಳನ್ನು ನೋಡುತ್ತೇವೆ.

- ಇಲ್ಲಿ ಗಮನಿಸುವ ವಿಷಯ ಏನಂದರೇ ಈ ವಿನ್ಯಾಸಗಳಲ್ಲಿ ದಡಿ ಹಾಗೂ ವಡ್ಲದ ವಿನ್ಯಾಸಗಳು ಒಂದೆಯಾಗಿರುತ್ತವೆ. ಆದರೆ ದಡಿಯ ನೂಲು ಬೇರೆಯಾಗಿರುತ್ತದೆ. ದಡಿಗಳಲ್ಲಿ ಪ್ರಮುಖವಾಗಿ ಕೆಂಪು, ಜಾಂಬಳಾ, ಹಸಿರು ಮುಂತಾದ ಬಣ್ಣಗಳಿಂದ ಕೂಡಿರುತ್ತವೆ. ಇವು ಇಳಕಲ್ಲ ಸೀರೆಯ ಜೊತೆಯಲ್ಲಿ ವಿನ್ಯಾಸಗಳು ಹೋಲುವಂತೆ ಕಾಣುತ್ತವೆ. ಅವು ಯುವತಿಯರನ್ನು ಸೆಳೆಯುತ್ತವೆ. ಇವುಗಳನ್ನು ಹಬ್ಬ ಹಾಗೂ ಜಾತ್ರೆಗಳಲ್ಲಿ ಮಾತ್ರ ಉಪಯೋಗಿಸುವುದು ಕಂಡುಬರುತ್ತದೆ.

- ಗುಳೇದಗುಡ್ಡ ಖಣಗಳ ವಿನ್ಯಾಸಗಳು ಈ ರೀತಿಯಲ್ಲಿ ಕಂಡುಬಂದಿವೆ. ೯ ಹುಂಜ ಬಟಹೂ, ರುದ್ರಾಕ್ಷಿ, ಶಾವಂತಿಗೆ ಕರಮನೆ ಚಿಕ್ಕಿ, ಹರಡಿ, ದೊಡ್ಡ ಹರಡಿ, ಸುಜು ಮಲ್ಲಿಗೆ ಹರಡಿ, ಶಾವಂತಿಗೆ ಕಮಲ ಚಿಕ್ಕ, ತುಳಸಿ ಪಾನ, ನವಿಲಪರಿ, ಶಾವಂತಿಗೆ ಕರಿಮನಿ ಚಿಕ್ಕ, ೯ ಹುಂಜ ತೇರು, ಯಾಲಕ್ಕಿ ಬಳ್ಳಿ ಕಳವಾರ, ಕವಳಿ ಹೂ, ತಿರುಕಿ ಕವಳಿ ಹೂ, ಚೋಟಾ ಹರಡಿ, ೯ ಹುಂಜ ತಿರಿಕಿ ಮುಂತಾದ ವಿನ್ಯಾಸಗಳನ್ನು ಈ ಕೈಮಗ್ಗದ ನೇಕಾರರು ನೇಯುತ್ತಾರೆ. ಎಂದು ಮಾಹಿತಿದಾರರಾದ ದೇವೇಂದ್ರ ಮೊರಬದ ಹಾಗೂ ಹನಮಂತ ಪಲಮಾರಿ ಹೇಳುತ್ತಾರೆ.

ಇಲ್ಲಿ ಈ ವಿನ್ಯಾಸಗಳನ್ನು ಗಮನಿಸಿದಾಗ ಹೂವುಗಳು, ಪ್ರಾಣಿಗಳು, ಪಕ್ಷಿಗಳ ಹೆಸರುಗಳನ್ನು ನೋಡಬಹುದಾಗಿದೆ. ಇದರಿಂದ ತಿಳಿದು ಬರುವ ಸಂಗತಿ ಏನಂದರೆ ನೇಕಾರರೂ ತಮ್ಮ ವಿನ್ಯಾಸಗಳಲ್ಲಿ ಬದಲಾವಣೆಯನ್ನು ಕಂಡುಕೊಂಡಿದ್ದರೆ ವ್ಯಾಪಾರಿಗಳ ಹಾಗೂ ಗ್ರಾಹಕರ ಬೇಡಿಕೆಗಳಿಗೆ ಅನುಸಾರವಾಗಿ ಬದಲಾಗುತ್ತಾ ಸಾಗಿವೆ ಎಂದು ತಿಳಿಯುತ್ತವೆ.

**ನೇಕಾರರ ಕೌಶಲ್ಯಗಳು**

ನೇಕಾರರ ಕೌಶಲ್ಯಗಳನ್ನು ಯಾವ ಮಾನದಂಡಗಳಿಂದಲೂ ಅಳಿಯಲು ಸಾಧ್ಯವಿಲ್ಲ. ಏಕೆಂದರೆ ಈ ವೃತ್ತಿಯು ಪ್ರತಿಯೊಂದು ಕ್ರಿಯೆಯು ಕೌಶಲ್ಯಭರಿತವಾಗಿ ಕೂಡಿದೆ. ಈ ನೇಕಾರಿಕೆಯು ಅತಿ ಸೂಕ್ಷ್ಮ, ನಾಜೂಕು ಕೆಲಸ, ಸಂವೇದನೆ, ಸಹನೆ, ತಾಳ್ಮೆ ಹಾಗೂ ಸದಾ ಕ್ರಿಯಾಶೀಲರಾಗಿ ಕಾರ್ಯವನ್ನು ಮಾಡುವಂತ ವಿಶೇಷ ಕಾರ್ಯವಾಗಿದೆ. ಇದರಲ್ಲಿ ಒಂದು ತಪ್ಪಾದರು ಅವರು ನೇಯುವ ಬಟ್ಟೆಯ ಮೌಲ್ಯ ಕಡಿಮೆಯಾಗುವುದು. ಇಲ್ಲವೇ ಬಟ್ಟೆ ಆ ನೇಕಾರನಿಗೆ ಹೊರೆಯಾಗುವುದರಲ್ಲಿ ಸಂದೇಹವೇ ಇಲ್ಲ. ಇಲ್ಲಿ ಪ್ರಮುಖವಾದ ಕೌಶಲ್ಯಗಳನ್ನು ವಿವರಿಸಲು ಪ್ರಯತ್ನಿಸಲಾಗಿದೆ.

- ನೇಕಾರಿಕೆ ಎಂದಾಕ್ಷಣ ಪ್ರಥಮವಾಗಿ ಯಾವ ರೀತಿಯ ಬಟ್ಟೆಯ ತಯಾರಿಕೆಯ ಮೇಲೆ ಅವಲಂಬಿಸಿರುತ್ತದೆ. ಇಲ್ಲಿ ನೂಲಿಗೆ ಬಣ್ಣವನ್ನು ಮಾಡುವ ಕ್ರಿಯೆ ಪ್ರಮುಖವಾಗಿರುತ್ತದೆ. ಬಣ್ಣದ ಘಟಕಗಳಲ್ಲಿ ಇಂದು ರಾಸಾಯನಿಕ ಬಣ್ಣಗಳನ್ನು ಹೆಚ್ಚು ಬಳಸುತ್ತಿದ್ದಾರೆ. ನೂಲನ್ನು ಬಣ್ಣ ಮಾಡುವಾಗ ಸರಿಯಾದ ಪ್ರಮಾಣದಲ್ಲಿ ಬಣ್ಣವನ್ನು ಬಳಸುವುದು, ಬಣ್ಣಕ್ಕೆ ಎಷ್ಟು ಸಾಮರ್ಥ್ಯದಲ್ಲಿ ನೀರನ್ನು ಕಾಯಿಸಬೇಕು, ಬಣ್ಣವನ್ನು ಮಾಸದಂತೆ ಹೋಗಲಾಡಿಸುವ ಕ್ರಮ, ಅಂಟು ಹಾಕಿಸುವ ಮೂಲಕ ಮಾಡುವ ಬಣ್ಣದ ಕೌಶಲ್ಯವು ಬಹಳ ಮುಖ್ಯವಾಗಿರುತ್ತದೆ. ನುರಿತ ಬಣ್ಣಗಾರರು ಹಾಗೂ ನೀಲಗಾರರೂ ಇಂದಿಗೂ ಈ ಕೆಲಸವನ್ನು ಮಾಡುತ್ತಿರುವುದು ಕಂಡುಬರುತ್ತದೆ.
- ನೇಕಾರಿಕೆಯ ವಿನ್ಯಾಸವನ್ನು ತಯಾರಿಸಲು ಹಿಂದೆ ಯಾವುದೇ ರೀತಿಯ ತಂತ್ರಜ್ಞಾನಗಳು ಇಲ್ಲದ ಸಂದರ್ಭದಲ್ಲಿ ಹಲವಾರು ವಿನ್ಯಾಸಗಳನ್ನು ಕಂಡುಕೊಂಡಿದ್ದಾರೆ. ಆ ವಿನ್ಯಾಸಗಳು ಇಂದಿಗೂ

ಪ್ರಚಲಿತದಲ್ಲಿವೆ. ಈ ವಿನ್ಯಾಸಗಳನ್ನು ಮೊದಲು ಒಂದು ಹಾಳೆಯಲ್ಲಿ ಚಿತ್ರವನ್ನು ಬಿಡಿಸಿಕೊಂಡು ಅದನ್ನು ನಾಲ್ಕು ಭಾಗಗಳನ್ನಾಗಿ ಮಾಡುತ್ತಾರೆ. ಅದರಲ್ಲಿ ಒಂದು ಭಾಗದ ವಿನ್ಯಾಸವನ್ನು ಬಳಸಿಕೊಂಡು ಆ ವಿನ್ಯಾಸಕ್ಕೆ ತಕ್ಕ ಹಾಗೆ ಸಾಕಳಾಕ್ಕೆ ಗುಬ್ಬಿಗಳನ್ನು(ಕಟ್ಟಿಗೆಯಿಂದ ಮಾಡಿರುವಂತ ಸಾಧನ) ಜೋಡಿಸಿ ಪರೀಕ್ಷಿಸಿದ ನಂತರ ಆ ವಿನ್ಯಾಸವು ಜನರಿಗೆ ಮೆಚ್ಚುವಂತವುಗಳಾದರೆ, ಆ ವಿನ್ಯಾಸಗಳನ್ನು ಮಗ್ಗಗಳಿಗೆ ಅಳವಡಿಸಿ ಮಾರುಕಟ್ಟೆಗೆ ಬಿಡುಗಡೆ ಮಾಡುಕಾರ್ಯ ನಡೆಯುತ್ತಿತ್ತು. ಈ ಪದ್ಧತಿಯು ಇಂದು ಕೆಲ ಪ್ರದೇಶಗಳಲ್ಲಿ ನಡೆಯತ್ತದೆ. ಇಲ್ಲಿ ನೇಕಾರರು, ಮಾಲೀಕರು ಹಾಗೂ ವಿನ್ಯಾಸಗಾರರಾದ ಬಡಿಗೇರರು ಎಲ್ಲರೂ ಸೇರಿ ವಿನ್ಯಾಸವನ್ನು ರಚಿಸುತ್ತಿದ್ದರು. ಇಂದು ಹೊಸ ಮಗ್ಗಗಳ ಅಳವಡಿಕೆಯಿಂದ ಗಣಕಯಂತ್ರದಲ್ಲಿ ವಿನ್ಯಾಸದ ಅಭಿಯಂತರರು ರೂಪಿಸಿರುವ ವಿನ್ಯಾಸಗಳನ್ನು ಅಳವಡಿಸಿ ನೇಯುವಂತ ಕೆಲಸ ಮಾಡುತ್ತಾರೆ.

- ನೇಕಾರಿಕೆಯ ಪ್ರಕ್ರಿಯೆಯು ಕೌಶಲ್ಯಭರಿತ ಹಾಗೂ ಶ್ರಮಭರಿತವಾದ ಕೆಲಸವಾಗಿದೆ. ಕೈಮಗ್ಗ ನೇಕಾರರು ಇಲ್ಲಿ ತನ್ನ ಎಲ್ಲ ಅಂಗಾಗಳನ್ನು ಉಪಯೋಗಿಸಿ ಬಟ್ಟೆ ನೇಯುವಂತ ಕ್ರಿಯೆ ನಡೆಯತ್ತದೆ. ಬಟ್ಟೆಗಳ ವಿನ್ಯಾಸ ಹಾಗೂ ಬಣ್ಣಗಳಿಂದ ಕೂಡಿದ್ದರಿಂದ ನೇಕಾರರು ನೇಯುವ ಸಂದರ್ಭದಲ್ಲಿ ಹಲವಾರು ವೃತ್ತಿ ಕೌಶಲ್ಯಗಳನ್ನು ಬಳಸುತ್ತಾನೆ. ಲಾಳಿಯ ಸಮಾಂತರ ಓಡಿಸುವಂತ ಕಾರ್ಯ, ಕಾಲ್ಪಡಿಗಳನ್ನು ಸರಿಯಾದ ಸಮಯಕ್ಕೆ ಹಾಗೂ ಲಾಳಿಯ ಹೊಂದಾಣಿಕೆಗೆ ತಕ್ಕಂತ ಹಾಗೆ ತುಳಿವಂತ ಕಾರ್ಯ ನಡೆದಿರುತ್ತದೆ. ಇಲ್ಲಿ ಮನುಷ್ಯನ ಕಾಲು, ಕೈ, ಮುಖ್ಯವಾಗಿ ಕಣ್ಣುಗಳ ದೃಷ್ಟಿ ನೇರವಾಗಿ ಹಾಸು ಹೊಕ್ಕುಗಳ ಮಿಲನದಲ್ಲಿ ಇರಿಸಬೇಕು. ನೇಕಾರಿಕೆಯಲ್ಲಿ ಅಂಗಾಂಗಳನ್ನು ವ್ಯವಸ್ಥಿತವಾಗಿ ಬಳಸಿಕೊಂಡಾಗ ಮಾತ್ರ ನೇಯುವಂತ ನೇಕಾರ ಉತ್ತಮ ಬಟ್ಟೆಯನ್ನು ನೇಯುವುದಕ್ಕೆ ಸಹಾಯವಾಗುತ್ತದೆ. ಇಲ್ಲದಿದ್ದರೆ ಅಣಿಯೊಳಗೆ ಲಾಳಿ ಸಿಲುಕಿ ಹಾಸು ಹೊಕ್ಕು ಹರಿದು ಹೋಗುವಂತ ಸಂದರ್ಭಗಳನ್ನು ಕಾಣಬಹುದಾಗಿದೆ. ಆದ್ದರಿಂದ ಈ ವೃತ್ತಿಯ ಪ್ರಕ್ರಿಯೆಯು ಕೂಡಾ ಸಂಪೂರ್ಣ ಕೌಶಲ್ಯ ಆಧಾರಿತವಾಗಿದೆ.

### ೨.೨ ನೇಕಾರರ ವೃತ್ತಿ ಸ್ಥಿತ್ಯಂತರ:

ನೇಕಾರಿಕೆಯು ನಿಂತ ನೀರಲ್ಲ. ನೇಕಾರಿಕೆಯು ಹರಿಯುವ ನೀರಿನಂತೆ ನಿರಂತರವಾಗಿ ಬದಲಾವಣೆಯನ್ನು ಹೊಂದುತ್ತಿರುತ್ತದೆ. ನೇಕಾರಿಕೆಯ ವೃತ್ತಿಯಲ್ಲಿ ಆಧುನಿಕತೆಯ ಮುಖಮಾಡಿ, ಕೈಮಗ್ಗದ ನೇಕಾರಿಕೆಯನ್ನು ಮರೆಮಾಚುವಂತೆ ಮಾಡುತ್ತಿದೆ. ನೇಕಾರಿಕೆಯಲ್ಲಿ ಸಾಂಪ್ರದಾಯಿಕ ಕೈಮಗ್ಗವನ್ನು ಅಂಟಿಕೊಂಡ ಸಮುದಾಯಗಳು ಇಂದಿಗೂ ಯಾವುದೇರೀತಿಯ ಅಭಿವೃದ್ಧಿಯನ್ನು ಹೊಂದದೆ, ನಿಂತ ನೀರಿನಂತೆ ಜನರು ತಮ್ಮ ಜೀವನವನ್ನು ಕಷ್ಟದಲ್ಲಿ ಕಳೆಯುತ್ತಿರುವುದನ್ನು ನೋಡುತ್ತೇವೆ. ಈ ನೇಕಾರಿಕೆಯಲ್ಲಿ ಅಭಿವೃದ್ಧಿಯನ್ನು ಅಥವಾ ಬದಲಾವಣೆಯನ್ನು ಹೊಂದಿದ್ದಾರೆ ಎಂದರೆ ಆ ಕುಟುಂಬದಲ್ಲಿ ನೇಕಾರಿಕೆಯನ್ನು ಬಿಟ್ಟು ಬೇರೊಂದು

ಉದ್ಯೋಗ, ವ್ಯಾಪಾರ ಅಥವಾ ಸರಕಾರಿ ನೌಕರಿಯನ್ನು ಪಡೆದಿರುವ ವ್ಯಕ್ತಿಯ ಕುಟುಂಬ ಎಂದು ತಿಳಿಯುತ್ತದೆ. ಅದೇನೆ ಇರಲಿ ಸಾಂಪ್ರದಾಯಕ ವೃತ್ತಿಯಲ್ಲಿಯೇ ಹಲವಾರು ಬದಲಾವಣೆಗಳನ್ನು ಹೊಂದುತ್ತಾ ಬಂದಿದ್ದಾರೆ. ಕೈಮಗ್ಗದಲ್ಲಿ ಹೊಸ-ಹೊಸ ಆವಿಷ್ಕಾರಗಳನ್ನು ಬದಲಾವಣೆಯನ್ನು ಮಾಡುತ್ತಾ ಬಂದಿದ್ದಾರೆ. ಮೊದಮೊದಲು ಈ ಕೈಮಗ್ಗದ ವೃತ್ತಿಯಲ್ಲಿ ಕುಟುಂಬದ ಎಲ್ಲ ಜನರು ಸೇರಿಕೊಂಡು ವೃತ್ತಿಯನ್ನು ಮಾಡುತ್ತಿದ್ದರು. ಇಲ್ಲಿ ಕುಟುಂಬದ ಪಾತ್ರ ಬಹಳ ಮುಖ್ಯವಾಗಿರುತ್ತಿತ್ತು. ಇಂದು ಗುಡಿ ಅಥವಾ ಸಣ್ಣ ಕೈಗಾರಿಕೆ ವ್ಯವಸ್ಥೆಯಲ್ಲಿ ಬದಾವಣೆಯನ್ನು ಕಾಣುತ್ತೇವೆ. ಇಲ್ಲಿ ಎಲ್ಲ ತರಹದ ನೇಕಾರಿಕೆಯ ಇತರೆ ಕೆಲಸವನ್ನು ಮಾಡುವವರಿಗೆ ಬೇರೆ ಬೇರೆ ರೀತಿಯ ವೇತನವು ದೊರೆಯತ್ತಿದೆ. ಆದರೆ ಕುಟುಂಬದ ನೇಕಾರಿಕೆಯಲ್ಲಿ ಎಲ್ಲರ ಶ್ರಮಕ್ಕೆ ಒಂದೇ ಆದಾಯ ಕಂಡು ಬರುತ್ತದೆ. ಈ ವ್ಯವಸ್ಥೆಯಲ್ಲಿ ನುರಿತ ನೇಕಾರರು ನೇಕಾರಿಕೆಯನ್ನು ಹಾಗೂ ಇತರೆ ಕೆಲಸಗಳನ್ನು ಬೇರೆ ಬೇರೆ ವ್ಯಕ್ತಿಗಳು ನಿರ್ವಹಿಸಿಕೊಳ್ಳುವುದರಿಂದ ಆ ನೇಕಾರರಿಗೆ ದಿನಗೂಲಿ ವೇತನವನ್ನು ನಿಗದಿಪಡಿಸಿರುವ ವ್ಯವಸ್ಥೆಯನ್ನು ಇಂದಿನ ದಿನಗಳಲ್ಲಿ ನಾವು ನೋಡುತ್ತೇವೆ. ನೇಕಾರಿಕೆಯಲ್ಲಿ ಆಧುನೀಕರಣದ ಪ್ರಭಾವದಿಂದ ನೇರವಾಗಿ ಶುದ್ಧ ವಸ್ತುಗಳು ಉತ್ಪಾದಿಸುವ ವ್ಯವಸ್ಥೆ ಇದೆ. ನೇಕಾರ ಸಹಕಾರಿ ಸಂಘಗಳು ಇಂದು ಆಧುನಿಕ ಮಗ್ಗಗಳನ್ನು ಹಾಗೂ ಆಧುನಿಕ ವಿನ್ಯಾಸದ ಬಟ್ಟೆಯನ್ನು ತಯಾರಿಸುವ ಘಟಕಗಳನ್ನು ಸ್ಥಾಪನೆಗೊಂಡಿವೆ. ಹೊಸ ಹೊಸ ವಿನ್ಯಾಸದ ರಾಷ್ಟ್ರೀಯ ಮಟ್ಟದ ಸೀರೆಗಳನ್ನು ಹಾಗೂ ಹತ್ತಿ(ಕಾಟನ್)ಸೀರೆಗಳನ್ನು ತಯಾರಿಸುವಂತ ಆಧುನಿಕ ಮಗ್ಗಗಳನ್ನು ಸಣ್ಣ ಕೈಗಾರಿಕೆಗಳಂತೆ ಸಹಕಾರಿ ತತ್ವಗಳ ಆಧಾರದಲ್ಲಿ, ನೇಕಾರಿಕೆಯನ್ನು ಮುಂದುವರೆಸಿಕೊಂಡು ಹೋಗುವುದರ ಜೊತೆಯಲ್ಲಿ ಆದಾಯವನ್ನು ಹೆಚ್ಚಿಸುವಂತ ಕೆಲಸವು ಸಹಕಾರಿ ಕ್ಷೇತ್ರದಲ್ಲಿ ನಡೆಯುತ್ತಿದೆ. ಆದರೆ ಏನೇ ಹೊಸ-ಹೊಸ ಆವಿಷ್ಕಾರಗಳು ಕಂಡಿದ್ದರು ಸಾಂಪ್ರದಾಯಿಕ ಬಟ್ಟೆಗಳಿಗೆ ಈ ಆಧುನಿಕ ಸಮಾಜದಲ್ಲಿ ಬೆಲೆ ಹಾಗೂ ಮಾರಾಟದ ಮೇಲೆ ನೇಕಾರರ ಜೀವನವು ನಿಂತಿದೆ. ಆಧುನಿಕ ಜನಕ್ಕೆ ಒಗ್ಗುವಂತ(ಇಷ್ಟಪಡುವ) ಬಟ್ಟೆಯನ್ನು ತಯಾರಿಸಬೇಕು. ಯುವಕರು, ಯುವತಿಯರು, ಮಕ್ಕಳು, ಗೃಹಿಣಿಯರು, ಹಿರಿಯರು ಹಾಗೂ ಎಲ್ಲ ವರ್ಗದ ಜನರಿಗೆ ಸಾಮಾನ್ಯವಾಗಿ ಸಿಗುವಂತ ಹಾಗೂ ಕಡಿಮೆ ಬೆಲೆಯಲ್ಲಿ ಸಿಗುವಂತ ಬಟ್ಟೆಗಳು ತಯಾರಿಸಬೇಕು. ಅಂದಾಗ ಮಾತ್ರ ನೇಕಾರರಿಗೆ ಒಳ್ಳೆಯ ಸ್ಥಿತಿ ಮರುಕಳಿಸಬಹುದು. ಹಾಗೇ ಮರುಕಳುಹಿಸಬಹುದಾದರೆ, ನೇಕಾರರಿಗೆ ಸಿಗುವಂತ ಕಚ್ಚಾ ನೂಲು ಕಡಿಮೆ ಬೆಲೆಯಲ್ಲಿ ದೊರೆಯಬೇಕಾಗಿದೆ ಎಂದು ಸಹಕಾರಿ ಸಂಘದ ವ್ಯವಸ್ಥಾಪಕರು ತಿಳಿಸುತ್ತಾರೆ. ಅಂದಾಗ ಮಾತ್ರ ನೇಕಾರಿಕೆಯನ್ನು ಮುಂದಿನ ಪೀಳಿಗೆಗೆ ಕೊಂಡೊಯ್ಯಬಹುದು. ಎಂಬ ಅಭಿಪ್ರಾಯ ಅವರದ್ದು.

ನೇಕಾರಿಕೆಯು ಕೇವಲ ಸಾಂಪ್ರದಾಯಿಕವಾಗಿ ಮುಂದುವರೆಯದೆಯೇ, ಕಾಲಕ್ಕೆ ಅನುಗುಣವಾಗಿ ಬದಲಾಗುವಂತ ವ್ಯವಸ್ಥೆ ಬೆಳೆಯಬೇಕು. ಈ ಸಾಂಪ್ರದಾಯಿಕ ನೇಕಾರಿಕೆಯಲ್ಲಿಯೂ ಹಲವಾರು ರೀತಿಯಲ್ಲಿ ಬದಲಾವಣೆ ಆಗಿರುವುದು ಕಂಡುಬರುತ್ತವೆ. ಕೈಮಗ್ಗದಿಂದ ಹಿಡಿದು ಆಧುನಿಕ ವಿದ್ಯುತ್ ಚಾಲಿತ ಮಗ್ಗಗಳ

ನೇಕಾರ ವೃತ್ತಿಯ ವಿಕಾಸವನ್ನು ಮತ್ತು ಬೆಳವಣಿಗೆಯನ್ನು ನೋಡುವ ಅನಿವಾರ್ಯವು ಬೇಕೆ ಬೇಕು. ಮೊದಮೊದಲು ಕೈಗಳಿಂದ ಎಳೆ(ಹಾಸು ಮತ್ತು ಹೊಕ್ಕು)ಗಳನ್ನು ಜೋಡಿಸಿ ಹೊಕ್ಕನ್ನು ಅದರ ಮಧ್ಯಭಾಗದಲ್ಲಿ ಹೆಣೆಯುವಂತ ನೇಕಾರಿಕೆ ವ್ಯವಸ್ಥೆಯಿಂದ ಬೆಳೆದುಬಂದ ನೇಕಾರಿಕೆ ಬಹಳ ಬದಲಾವಣೆಯನ್ನು ಕಂಡಿದೆ. ಹೆಣೆಯುವ ನೇಕಾರಿಕೆಯಿಂದ ಪ್ರಾರಂಭವಾದ ಬಟ್ಟೆ ತಯಾರಿಕೆಯು ಕೈಮಗ್ಗ ಎಂದು ಹೆಸರನ್ನು ಪಡೆದುಕೊಂಡಿತು. ನಂತರದಲ್ಲಿ ಈ ಕೈಮಗ್ಗಗಳಲ್ಲಿ ಹೊಸ ಆವಿಸ್ಕಾರಗಳು ಬೆಳೆದವು. ಕೈಮಗ್ಗದ ಆವಿಸ್ಕಾರವು ಶುದ್ಧ ಬಟ್ಟೆಯನ್ನು ತಯಾರಿಸಲು ಅಣಿಮಾಡಿಕೊಟ್ಟಿತು. ಕೈಮಗ್ಗ, ಕುಣಿಮಗ್ಗ, ಸ್ವಯಂ ಚಾಲಿತ ಕೈಮಗ್ಗ, ಜಕಾರ್ಡ ಮಗ್ಗ ಹಾಗೂ ಜಕಾರ್ಡ ಮಗ್ಗದಲ್ಲಿ ಹವಾನಿಯಂತ್ರಿತ ಕೈ ಮಗ್ಗಗಳ ಆವಿಸ್ಕಾರ ಗೊಂಡವು. ಇವುಗಳು ಆಯಾ ಪರಿಸರದಲ್ಲಿ ನೇಕಾರರು ತಮಗೆ ಇಷ್ಟವಾದ ಪ್ರಕಾರದ ಮಗ್ಗವನ್ನು ನೇಯುತ್ತಾ ಕಾಲಘಟ್ಟಗಳಿಗೆ ಅನುಸಾರ ಬೇರೆ ಬೇರೆ ಮಗ್ಗಗಳನ್ನು ಬದಲಾಯಿಸುತ್ತಾ ಬೆಳೆದುಬಂದವು. ಆದರೆ ಈ ತರಹದ ಮಗ್ಗಗಳು ಎಲ್ಲ ನೇಕಾರಿಕೆಯ ಪ್ರದೇಶದಲ್ಲಿ ಇಂದು ಕಂಡುಬರುತ್ತವೆ. ಒಂದು ರೀತಿಯಲ್ಲಿ ನೇಕಾರಿಕೆಯ ವೃತ್ತಿಯ ಕೈ ಮಗ್ಗಗಳಲ್ಲಿ ಹೊಸತನ್ನು ಕಂಡರೆ, ಇನ್ನೊಂದು ರೀತಿಯಲ್ಲಿ ಬಟ್ಟೆಯ ತಯಾರಿಸುವ ಹಾಸು-ಹೊಕ್ಕುಗಳಲ್ಲಿ, ಬಣ್ಣಗಳಲ್ಲಿ, ವಿನ್ಯಾಸಗಳಲ್ಲಿ ಹಾಗೂ ವಿದೇಶಿಯ ತಂತ್ರಗಾರಿಕೆ ಹಾಗೂ ಕಚ್ಚಾ ಸಾಮಗ್ರಿಗಳು ಬಳಕೆಗೆ ಬಂದವು. ಯಾಂತ್ರಿಕ ಜೀವನದಲ್ಲಿ ಕೈಮಗ್ಗಗಳ ಉತ್ಪನ್ನಗಳು ಕಡಿಮೆಯಾಗಿ ಯಾಂತ್ರಿಕವಾದ ಉಪಕರಣಗಳಿಂದ ಸಾಂಪ್ರದಾಯಕ ಕೈಮಗ್ಗ ನಸಿಸಿ, ಬೃಹತ್ತ ಕೈಗಾರಿಕೆಗಳ ಸಾಲಿಗೆ ಸೇರಿಕೊಳ್ಳುತ್ತವೆ. ಈ ಕೈಮಗ್ಗಗಳು ಮುಂದೊಂದು ದಿನ ಪಳೆಯುಳಿಕೆಗಳಾಗಿ ವಸ್ತುಸಂಗ್ರಹಾಲಯ ಸೇರಿಕೊಳ್ಳುವುದರಲ್ಲಿ ಯಾವುದೇ ಸಂದೇಹವೇ ಇಲ್ಲ.

### ೨.೪ ನೇಕಾರರ ಬದುಕಿನ ಸ್ಥಿತ್ಯಂತರಗಳು

#### ೧. ಬದುಕು ಮತ್ತು ಜೀವನ ಶೈಲಿ

ನೇಕಾರರ ಬದುಕು ಹಾಗೂ ಶೈಲಿಯು ಸಾಂಪ್ರಾದಾಯಕ ತಳಹದಿಯಲ್ಲಿದ್ದರೂ ಸಹ, ಆಧುನಿಕ ಯುಗದಲ್ಲಿ ಅಸ್ತಿತ್ವವನ್ನು ಉಳಿಸಿಕೊಂಡಿರುವುದು ಅದರ ಗಟ್ಟಿತನಕ್ಕೆ ಹಿಡಿದ ಕೈಗನ್ನಡಿ. ಬದುಕು ಬವಣೆಗಳ ನಡುವೆ ಜೀವನದ ಬಂಡಿಯನ್ನು ಸಾಗಿಸುತ್ತಿರುವ ನೇಕಾರರ ಬದುಕು ಮತ್ತು ಶೈಲಿಯು ವಿಭಿನ್ನವೆನಿಸಿದರೂ ಸಹ ಸೋಜಿಗದ ಸಂಗತಿಯಾಗಿದ್ದ ವೃತ್ತಿ, ಕಾಲಕ್ರಮೇಣ ಆಧುನಿಕ ಜಗತ್ತಿನ ಮಾರುಕಟ್ಟೆಯ ಭರದಲ್ಲಿ ಸಿಲುಕಿ ಸ್ಪರ್ಧೆಯನ್ನು ಎದುರಿಸುವ ಶಕ್ತಿಯನ್ನು ಕಳೆದುಕೊಳ್ಳುವಂತಹ ದುರಂತದ ಕಥೆಯ ಹಂದರವನ್ನು ತೆರೆದಿಡುತ್ತದೆ. ನೇಕಾರರ ವೃತ್ತಿಯ ಭಾವನೆಗಳಿಗೂ ಹಾಗೂ ಅವರ ಬದುಕಿನ ಶೈಲಿಯ ಭಾವನೆಗಳಿಗೂ ಅವಿನಾಭಾವವಾದ ಸಂಬಂಧವನ್ನು ಹೊಂದಿದ ಸ್ಥಿತಿ ಹಿಂದೊಂದು ದಿನಗಳಲ್ಲಿತ್ತು. ಅದು ಇಂದು ಕಣ್ಮರೆಯಾಗಿ ಕೇವಲ ಭಾವ ರಹಿತವಾದ ಸಾಧನಗಳಾಗಿ ನಿರ್ಮಿತಗೊಂಡಿವೆ. ಅಂತಹ ಬದುಕಿನುದ್ದಕ್ಕೂ ಭಾವನೆಗಳ ನಂಟಿನೊಂದಿಗೆ ವೃತ್ತಿಯನ್ನು ಪ್ರೀತಿಯಿಂದ, ಗೌರವದಿಂದ ಕಾಣುತ್ತಿದ್ದ ನೇಕಾರರ ಬದುಕು (ಸಂಪದ್ಭರಿತವಾದ) ಸಮುದಾಯದೊಡನೆ ಬೆರೆತು ಸಮಾಜದ ಅವಿಭಾಜ್ಯ ಅಂಗವಾಗಿರುತ್ತಿತ್ತು. ನೇಕಾರಿಕೆಗೆ ತನ್ನದೇಯಾದ ವೃತ್ತಿ

ಗೌರವವಿತ್ತು. ಅದು ಇತರ ವೃತ್ತಿಗಳೊಡನೆ ಸಮಕಾಲೀನ ಜೀವನದಲ್ಲಿ ಹಾಸುಹೊಕ್ಕಾಗಿತ್ತು. ಇಂತಹ ಅದ್ಭುತ ವೃತ್ತಿ ಬದುಕನ್ನು ಮುಂದಿನ ಪೀಳಿಗೆಗೆ ಕೊಂಡೊಯ್ಯುವ ಜವಾಬ್ದಾರಿಯನ್ನು ಹೊತ್ತಿದ್ದ ನೇಕಾರರ ಹಿರಿಯರು ಹಾಗೂ ಮುಖಂಡರು ಕಾಲ ಚಕ್ರದ ವಿದ್ಯಮಾನಗಳಲ್ಲಿ ಬದಲಾದ ಸನ್ನಿವೇಶದಿಂದಾಗಿ ನೇಕಾರಕೆಯ ವೃತ್ತಿ, ಜ್ಞಾನ, ಕೌಶಲ್ಯ, ಕಲೆಯನ್ನು ಪಸರಿಸುವಲ್ಲಿ ವಿಫಲರಾಗಿದ್ದಾರೆಂದರೆ ತಪ್ಪಾಗಲಿಕ್ಕಿಲ್ಲ. ಅದರ ಪುನರಾಮರ್ಶೆಯ ಗೋಜಿಗೂ ಸಹ ಅವರ ಆಸಕ್ತಿಯನ್ನು ತೋರಿಸುತ್ತಿಲ್ಲ. ಯಾಕೆಂದರೆ ತಂತ್ರಜ್ಞಾನ ಯುಗದ ಆಕರ್ಷಣೆಯು ಆಯಸ್ಕಾಂತದಂತೆ ಇದೇ ನೇಕಾರರ ಯುವ/ಎಳೆಯ ಮಕ್ಕಳನ್ನು ತನ್ನ ಒಡಲಿಗೆ ಬಾಚಿಕೊಂಡಿದೆ. ಇದರಿಂದ ಇಂದಿನ ಪರಿಸ್ಥಿತಿಯ ಕಾವಲು ಹಳೆಯ ತಲೆಮಾರಿನ ಜನರ ಜೀವನಾಧಾರವೇ ನೇಕಾರಿಕೆ ವೃತ್ತಿ. ಅವರಿಗೆ ಬೇರೆ ರೀತಿಯ ಕೌಶಲ್ಯಗಳು ಅಷ್ಟಾಗಿ ಕರಗತವಾಗಿಲ್ಲ ಅಥವಾ ಕರಗತ ಮಾಡಿಕೊಂಡಿಲ್ಲವೇನೋ ಇದು ಅವರ ಅಂತರಾಳದ ಪ್ರಶ್ನೆಯಾಗಿದೆ. ನೇಕಾರರ ಜೀನವ ಶೈಲಿ ಹಾಗೂ ಬದುಕು ಇತರೆ ವೃತ್ತಿಗಳಿಗೆ ಹೋಲಿಕೆ ಮಾಡಿಕೊಂಡಾಗ ಸಾಮಾನ್ಯವೆನಿಸಿದರೂ ಸಹ ತೃಪ್ತಿಯನ್ನು ಕಾಣಲು ಪರಿತಪ್ಪಿಸುತ್ತಿದ್ದಿದ್ದು ಕಂಡುಬರುತ್ತದೆ. ಅಂತಹ ಕಠಿಣವಾದ ಬದುಕನ್ನು ಸವೆಸಿದರೂ ಸಹ ಮುಂದೊಂದು ದಿನ ಸುಂದರವಾದ ಅಥವಾ ಒಳ್ಳೆಯ ದಿನಗಳು ಬರಬಹುದೆಂಬ ನಿರೀಕ್ಷೆ ಹಾಗೂ ಆಶಾಭಾವನೆ ಅವರಲ್ಲಿದೆ. ಅದು ಅಲ್ಲಿಂದ ಹೊರಬರಲೇಯಿಲ್ಲ ಹೀಗೆ ತಲೆತಲಾಂತರದಿಂದ ನೇಕಾರರ ಬದುಕಿನೊಂದಿಗೆ ಸಂಗಾತಿಯಾಗಿದ್ದ ಈ ವೃತ್ತಿ ಒಂದು ರೀತಿಯಲ್ಲಿ ಆಧುನಿಕತೆಗೆ ಒಳಪಟ್ಟು ಅದರ ಮೂಲ ರಚನೆಯಲ್ಲಿ ಬದಲಾವಣೆಯನ್ನು ಹೊಂದಿ ಜಾಗತೀಕರಣದ ಶೈಲಿಗೆ ಹೊಂದಿಕೊಳ್ಳಲು ಹವಣಿಸುತ್ತಿದೆ.

**೨. ಸಾಮಾಜಿಕ ಸ್ಥಾನಮಾನಗಳು**

ನೇಕಾರಿಕೆಗೀದ್ದ ಸಾಮಾಜಿಕ ಮನ್ನಣೆ, ಅದರಲ್ಲಿ ತೊಡಗಿರುವ ಜನರಿಗೆ ಅಷ್ಟೊಂದು ಪ್ರಬಲವಾಗಿ ಇರಲಿಲ್ಲ. ಯಾಕೆಂದರೆ ಅದು ಒಂದು ಸಮುದಾಯದ ಒಂದು ಕಲೆಯಾಗಿಯೂ ಸಹ ಜನರಮನ್ನಣೆ ಗಳಿಸಿತ್ತು. ಇಲ್ಲಿ ನೇಕಾರರು ಕುಶಲವಂತರಾಗಿದ್ದರೂ. ಆದರೆ ಯಾವುದೇ ರೀತಿಯ ವೈಜ್ಞಾನಿಕ ತರಬೇತಿಯನ್ನು ಪಡೆಯದವರಾಗಿದ್ದರು. ಹೀಗಾಗಿ ನೇಕಾರರ ಬದುಕು ಸಾಮಾಜಿಕ ಏಣಿ-ಶ್ರೇಣಿ ವ್ಯವಸ್ಥೆಯಲ್ಲಿ ಅಷ್ಟೇನೂ ಹೇಳಿಕೊಳ್ಳದ ಸ್ಥಿತಿಯಲ್ಲಿತ್ತು. ಸಾಮಾಜಿಕವಾಗಿ ನೇಕಾರ ಸಮುದಾಯದ ಜನರಲ್ಲಿ ಸಂಪ್ರದಾಯಕ್ಕೆ ಒತ್ತು ನೀಡಿದವರಾಗಿದ್ದರು ಹಾಗೂ ಇಂದಿಗೂ ಹಿರಿಯರು ಅದಕ್ಕೆ ಬದ್ದರಾಗಿದ್ದಾರೆ. ಅಷ್ಟೇನು ಸಿರಿವಂತ ಬದುಕು ನೇಕಾರ ಸಮುದಾಯಕ್ಕೆ ಇಲ್ಲ, ಆದರೆ ಅವರ ವೃತ್ತಿಗೆ ಮಹತ್ವವಿತ್ತು. ಎಂತಹ ಕಷ್ಟ ಬಂದರೂ ಸಹ ಎದೆಗುಂದದೇ ನೇಕಾರರ ಕುಟುಂಬಗಳು ಸಾಮಾಜಿಕ ಜೀವನವನ್ನು ಯಾವುದೇ ಅಡೆತಡೆಯಿಲ್ಲದೇ ಸಾಗಿಸುತ್ತಿದ್ದರು. ಇಂದು ಅದರ ಸ್ವರೂಪ ಹಾಗೂ ರೂಪ ರೇಷೆಗಳಲ್ಲಿ ಅನೇಕ ಬದಲಾವಣೆ ಹೊಂದಿ ವ್ಯವಸ್ಥೆಯೊಂದಿಗೆ ಸಾಗುತ್ತಾಇದೆ. ಈ ನೇಕಾರಿಕೆಯ ಸಮುದಾಯಗಳ ಜೀವನವು ಒಂದೆ ರೀತಿಯಲ್ಲಿದೆ. ದಶಕಗಳಿಂದಲೂ ಸಾಮಾಜಿಕವಾಗಿ ಅಭಿವೃದ್ಧಿ ಹೊಂದಲು ಹವಣಿಸುತ್ತಿದೆ. ಆದರೆ ಅದಕ್ಕೆ ಹಲವಾರು ಅಡೆ ತಡೆಗಳು, ಅಡ್ಡಗೋಡೆಗಳು ನಿರಂತರವಾಗಿ ಸಮುದ್ರದ ಅಲೆಗಳಂತೆ ಅಪ್ಪಳಿಸುತ್ತಿವೆ.

ಇದರ ಹೊಡೆತ ತಾಳಲಾರದೇ ಅವರ ಸದಾ ಕಾಲ ಯಾವಾಗಲೂ ಸಹ ಸಂತೃಪ್ತವಾದ ಜೀವನ ಸಾಗಿಸಲು ಸಾಧ್ಯವಾಗುತ್ತಿಲ್ಲ. ಇದರಿಂದ ಹೊರಬರಲು ಸಾಕಷ್ಟು ಪ್ರಯತ್ನ ಪಡುತ್ತಿದ್ದರೂ ಸಹ ಸಾಮಾಜಿಕವಾಗಿ ಮೇಲೇಳಲು ಅವರಿಗೆ ಸಾಧ್ಯವಾಗುತ್ತಿಲ್ಲ. ಇದರಿಂದ ನೇಕಾರರ ಸಮುದಾಯದ ಪ್ರಗತಿ ಕ್ರಮೇಣವಾಗಿ ಕುಂಠಿತವಾಗತೊಡಗಿದೆ. ತಂತ್ರಜ್ಞಾನ ಯುಗದಲ್ಲಿ ನೇಕಾರರು ತಮ್ಮ ಅಸ್ಥಿತ್ವಕ್ಕೆ ಹೋರಾಡಬೇಕಾದ ಪರಿಸ್ಥಿತಿ ಇಂದು ಅನಿವಾರ್ಯವಾಗಿದೆ. ನೇಕಾರರ ಬದುಕು ಕಷ್ಟಕರವಾಗಿದ್ದರೂ, ವೃತ್ತಿಯನ್ನು ಪ್ರೀತಿಸುತ್ತಿರುವುದು ಅದನ್ನು ಗೌರವಿಸುತ್ತಿರುವುದು ಅದನ್ನೇ ಜೀವಾಳವಾಗಿ ಮಾಡಿಕೊಂಡಿರುವುದು ಕಂಡುಬರುತ್ತದೆ. ನೇಕಾರರ ನರನಾಡಿಗಳಲ್ಲಿ, ರಕ್ತದ ಕಣಗಳಲ್ಲಿಯೂ ಸಹ ವೃತ್ತಿ ವೈಶಿಷ್ಟ್ಯ ತುಂಬಿಕೊಂಡಿದೆ. ಇದರ ಜೊತೆಜೊತೆಗೆ ಮುಂಬರುವ ಪೀಳಿಗೆಗೆ ಈ ವೃತ್ತಿಯ ಕಲೆಯನ್ನು ಕಲಿಸಲು ಉತ್ಸಾಹದ ಜೊತೆಗೆ ಸಂರಕ್ಷಿಸಲು ಹಾತೊರೆಯತೊಡಗಿರುವುದನ್ನು ಗಮನಿಸಬೇಕಾಗಿದೆ. ಇಡೀ ಸಮುದಾಯ ಹಾಗೂ ಸರಕಾರ ಒಂದು ವೇಳೆ ಪರ್ಯಾಯ ಕ್ರಮಗಳನ್ನು ಕೈಗೊಳ್ಳದಿದ್ದರೆ, ಪರಿಸ್ಥಿತಿಯು ಹೀಗೆ ಮುಂದುವರೆದರೆ ತಲೆತಲಾಂತರಗಳಿಂದ ನೇಕಾರರ ಸಾಮಾಜಿಕ ಬದುಕಿನಲ್ಲಿ ಹಾಸುಹೊಕ್ಕಾಗಿರುವ ಪವಿತ್ರವಾದ ವೃತ್ತಿಯನ್ನು ಇನ್ನಷ್ಟು ಅಳಿವಿನೆಡೆಗೆ ಸೇರಿಸಿದ್ದಂತಾಗುತ್ತದೆಂದರೆ ಅತೀಶಯೋಕ್ತಿಯಾಗಲಾರದು.

**೨ ನೇಕಾರರ ಸುಸ್ಥಿರ ಅಭಿವೃದ್ಧಿ ಹಾಗೂ ಸಬಲೀಕರಣ**

ನೇಕಾರಿಕೆಯು ಸಬಲೀಕರಣವಾಗಬೇಕಾಗಿದೆ. ನೇಕಾರ ಜನರ ಜೀವನ, ಬದುಕು, ಬವಣೆ, ಕಷ್ಟ ಕಾರ್ಪಣ್ಯಗಳು ಸವಾಲಾಗಿ ಪರಿಣಮಿಸಿವೆ. ಇದಕ್ಕೆ ತುರ್ತು ಚಿಕಿತ್ಸೆಯ ಅಗತ್ಯಯಿದೆ. ಅದುವೇ ಸುಸ್ಥಿರ ಅಭಿವೃದ್ಧಿ ಹಾಗೂ ಮುಂದುವರೆದ ಭಾಗವೆ ಸಬಲೀಕರಣ.

ಜಗತ್ತಿನಲ್ಲಿ ಮುಂದುವರೆದ ರಾಷ್ಟ್ರವಾಗ ಬೇಕೆಂಬುವ ಹೆಬ್ಬಯಕೆಯಲ್ಲಿ ಭಾರತವು ಒಂದು ಹೆಜ್ಜೆ ಮುಂದೆ ಇಟ್ಟಿದೆ. ಹಲವಾರು ಕ್ಷೇತ್ರಗಳಲ್ಲಿ ಸಾಕಷ್ಟು ಮುಂದುವರೆದಿದೆ. ಆದರೆ ಇನ್ನುಳಿದ ಸಣ್ಣ ಸಣ್ಣ ಕ್ಷೇತ್ರಗಳನ್ನು ಆಧುನಿಕ ಮಾರುಕಟ್ಟೆಗೆ ಸ್ಪರ್ಧೆಯನ್ನೊಡ್ಡಲಾರದೇ, ಅಂತಹ ತಂತ್ರಜ್ಞಾನವನ್ನು ಕೊಳ್ಳಲು ಆಗದೇ, ಅದರ ನಿರ್ವಹಣೆಯ ಕೌಶಲ್ಯವು ಗೊತ್ತಿಲ್ಲದೇಇರುವ ಕೇವಲ ಸಾಂಪ್ರದಾಯಿಕ ಬುನಾದಿಯಿಂದಲೇ ವೃತ್ತಿಯ ಮೌಲ್ಯವನ್ನು ಎತ್ತಿ ಹಿಡಿಯುವಂತ ಒಂದು ಕ್ಷೇತ್ರ ವೆಂದರೆ ಅದು ನೇಕಾರಿಕೆಯ ವೃತ್ತಿ.

ನೇಕಾರಿಕೆಯ ವೃತ್ತಿಯು ನಿರಂತರವಾಗಿ ಸಾಗುತ್ತಿದ್ದರೆ ಅದಕ್ಕೆ ತಕ್ಕದಾದ ಆರ್ಥಿಕ ಅಭಿವೃದ್ಧಿಯನ್ನು ಸಾಧಿಸಲು ಪ್ರಯತ್ನಿಸಬಹುದು. ಮಾರುಕಟ್ಟೆ ವಿಸ್ತಾರವಾದಂತೆ ಸಣ್ಣ ಸಣ್ಣ ಹಾಗೂ ಸಾಂಪ್ರದಾಯಿಕ ವೃತ್ತಿಗಳಿಗೆ, ಕಲೆಗಳಿಗೆ, ಪ್ರವೃತ್ತಿಗಳಿಗೆ ಬರಬೇಕಾದ ಬೆಲೆ ಕಡಿಮೆಯಾಗುತ್ತದೆ. ಇಂತಹ ಸನ್ನಿವೇಶದಲ್ಲಿ ನೇಕಾರಿಕೆ ವೃತ್ತಿಯು ಪ್ರಭಲವಾದ ಸ್ಪರ್ಧೆಯನ್ನು ಎದುರಿಸಲಾಗದೇ, ಬಹುಕಾಲದ ಬೇಡಿಕೆಯಾಗಿದ್ದ ವಿಶೇಷವಾಗಿ ನೇಕಾರಿಕೆ ಸೀರೆಗಳು, ಖಣಗಳು, ಇಂದು ಅವುಗಳ ಜೊತೆಯಲ್ಲಿಯೇ ನೇಕಾರರ ಬದುಕು ಸುಸ್ಥಿರತೆಯನ್ನು ಕಾಣಬಹುದಾಗಿದೆ.

ಕಾಲ ಬದಲಾಗಿದೆ ಆದರೆ ಸಾಂಪ್ರದಾಯಿಕತೆಯಿಂದ ಕೂಡಿದ ನೇಕಾರಿಕೆಯ ಜನರ ಜೀವನ ಬದಲಾಗಿಲ್ಲ. ಸಹಸ್ರಮಾನ ಅಭಿವೃದ್ಧಿಯ ಗುರಿಗಳನ್ನು ಸಾಧಿಸುವ ನಿಟ್ಟಿನಲ್ಲಿ ಭಾರತವು ಪ್ರಬುದ್ಧವಾಗಿ ಮುನ್ನೆಡೆಯಬೇಕಾದರೆ ಅತಿ ಚಿಕ್ಕ ಉದ್ಯಮ ಕ್ಷೇತ್ರಗಳು ಅಭಿವೃದ್ಧಿಯ ಹಾದಿಯಲ್ಲಿ ಸಾಗಬೇಕಾದ ಅನಿವಾರ್ಯತೆಯ ನೇಕಾರಿಕೆಯಂತಹ ವೃತ್ತಿಗಳ ಜೊತೆಗೆ ಅವಸ್ಯಕತೆಯು ಇದೆ. ಹೀಗೆ ನೇಕಾರಿಕೆಯ ವೃತ್ತಿಯು ಸುಸ್ಥಿರವಾದರೆ ಅದರ ಫಲಿತಾಂಶವೇ ಸಬಲೀಕರಣವಾಗುತ್ತದೆ ಎನ್ನುವುದರಲ್ಲಿ ಯಾವುದೇ ಸಂಶಯವಿಲ್ಲ.

**೨.೪. ಅಧ್ಯಯನದ ಭೌಗೋಳಿಕ ವ್ಯಾಪ್ತಿ**

ಬಾಗಲಕೋಟ ಜಿಲ್ಲೆಯ ಪ್ರಮುಖ ನೇಕಾರರ ತಾಲೂಕುಗಳಲ್ಲಿ ಹುನಗುಂದ ಮತ್ತು ಬಾದಾಮಿ. ಹುನಗುಮದ ಈ ತಾಲೂಕಿನ ಪ್ರಮುಖ ಊರುಗಳಾಗ ಕಮತಗಿ, ಅಮೀನಗಡ ಹಾಗೂ ಸುಳೇಭಾವಿಗಳನ್ನು ಹಾಗೂ ಬಾದಾಮಿ ತಾಲೂಕಿನ ಗುಳೇದಗುಡ್ಡ ನಗರವನ್ನು ಆಯ್ಕೆಮಾಡಿಕೊಳ್ಳಲಾಗಿದೆ. ೧೦ ಸಹಕಾರಿ ಸಂಘಗಳ ಹಾಗೂ ನೇಕಾರರ ಸಮೀಕ್ಷೆ ಹಾಗೂ ಅಧ್ಯಯನವನ್ನು ಮಾಡಲಾಗಿದೆ.

"ಈ ಜಿಲ್ಲೆಯಲ್ಲಿಯಲ್ಲಿ ೨೦೦೬-೦೭ರ ನೇಕಾರರ ಸಮೀಕ್ಷೆಯ ಪ್ರಕಾರ ಕೆಲವೊಂದು ಮಾಹಿತಿಗಳನ್ನು ಸೇರಿಸಲಾಗಿದೆ. ಗುಡಿಕೈಗಾರಿಕೆಯಲ್ಲಿ ಕೈಮಗ್ಗಗಳ ಉದ್ಯಮವು ಅತಿ ಪ್ರಮುಖವಾದ ಕ್ಷೇತ್ರವಾಗಿದೆ. ಹಚ್ಚಾಗಿ ಗ್ರಾಮೀಣ ಪ್ರದೇಶಗಳಲ್ಲಿ ಕೇಂದ್ರಿಕೃತವಾಗಿರುವ ವಾಗಿರುವ ಉದ್ಯಮವು ಅತಿ ಕಡಿಮೆ ಬಂಡವಾಳದಿಂದ ಹೆಚ್ಚು ಜನರಿಗೆ ಉದ್ಯೋಗ ನೀಡುವ ಕ್ಷೇತ್ರವಾಗಿರುತ್ತದೆ. ಕರ್ನಾಟಕ ರಾಜ್ಯದಲ್ಲಿ ೮೫,೦೦೦ ಕೈಮಗ್ಗಗಳಿದ್ದು ಇವುಗಳಲ್ಲಿ ೨೧,೧೩೪ ಕೈಮಗ್ಗಗಳು ಬಾಗಲಕೋಟ ಜಿಲ್ಲೆಯಲ್ಲಿ ಇರುತ್ತವೆ. ಈ ಪೈಕಿ ೬೧೨೬ ಕೈಮಗ್ಗಗಳು ಸಹಕಾರ ಕ್ಷೇತ್ರದಲ್ಲಿ ೫,೧೭೭ ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮದ ವ್ಯಾಪ್ತಯಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಇನ್ನುಳಿದ ೯,೮೩೧ ಕೈಮಗ್ಗಗಳು ಅಸಂಘಟಿತ ವಲಯದಲ್ಲಿ ಕಾರ್ಯವಿರ್ವಹಿಸುತ್ತಿದ್ದು ಅಸಂಘಟಿತ ವಲಯದಲ್ಲಿರುವ ಕೈಮಗ್ಗಗಳು ಸಹಕಾರ ಸಂಘಗಳ ಅಥವಾ ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮದ ವ್ಯಾಪ್ತಿಯಲ್ಲಿ ತರುವ ಪ್ರಯತ್ನವನ್ನು ಕೈಮಗ್ಗ ಮತ್ತು ಜವಳಿ ಇಲಾಖೆಯು ಮಾಡುತ್ತಿದೆ.

ಬಾಗಲಕೋಟ ಜಿಲ್ಲೇಯಲ್ಲಿ ಅತಿಹೆಚ್ಚಿನ ಸಂಖ್ಯೆ ಕೈಮಗ್ಗಗಳಿದ್ದು ಇಲಕಲ್ಲ, ಕೋಡಿಹಾಳ, ಗುಳೇದಗುಡ್ಡ, ಸೂಳೇಭಾವಿ, ಅಮೀನಗಡ, ಕಮತಗಿ, ಶಿರೂರ, ಕೊಂಕಣಕೊಪ್ಪ, ನಾಗರಾಳ, ಕೆರೂರ, ಗುಡೂರ, ರಬಕವಿ, ಬನಹಟ್ಟಿ, ಮಹಾಲಿಂಗಪೂರ, ತೇರದಾಳ ಈ ಗ್ರಾಮಗಳಲ್ಲಿ ಕೇಂದ್ರಿಕೃತವಾಗಿರುತ್ತವೆ. ಜಿಲ್ಲೆಯಲ್ಲಿ ಇಳಕಲ್ಲ ಸೀರೆಗಳು, ಗುಳೇದಗುಡ್ಡ ಖಣಗಳು ಮತ್ತು ರಬಕವಿ, ಬನಹಟ್ಟಿ ಹತ್ತಿ ನೂಲಿನ ಸೀರೆಗಳು ಪ್ರಸಿದ್ದಿಯಾದ ಕೈಮಗ್ಗ ಬಟ್ಟೆಗಳಾಗಿವೆ."[೧೦]

## ಬಾಗಲಕೋಟ ಜಿಲ್ಲೆಯಲ್ಲಿರುವ ಕೈಮಗ್ಗಗಳ ಅಂಕಿ ಅಂಶಗಳು

| ಅ.ನಂ. | ತಾಲೂಕಿನ ಹೆಸರು | ತಾಲೂಕಿನಲ್ಲಿರುವ ಕೈಮಗ್ಗಗಳ ವಿವರ | | ಸಹಕಾರಿ ವಲಯದಲ್ಲಿ ಅಳವಡಿಸಿದ ಕೈಮಗ್ಗಗಳು | | ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮದಡಿ ಅಳವಡಿಸಿದ ಕೈಮಗ್ಗಗಳು | | ಅಸಂಘಟಿತ ವಲಯದ ಕೈಮಗ್ಗಗಳು |
|---|---|---|---|---|---|---|---|---|
| | | ಕೈಮಗ್ಗಗಳು | ನೇಕಾರರ ಕುಟುಂಬಗಳು | ಸಹಕಾರ ಸಂಘಗಳು | ಕೈಮಗ್ಗಗಳು ಕಾರ್ಯನಿರತ | ಉಪ ಕೇಂದ್ರಗಳು | ಕಾರ್ಯನಿರತ ಕೈಮಗ್ಗಗಳು | |
| ೧ | ಹುನಗುಂದ | ೫೪೮೩ | ೨೯೧೨ | ೨೮ | ೪೮೮೫ | ೪ | ೪೨೨ | ೧೭೫ |
| ೨ | ಬಾದಾಮಿ | ೫೯೨೧ | ೨೮೬೭ | ೧೪ | ೩೨೪ | ೩ | ೧೩೫ | ೫೪೬೨ |
| ೩ | ಬಾಗಲಕೋಟ | ೬೬೫ | ೪೦೧ | ೩ | ೨೩೩ | ೧ | ೭೮ | ೩೫೪ |
| ೪ | ಜಮಖಂಡಿ | ೬೭೯೨ | ೬೩೨೧ | ೭ | ೧೬೯ | ೧೬ | ೩೭೨೮ | ೨೮೯೫ |
| ೫ | ಮುಧೋಳ | ೧೭೦೬ | ೧೨೨೭ | ೩ | ೧೯೫ | ೪ | ೭೩೪ | ೭೭೭ |
| ೬ | ಬೀಳಗಿ | ೫೬೮ | ೪೭೫ | ೪ | ೩೨೦ | ೩ | ೮೦ | ೧೬೮ |
| | ಒಟ್ಟು | ೨೧೧೩೫ | ೧೪೨೦೩ | ೫೯ | ೬೧೨೬ | ೩೧ | ೫೧೭೭ | ೯೮೩೧ |

*ಮಾಹಿತಿ:ಕೈಮಗ್ಗ ಮತ್ತು ಜವಳಿ ಇಲಾಖೆ, ಜಿಲ್ಲಾ ಪಂಚಾಯತ್, ಬಾಗಲಕೋಟ (ಕೈಮಗ್ಗ ಮತ್ತು ಜವಳಿ ಸಂಕ್ಷಿಪ್ತ ಮಾಹಿತಿ ೨೦೦೬-೦೭)

ಆದರೆ ಇಂದು ಬಾಗಲಕೋಟ ಜಿಲ್ಲೆಯಲ್ಲಿ ಸಹಕಾರಿ ವಲಯದಲ್ಲಿ ೧೪೩ ನೇಕಾರರಿಗೆ ಸಂಬಂಧಿಸಿದ ನೇಕಾರ ಸಹಕಾರಿ ಸಂಘಗಳನ್ನು ನೋಡುತ್ತೇವೆ. ಸಹಕಾರಿ ಕ್ಷೇತ್ರದಲ್ಲಿ ಅತಿಹೆಚ್ಚು ಜನರೂ ಭಾಗಿಯಾಗಿರುವುದು ಕಂಡುಬಂದರು ಕೂಡಾ, ಅವರ ದುಡಿಮೆಯು ಹೆಚ್ಚಾಗಿ ಮಾಲೀಕ ವರ್ಗದವರಲ್ಲಿರುವುದು ಈ ಅಧ್ಯಯನದಿಂದ ತಿಳಿಯುತ್ತದೆ.

### ಅಡಿಟಿಪ್ಪಣಿಗಳು


೧. ಭೈರಪ್ಪ. ಕೆ. ೨೦೦೭. ‘ಕೈಗಾರಿಕಾ ಸಮಾಜಶಾಸ್ತ್ರ,’ ಪು.೨೧
೨. ಕರ್ನಾಟಕ ರಾಜ್ಯ ಪತ್ರ, ೨೦೦೨. ಎಪ್ರಿಲ್ ೧೧. ಪತ್ರಿಕೆ(ಕರ್ನಾಟಕ ಸರಕಾರ) ಪು.೪
೩. ಪ್ರಜ್ಞಾ ೨೦೧ ‘ನೇಕಾರ ಸಮುದಾಯ: ಸಾಮಾಜಿಕ ಮತ್ತು ಆರ್ಥಿಕ ಅಧ್ಯಯನ,’ (ಅಪ್ರಕಟಿತ ಸಂಪ್ರಬಂಧ) ಪು.೩೯
೪. ಅದೇ ಪು. ೪೧
೫. ವಚನ ಸಂಕೀರ್ಣ. ೧೯೯೩. ‘ವಚನ ಸಂಪುಟ-೨’, ಪು.೨೪೬
೬ ಸಿದ್ದಯ್ಯ ಪುರಾಣಿಕ, ೧೯೭೭. ‘ಶರಣ ಚರಿತಾಮೃತ,’ ಪು.೩೫
೭ ಕಂದಗಲ್.ಪಿ.ಎಸ್. ೨೦೦೫. ‘ಇಳಕಲ್ ಸೀರೆ ಬಣ್ಣ ಮತ್ತು ವಿನ್ಯಾಸ,’ (ಅಪ್ರಕಟಿತ ಸಂಪ್ರಬಂಧ) ಪು.೪೯
೮. ಭಾರತದ ಗ್ಯಾಜೆಟಿಯರ್, ೧೯೮೨ ಕರ್ನಾಟಕ ರಾಜ್ಯ, (ಭಾಗ-೧) ಪು.೮೯೫
೯. ನ್ಯೂ ಎನ್ ಸೈಕ್ಲೋಪೀಡಿಯಾ ಬ್ರಿಟಾನಿಕಾ. ಸಂಪುಟ-೧೮. ಪು.೧೭೦
೧೦. ಉಪನಿರ್ದೇಶಕರು, ೨೦೦೬-೦೭, ‘ಯೋಜನೆಗಳ ಸಂಕ್ಷಿಪ್ತ ಮಾಹಿತಿ,’ ಪು.೧

## ಅಧ್ಯಾಯ ಮೂರು: ನೇಕಾರರ ಅಭಿವೃದ್ಧಿಯಲ್ಲಿ ನೇಕಾರ ಸಹಕಾರಿ ಸಂಘಗಳ ಪಾತ್ರ

೩.೧. ನೇಕಾರ ಸಹಕಾರಿ ಸಂಘಗಳ ಉಗಮ, ಗುರಿ ಮತ್ತು ಉದ್ದೇಶಗಳು

೩.೨. ಸರಕಾರದ ಜವಳಿ ನೀತಿ

೩.೩. ಸರಕಾರದ ಯೋಜನೆಗಳು

೩.೪. ನೇಕಾರರ ಅಭಿವೃದ್ಧಿಯಲ್ಲಿ ಸ್ವಯಂ ಕಾರ್ಯಕ್ರಮಗಳು

೩.೫. ನೇಕಾರರ ಅಭಿವೃದ್ಧಿಯಲ್ಲಿ ಸಹಕಾರಿ ಸಂಘಗಳ ಪಾತ್ರ ಮತ್ತು ಸ್ಥಿತಿ

# ಅಧ್ಯಾಯ ಮೂರು:
# ನೇಕಾರರ ಅಭಿವೃದ್ಧಿಯಲ್ಲಿ ನೇಕಾರ ಸಹಕಾರಿ ಸಂಘಗಳ ಪಾತ್ರ

## ೩.೧ ನೇಕಾರ ಸಹಕಾರಿ ಸಂಘಗಳ ಉಗಮ, ಗುರಿ ಮತ್ತು ಉದ್ದೇಶಗಳು

### ಪೀಠಿಕೆ

ಸಹಕಾರಿ ಸಂಘಗಳು ೨೦ನೇ ಶತಮಾನದ ವೃತ್ತಿ ಆಧಾರಿತ ಸಮುದಾಯಗಳಿಗೆ ಆಧುನಿಕ ಕೊಡುಗೆಗಳಾಗಿವೆ. ಸಹಕಾರಿ ಸಂಘಗಳಿಂದಲೇ ಇಂದು ಸಾಂಪ್ರದಾಯಿಕ ಕಸುಬುಗಳು ಇನ್ನೂ ಭಾರತದಲ್ಲಿ ಅಸ್ಥಿತ್ವದಲ್ಲಿವೆ. ಸಹಕಾರಿ ಸಂಘಗಳಿಂದ ಸಂಘದ ಸದಸ್ಯರುಗಳ ಜೀವನ ನಿರ್ವಹಣೆಗೆ ಸಹಕಾರಿಯಾಗಿವೆ. ಈ ಸಹಕಾರಿ ಸಂಘಗಳು ಒಂದು ಒಗ್ಗಟ್ಟಿನ ಮೂಲಮಂತ್ರದಿಂದ ಗುರುತಿಸಿ ಕೊಂಡಿವೆ. ಜನರ ಆಶಾಭಾವನೆಗಳಿಗೆ ಸ್ಪಂದಿಸುವಂತ ಕಾರ್ಯವು, ಸಹಕಾರಿ ಸಂಘಗಳಲ್ಲಿ ನಡೆಯುತ್ತಿವೆ. ಕೃಷಿ ಹಾಗೂ ಖಾದಿ ಹೋರಾಟಗಳಿಂದ ಸಹಕಾರಿ ಪ್ರವೃತ್ತಿ ನಮ್ಮ ದೇಶದಲ್ಲಿ ಬೆಳೆಯಲು ಕಾರಣವಾಗಿದೆ. ಈ ಸಹಕಾರಿ ಕ್ಷೇತ್ರದಲ್ಲಿ ಒಳಗೊಂಡ ಸಮುದಾಯದ ಜನರಿಗೆ ಒಳ್ಳೆಯ ಆರ್ಥಿಕ ಬೆಳವಣಿಗೆ, ದಿನ ನಿತ್ಯದ ಕೆಲಸ, ಆರೋಗ್ಯ ಸಂಬಂಧಿ ಸಹಕಾರ, ಸರಕಾರದೊಂದಗಿನ ಯೋಜನೆಗಳನ್ನು ತಲುಪಿಸುವಲ್ಲಿಯ ಮಧ್ಯವರ್ತಿ ಕಾರ್ಯವನ್ನು ಮಾಡುತ್ತಾ ಬಂದಿವೆ. ಸಹಕಾರಿ ಸಂಘಗಳು ಜನರ ಶಕ್ತಿಗಳಾಗಿ ಕೆಲಸವನ್ನು ನಿರ್ವಹಿಸುತ್ತಿರುವವು. ಸಹಕಾರದಿಂದಲೇ ದೇಶದ ಸ್ವಾತಂತ್ರ್ಯಕ್ಕೆ ಬದ್ಧ ಬುನಾದಿಯನ್ನು ರೂಪಿಸಲಾಯಿತು. ಭಾರತದಲ್ಲಿಯ ಸಹಕಾರಿ ಚಳುವಳಿಗಳು ಹಾಗೂ ಹೋರಾಟಗಳು ಜನರ ಒಗ್ಗಟಿನ ತತ್ವದಿಂದ ಸಹಕಾರ ಸಂಘಟಣೆ ಹಾಗೂ ಸಂಘಗಳಾಗಿ ಮೂಡಿಬಂದವು.

ಸಹಕಾರಿ ಸಂಘಗಳು ಸಮಾಜದಲ್ಲಿರುವ ಮಾನವತಾ ಭಾವನೆ, ಹೊಂದಾಣಿಕೆಯ ಬದುಕು, ಸಮೂಹ ಸಂಘಟನೆ, ಸಮಸ್ಯೆಗಳ ಪರಿಹಾರ, ಪರಸ್ಪರ ಸಹಕಾರದಿಂದ ಪರಿಹಾರವನ್ನು ಹಂಚಿಕೊಳ್ಳಲು ಸಹಕರಿಸುತ್ತವೆ. ಮೊದ ಮೊದಲು ವೃತ್ತಿಗೆ ಸಂಬಂಧಿಸಿದ ಸಮುದಾಯದವರನ್ನು ಕೂಡಿಸಿ ಆ ಸಮುದಾಯಗಳ ರಕ್ಷಣೆಯ ಜೊತೆಯಲ್ಲಿ ಅವರ ಆರ್ಥಿಕ ಅಭಿವೃದ್ಧಿಯಲ್ಲಿ ಹಾಗೂ ಸಾಮಾಜಿಕ ಸ್ಥಾನಮಾನವನ್ನು ಸಮಾಜದಲ್ಲಿ ಹೆಚ್ಚಿಸಿಕೋಳ್ಳುವುದಾಗಿದೆ. ಸಹಕಾರಿ ಸಂಘಗಳ ಉಗಮಕ್ಕೆ ಮೂಲ ವೃತ್ತಿ ಆಧಾರಿತ ಉತ್ಪನ್ನಗಳ ತಯಾರಿಕೆ, ಮಾರಾಟ, ಗುಣಮಟ್ಟ ಕಾಪಾಡುವುದು, ಉತ್ತಮ ಬೆಲೆ ಕಂಡುಕೊಳ್ಳುವುದು, ಹೊಸ ಹೊಸ ಉತ್ಪಾದನೆಗಳನ್ನು ಹೆಚ್ಚಿಸುವುದಾಗಿದೆ ಹಾಗೂ ಉತ್ಪಾದನೆಯಲ್ಲಿ ಹೆಚ್ಚಳ ಮಾಡುವುದಕ್ಕೆ ಸಂಪನ್ಮೂಲ ತರಬೇತಿ ನೀಡುವುದು ಮುಖ್ಯವಾಗಿರುತ್ತದೆ. ಗುರಿ ಉದ್ದೇಶಗಳನ್ನು ಇಡೆರಿಸಿಕೊಳ್ಳುವುದಾಗಿದೆ. ಸಂಘರ್ಷ ರಹಿತ ಸಮಾಜ, ಸಮಾನತೆ ಬದುಕು, ಆರ್ಥಿಕ ಅಭಿವೃದ್ಧಿ ಸಾಧಿಸಲು ಪಾರಂಪರಿಕ ಹಾಗೂ ಆಧುನಿಕ ವೃತ್ತಿಗಳಲ್ಲಿನ ಮೈಗೂಡಿಸಿಕೊಳ್ಳುವುದು. ಸಹಕಾರಿ ಸಂಘಗಳು ಪ್ರಮುಖವಾಗಿ ಪ್ರಜಾಪ್ರಭುತ್ವದ ನೆಲೆಯಲ್ಲಿ ನಡೆಯುತ್ತವೆ. ಇವು ಸಂಘಟಣೆಯ ಮೂಲಕವಾಗಿ ಸಮುದಾಯದ ಅಭಿವೃದ್ಧಿಯನ್ನು ಸಾಧಿಸುವಲ್ಲಿ ಕಾರ್ಯಚಟುವಟಿಕೆಗಳನ್ನು ನಿರ್ವಹಿಸುತ್ತವೆ. ಸಮುದಾಯದ ಜನರ ಶಿಕ್ಷಣ, ವೃತ್ತಿಯಲ್ಲಿ ಪ್ರೇರಣೆ, ಪ್ರೋತ್ಸಾಹ, ಸಹಕಾರ, ಸಹಾಯ ಮಾಡುವುದರಿಂದ

ನಂಬಿಕೆಯನ್ನು ಉಳಿಸಿಕೊಳ್ಳುತ್ತವೆ. ಭಾರತದಂತ ಕೃಷಿ ಪ್ರಧಾನ ರಾಷ್ಟ್ರದಲ್ಲಿ ಮೊದಲು ಕೃಷಿಕರ ಸಹಕಾರ ಹೋರಾಟಗಳಿಂದ ಪ್ರಾರಂಭಗೊಂಡು, ಇಂದು ಸಾಂಪ್ರದಾಯಿಕ ವೃತ್ತಿಗಳನ್ನು ಹೊರತುಪಡಿಸಿ ಆಧುನಿಕ ಸಂಘಟಣೆಗಳು, ಸಹಕಾರಿ ಸಂಘಗಳು ಬೆಳೆದು ನಿಂತಿವೆ ಎಂಬುದು ಕಂಡುಬರುತ್ತವೆ. ಉದಾಹರಣೆಗೆ ಆಧುನಿಕ ವೃತ್ತಿಗಳಾದ ಶಿಕ್ಷಕರ ಸಹಕಾರಿ ಸಂಘಗಳು, ಪ್ರಾಧ್ಯಾಪಕರ ಸಹಕಾರಿ ಸಂಘಗಳು, ಆಟೋಚಾಲಕರ ಸಹಕಾರಿ ಸಂಘಗಳು, ಮಹಿಳಾ ಸಹಕಾರಿ ಸಂಘಗಳು, ಅಭಿಯಂತರರ ಸಹಕಾರಿ ಸಂಘಗಳು, ವಿಜ್ಞಾನಿಗಳ ಸಹಕಾರಿ ಸಂಘಗಳು ಮುಂತಾದ ವಿವಿಧ ಸಂಘಗಳನ್ನು ನೊಡುತ್ತೇವೆ.

**ಸಹಕಾರಿ ಕ್ಷೇತ್ರದ ಉಗಮ**

ಸಹಕಾರಿ ಕ್ಷೇತ್ರದ ಉಗಮವನ್ನು ನಾವು ಮೂರು ಭಾಗಗಳಲ್ಲಿ ನೋಡಬಹುದಾಗಿದೆ. ಒಂದು ಪ್ರಾಚೀನ ಕಾಲ, ಎರಡು ಮಧ್ಯಕಾಲ ಹಾಗೂ ಮೂರು ಆಧುನಿಕ ಕಾಲ. ಹೀಗೆ ಕಾಲಘಟ್ಟಗಳಲ್ಲಿ ಬೆಳೆದು ಬಂದಿವೆ. ವಿವಿಧ ಭಾಗಗಳ ಮೂಲಕ ಸಹಕಾರಿ ಸಂಘಟಣೆಗಳು ಬೆಳೆದಿವೆ. ಮಾನವ ಸಂಘ ಜೀವಿ ಆದುದರಿಂದ ಅಂದಿನಿಂದಲೂ ಸಹಾಯ ಸಹಕಾರದಿಂದ ಸಮೂಹದಲ್ಲಿ ಬೆಳೆದುಕೊಂಡು ಬಂದನು.

**ಪ್ರಾಚೀನ ಕಾಲ:** ಪ್ರಾಚೀನ ಕಾಲದಲ್ಲಿ ಅಥವಾ ಪ್ರಾಚೀನ ಯುಗ, ಪುರಾತನ ಯುಗದಲ್ಲಿ ಮಾನವನು ಯಾವುದೇ ಕೆಲಸವನ್ನು ತನ್ನ ಕೈಗಳಿಂದ ಹಾಗೂ ಶೃಜನಾತ್ಮಕ ಕಲೆಯಿಂದ, ಬುದ್ದಿಯಿಂದ ಕೆಲಸವನ್ನು ಮಾಡುತ್ತಾ ಬಂದನು. ತನ್ನ ಜೀವನ ನಿರ್ವಹಣೆಗೆ ಈ ಕೆಲಸಗಳಾದ ಬೇಟೆಯಾಡುವುದು, ಕೃಷಿಮಾಡುವುದು, ಚರ್ಮವನ್ನು ಹದಮಾಡಿ ಬಟ್ಟೆ ತಯಾರಿಸುವುದು ಮುಂತಾದ ಕೆಲಸಗಳಿಂದ ನಿರತನಾದ ಮಾನವನು ಒಂದೆಡೆ ನೆಲೆ ನಿಂತನು. "ಅಂದಿನ ದಿನಗಳಲ್ಲಿನ ಮಾನವನ ಆಸಕ್ತಿಯು ಪ್ರಮುಖವಾಗಿ ಆಹಾರಾನ್ವೇಷಣೆ ಹಾಗೂ ಶಾರೀರಿಕ ಸಂರಕ್ಷಣೆಗಳಿಗೆ ಸೀಮಿತವಾಗಿತ್ತು."[೧] ಪ್ರಾಚೀನ ಮಾನವನು ತನ್ನ ಆಹಾರಕ್ಕಾಗಿ ಪ್ರಾಣಿಗಳನ್ನು ಬೇಟೆಯಾಡುತ್ತಿದ್ದನು ಅವನು ಈ ಬೇಟೆಯ ಸಂದರ್ಭದಲ್ಲಿ ಗುಂಪಾಗಿ ಬೇಟೆಗೆ ಸಿದ್ದರಾಗುತ್ತಿದ್ದರು ಎಂಬ ಉಲ್ಲೇಖಗಳಿವೆ. ಅದು ಸಮೂಹವು ಸಹಕಾರವನ್ನು ಎತ್ತಿ ತೋರಿಸುತ್ತದೆ ಹಾಗೂ ಗುಂಪಾಗಿ ಗುಹೆಗಳಲ್ಲಿ ವಾಸಿಸುವುದು ಹಾಗೂ ಆಹಾರವನ್ನು ತಮ್ಮ ಹಾಡಿ, ಹಟ್ಟಿ ಹಾಗೂ ಪೋಡಿಯ ಜನರಿಗೆ ಹಂಚುತ್ತಿದ್ದರು. ಇದು ಕೂಡಾ ಸಹಕಾರದ ತತ್ವವನ್ನು ಒಳಗೊಂಡಿದ್ದು ಕಂಡುಬರುತ್ತದೆ.

**ಮಧ್ಯಕಾಲ:** ಈ ಕಾಲಘಟ್ಟಗಳಲ್ಲಿ ಉಳಿಗಮಾನ್ಯ ಪದ್ದತಿಯು ಇತ್ತು. ಈ ಉಳಿಗಮಾನ್ಯ ಪದ್ದತಿಯು ಮಾನವನ ಶ್ರಮಕ್ಕೆ ಯಾವುದೇ ಬೆಲೆ ಇಲ್ಲದೆ, ಕೂಲಿಯಂತೆ ಅಥವಾ ಪ್ರಾಣಿಗಳಂತೆ ಜೀವಿಸುತ್ತಿದ್ದನು. ಉಳಿಗಮಾನ್ಯ ಪದ್ದತಿಯು ಸುಮಾರು ೯ ರಿಂದ ೧೨ ನೇ ಶತಮಾನದ ಸಮಕಾಲೀನ ಯೂರೋಪಿನಲ್ಲಿ ಹಾಗೂ ಇಂಗ್ಲೆಂಡಿನಲ್ಲಿ ಅತಿ ಹೆಚ್ಚು ಕಂಡುಬಂದಿದೆ. ಈ ಕಾಲಘಟ್ಟದಲ್ಲಿ ಕೆಲವೇ ಜನರು ಒಬ್ಬೊಬ್ಬರಲ್ಲಿ ಪ್ರತ್ಯೇಕವಾಗಿ ಭೂ ಭಾಗದ ಒಡೆಯರಾಗಿದ್ದರು. ಒಡೆಯರ ಕೈ ಕೆಳಗೆ ಕೆಲಸ ಮಾಡುವವರು ಉಳಿಗರು ಎಂದು ಕರೆಯುತ್ತಿದ್ದರು. ಅವರು ನೂರಾರು ಕೆಲಸಗಾರರನ್ನು ಕೃಷಿ ಕೆಲಸ ಕಾರ್ಯಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದರು. ಆ ಬಗೆಯ ಕೆಲಸ

ಮಾಡುವವರು ಒಕ್ಕಲುಗಳು ಅಥವಾ ಜೀತದಾಳುಗಳೆಂದು ಕರೆಯುತ್ತಿದ್ದರು. "ಕೃಷಿಯೇ ಪ್ರಧಾನ ಕಸುಬಾಗಿದ್ದ ಈ ಪದ್ಧತಿಯಲ್ಲಿ ಇತರ ಕಸುಬುಗಳಾದ ಬಡಿಗತನ, ಕಮ್ಮಾರಿಕೆ, ಕುಂಬಾರಿಕೆ, ನೇಯ್ಗೆ, ಚಮ್ಮಾರಿಕೆ ಮುಂತಾದವುಗಳನ್ನು ಕೆಲಸಮಾಡುತ್ತಿದ್ದ ವರ್ಗದ ಜನರಿಗೆ ಜಮೀನ್ದಾರರು ಅತ್ಯಲ್ಪ ಪ್ರತಿಫಲ ನೀಡಿ ತಾವು ಹೆಚ್ಚಿನ ಲಾಭವನ್ನು ಸಂಪಾದಿಸುತ್ತಿದ್ದರು."[೧] ಈ ಸಂದರ್ಭದಲ್ಲಿ ಆಗಾಗ್ಗೆ ನಡೆಯುತ್ತಿದ್ದ ಜಮೀನ್ದಾರರ ನಡುವಿನ ಹೋರಾಟದಲ್ಲಿ ನೂರಾರೂ ಜನ ರೈತರು ಹಾಗೂ ಇತರೆ ಕೆಲಸಗಾರರೂ ತಮ್ಮ ಪ್ರಾಣವನ್ನು ಕಳೆದುಕೊಳ್ಳುತ್ತಿದ್ದರು. ಇದರ ಪ್ರತಿಕಾರಕ್ಕಾಗಿ ಶ್ರಮಿಕವರ್ಗದ ಜನರು ವೃತ್ತಿ ಆಧಾರ ಮೇಲೆ ಸಂಘಟನೆಗಳನ್ನು ಕಟ್ಟಿಕೊಳ್ಳಲು ಪ್ರಾರಂಭಿಸಿದರು. ೧೧ನೇ ಶತಮಾನದ ಕಾಲಘಟ್ಟದಲ್ಲಿ ಯೂರೋಪಿನಲ್ಲಿ ನಗರೀಕರಣದ ಪ್ರಭಾವದಿಂದ ಅಲ್ಲಿಯ ಗ್ರಾಮೀಣ ಪ್ರದೇಶದ ಜನರು ವಲಸೆ ಬಂದು ಜೀವನವನ್ನು ಪ್ರಾರಂಭಿಸಿದರು. ಈ ಸಂದರ್ಭದಲ್ಲಿ ಒಂದೇ ವೃತ್ತಿಗೆ ಸಂಬಂಧಿಸಿದ ಶ್ರಮಿಕರು, ಕೃಷಿ ಕಾರ್ಮಿಕರು ತಮ್ಮ ತಮ್ಮ ಗುಂಪುಗಳನ್ನು ಮಾಡಿಕೊಂಡು ನಗರಕ್ಕೆ ಹೇರಳವಾಗಿ ಒಲಸೆ ಹೋದರು. ಅಲ್ಲಿಯೂ ಸಮೂಹ, ಸಹಕಾರವು ಬೆಳೆಯಲು ಸಹಾಯಕವಾಯಿತು. "ಈ ನಗರೀಕರಣದ ಪ್ರಭಾವದಿಂದ ಇತರೆ ಕೆಲಸಗಾರರು ನಗರ ಮತ್ತು ಪಟ್ಟಣಗಳಲ್ಲಿ ವಲಸೆಯಿಂದ ಕೃಷಿಯೇತರ ಕೆಲಸಗಳಿಗೆ ಸೇರಿಕೊಂಡು ಹಾಗೂ ಇತರೆ ಆಧುನಿಕ ಉದ್ಯೋಗ ಮತ್ತು ಉದ್ಯಮಿಗೆ ಸಹಾಯಕವಾಯಿತು. ಇದರ ಫಲವಾಗಿ ಜಮೀನ್ದಾರಿ ಹಾಗೂ ಉಳಿಗಮಾನ್ಯ ಪದ್ಧತಿಯು ಕ್ಷೀಣಿಸುತ್ತಾ "ವೃತ್ತಿ ಸಂಘ ವ್ಯವಸ್ಥೆ" ವೃತ್ತಿಗಳ ಆಧಾರದಲ್ಲಿ ಸಂಘಗಳು ಸ್ಥಾಪನೆಯಾದವು"[redacted]

ನಗರೀಕರಣದ ಪರಿಣಾಮವಾಗಿ ಕೆಲಸಗಾರರೂ ಹೊಸ ಹೊಸ ಉದ್ಯೋಗವನ್ನು ಅವಲಂಭಿಸಿ ಅವುಗಳನ್ನು ಹೆಚ್ಚಿನ ಕಾರ್ಯ ನೈಪುಣ್ಯತೆಯನ್ನು ಗಳಿಸಲಾರಂಭಿಸಿದರು. ಕರಕುಶಲ ಉದ್ಯೋಗಗಳು ಅಂದಿನ ದಿನಗಳಲ್ಲಿ ಮಹತ್ವವನ್ನು ಪಡೆದವು. ನಿರ್ದಿಷ್ಟ ಬಗೆಯ ಕೆಲಸಗಾರರು, ತಮ್ಮ ಕೆಲಸದ ಆಧಾರದಲ್ಲಿ ತಮ್ಮ ಆಶೋತ್ತರಗಳನ್ನು ಇಡೇರಿಸಿಕೊಳ್ಳಲು ವೃತ್ತಿ ಸಂಬಂಧಿ ಸಮೂಹಗಳು ಪ್ರಾರಂಭಗೊಂಡವು. "ಮಧ್ಯಯುಗೀನ ಕಾಲದಲ್ಲಿ ನಗರ ಹಾಗೂ ಪಟ್ಟಣಗಳ ಸಮುದಾಯದಲ್ಲಿ ಬಡಿಗ, ಕಮ್ಮಾರ, ನೇಕಾರ, ಚಿನಿವಾರ, ಅಕ್ಕಸಾಲಿಗ ಇವೇ ಮೊದಲಾದ ವೃತ್ತಿ ಸಂಘಗಳು ಅರ್ಥಾತ್ ಗೀಲ್ಡಗಳು ಅಸ್ತಿತ್ವಕ್ಕೆ ಬಂದವು. ಈ ವ್ಯಾಪಾರ ಸಂಘಟಣೆಗಳು ತಮ್ಮ ತಮ್ಮ ವೃತ್ತಿಗಳನ್ನು ಪ್ರೋತ್ಸಾಹಿಸತೊಡಗಿದವು, ಇನ್ನೂ ಹೆಚ್ಚಿನ ರೀತಿಯಲ್ಲಿ ಅಭಿವೃದ್ಧಿ ಪಡಿಸಿಕೊಳ್ಳಲು ಉಪಕ್ರಮಿಸಿದವು.[೩] ಈ ರೀತಿಯಲ್ಲಿ ಸಹಕಾರದ ನೆಲೆಯು ಈ ಮಧ್ಯಯುಗದಲ್ಲಿ ಸಹಕಾರಿ ಸಂಘಟನೆಯೂ ಚಿಗುರೊಡೆಯಿತು.

ಈ ವೃತ್ತಿ ನಿರತ ಸಮೂಹಗಳು ಪ್ರಮುಖವಾದ ಗುಡಿ ಕೈಗಾರಿಕೆಗಳ ಕೆಲಸಗಳನ್ನು ಮಾಡುತ್ತಿದ್ದವು. ಅವುಗಳೆಂದರೆ, ನಿಗದಿತ ವೃತ್ತಿಯನ್ನು ಎಲ್ಲರೂ ಪ್ರೋತ್ಸಾಹಿಸುವುದು, ವೃತ್ತಿ ಸಂಬಂಧಿ ಜನರನ್ನು ಹಾಗೂ ವೃತ್ತಿ ಸಂಬಂಧಿ ವಸ್ತುಗಳನ್ನು ಅಭಿವೃದ್ಧಿ ಪಡಿಸುವುದು. ಉತ್ಪಾದಿಸುವ ವಸ್ತುಗಳನ್ನು ಹೆಚ್ಚಿಸುವುದು ಹಾಗೂ ಗುಣಮಟ್ಟವನ್ನು ಕಾಪಾಡಿಕೊಂಡು ಹೊಗುವಂತಹ ಕಾರ್ಯವನ್ನು ಮಾಡುವುದು. ಉತ್ಪಾದಿಸುವ ವಸ್ತುಗಳ ಬೆಲೆ

ನಿಗದಿಪಡಿಸುವುದು ಹಾಗೂ ಇತರರಿಗೆ ಮಾರಾಟ ಮಾಡುವುದು, ಕೆಲಸದಲ್ಲಿ ನಿರತರಾದವರಲ್ಲಿ ಉತ್ತಮ ಕೆಲಸಗಾರರಿಗೆ ಪ್ರೋತ್ಸಾಹಕ್ಕೆ ಉಡುಗೊರೆಯನ್ನು ನೀಡುವಂತ ಕೆಲಸಗಳು ಈ ಸಂದರ್ಭದಲ್ಲಿ ನಡೆದವು. ಈ ಸಂದರ್ಭದಲ್ಲಿ ಎರಡು ರೀತಿಯ ಸಂಘಟನೆಯಿಂದ ಸಹಕಾರ ಕ್ಷೇತ್ರವು ಬೆಳವಣಿಗೆಗೆ ಪ್ರಮುಖವಾಗಿ ಕಾರಣವಾದವು ೧. ವರ್ತಕರ ವೃತ್ತಿ ಸಂಘಗಳು ೨. ಕುಶಲಕರ್ಮಿಗಳ ವೃತ್ತಿಸಂಘಗಳು. ಇವು ವೃತ್ತಿಗಳ ಆಧಾರದಲ್ಲಿ ಪ್ರಾರಂಭಿಸಿದ ವೃತ್ತಿಸಂಘಗಳು. "ಒಂದು ದೃಷ್ಟಿಯಲ್ಲಿ ಕೈಗಾರಿಕಾ ಅಭಿವೃದ್ಧಿಯ ಇತಿಹಾಸದಲ್ಲಿ ಈ ಬಗೆಯ ಕುಶಲಕರ್ಮಿಗಳ ವೃತ್ತಿಸಂಘಗಳು ತಮ್ಮದೆ ಆದ ವಿಶಿಷ್ಟ ಸ್ಥಾನವನ್ನು ಅಲಂಕರಿಸಿವೆ. ಗೌರಾನ್ವಿತ ಸ್ಥಾನಗಳಿಸಿ ಕೊಂಡಿವೆ. ಸಾಮಾಜಿಕ ಏಕತೆ ಮತ್ತು ಸಹಬಾಳ್ವೆಯನ್ನು ಉಳಿಸಿ, ಬೆಳಸಿಕೊಂಡು ಬರಲು ವಿಶೇಷವಾಗಿ ನೆರವಾದವು."[redacted] ಇದೇ ಸಂದರ್ಭದಲ್ಲಿ ವಿಶ್ವದಾದ್ಯಂತ ಬೃಹತ್ತ ಕೈಗಾರಿಕೆಗಳು ಪ್ರಾರಂಭಗೊಂಡವು. ಎರಡನೆಯ ಮಾಹಾಯುದ್ದದ ನಂತರದ ಈ ಸಂಘಗಳು, ವೃತ್ತಿ ನಿರತ ಸಂಘಟನೆಗಳು ನಾಶವಾಗ ತೊಡಗಿದವು. ಮಧ್ಯಕಾಲೀನ ಯುಗದಲ್ಲಿನ ವೃತ್ತಿ ಸಂಘಗಳು ಆಧುನಿಕ ಯುಗ ಪ್ರಾರಂಭದ ಕಾಲಘಟ್ಟಗಳಲ್ಲಿ ಹಲವಾರು ಆಂತರಿಕ ಹಾಗೂ ಬಾಹ್ಯ ಕಾರಣಗಳ ಫಲವಾಗಿ ವೃತ್ತಿಸಂಘಗಳು ತನ್ನ ಅಸ್ತಿತ್ವವನ್ನು ಕಳೆದುಕೊಂಡವು. ಆಧುನಿಕ ಜಗತ್ತಿನಲ್ಲಿ ಇನ್ನೊಂದು ಬಗೆಯ ಸಹಕಾರಿ ಸಂಘಟಣೆಗಳು ಬೆಳೆಯಲು ಪ್ರಾರಂಭಿಸಿದವು.



**ಭಾರತದಲ್ಲಿ ಸಹಕಾರದ ಉಗಮ**

ಪಾಶ್ಚಿಮಾತ್ಯ ದೇಶಗಳಲ್ಲಿ ವೃತ್ತಿಗಳು ಬೆಳೆದು ನಿಂತಾಗ. ಅವು ಆರ್ಥಿಕತೆಯಲ್ಲಿ ಸುಧಾರಣೆಯನ್ನು ಪಡೆಯುತ್ತಿರುವ ಪೂರ್ವದಲ್ಲಿಯೇ, ಭಾರತದಲ್ಲಿ ತನ್ನದೇ ಆದ ವಿಶಿಷ್ಟ ರೀತಿಯ ಅಭಿವೃದ್ಧಿಯನ್ನು ಹೊಂದಿರುವುದು ಕಂಡುಬರುತ್ತದೆ. ಭಾರತೀಯ ಕರಕುಶಲ ಕೆಲಸಗಾರರು, ಶೃಜನಾತ್ಮಕ ಕೆಲಸಗಾರರು, ಕಲೆಗಾರರು, ಶಿಲ್ಪ ಕೆತ್ತನೆಕಾರರು, ನೇಯ್ಗೆ ನೇಕಾರರು ಶತ ಶತಮಾನಗಳಿಂದ ತಮ್ಮ ವೃತ್ತಿಯ ಹಾಗೂ ಉದ್ಯಮದಲ್ಲಿ ವೃತ್ತಿ ಸಂಘಗಳನ್ನು ಕಟ್ಟಿಕೊಂಡು ಬೆಳಕಿಗೆ ಬಂದಿದ್ದವು. ವೇದಗಳ ಕಾಲದಲ್ಲಿ ಪರಂಪರಾಗತವಾಗಿ ಬಂದ ವ್ಯಾಪಾರಿ ವೃತ್ತಿ ಸಂಘಗಳು, ಇತರೇ ಕುಲ ಕಸುಬುಗಳನ್ನೇ ಪ್ರಮುಖ ಲಕ್ಷಣಗಳನ್ನು ಇಟ್ಟುಕೊಂಡ ಜಾತಿ ಪದ್ದತಿಯ ರಚನೆಯು ಹಾಗೂ ಈ ಜಾತಿಯ ಮೂಲಕ ಆ ಜನರು ಒಂದು ಗೂಡಿ ಜೀವನ ಮಾಡುವ ಮನೋಭಾವವು ಸಹಕಾರವನ್ನು ತಿಳಿಸುತ್ತದೆ. "ವೇದಗಳ ಕಾಲದಿಂದ ವಿವಿಧ ವೃತ್ತಿಗಳನ್ನು ತಮ್ಮ ಕುಲ ಕಸುಬುಗಳೋಪಾದಿಯಲ್ಲಿ ಗುರುತಿಸಿಕೊಂಡು ಶ್ರಮ ವಿಭಜನೆಯ ತತ್ವವನ್ನಾಧರಿಸಿ ಅಸ್ತಿತ್ವಕ್ಕೆ ಬಂದ ಜಾತಿ ವ್ಯವಸ್ಥೆಯು ಕಾಲಗತಿಯಲ್ಲಿ ಇನ್ನೂ ಕಠಿಣ ಸ್ವರೂಪ ಪಡೆಯುತ್ತಾ ಸಾಗಿರುವುದು. ವರ್ತಕರು ತಮ್ಮ ತಮ್ಮ ವೃತ್ತಿಸಂಘಗಳ ಸದಸ್ಯರ ಸಂಬಳ ಮೊದಲಾದವುಗಳನ್ನು ವ್ಯವಸ್ಥೆಗೊಳಿಸಲು, ಕೆಲಸದ ವೇಳೆ ನಿಗದಿಗೊಳಿಸಲು, ತಪ್ಪಿ ನಡೆದರೆ ದಂಡವನ್ನು ವಿಧಿಸಿ ತಿದ್ದಲು ತನ್ನ ಮೂಲಕ ಒಂದು ಬಗೆಯ ಕಟ್ಟು ನಿಟ್ಟಾದ ವ್ಯವಸ್ಥೆ ಅಸ್ತಿತ್ವದಲ್ಲಿರುವಂತೆ ಮಾಡಲು ಶ್ರಮಿಸುತ್ತಿದ್ದರು."[redacted] ಈ ವೃತ್ತಿ ಸಂಘಗಳು ಸ್ವಯಂ ಪೂರ್ಣವಾದ ಆಡಳಿತದಲ್ಲಿ

ಸರಾಗವಾಗಿ ಸ್ವಯಂ–ಕಾರ್ಯ ನಿರ್ವಹಿಸುತ್ತಿದ್ದವು. ಇವು ತಮ್ಮ ಸದಸ್ಯರ ಹಿತಾಸಕ್ತಿಗಳನ್ನು ಕಾಪಾಡಿಕೊಂಡು ಬರುವುದೇ ಅಲ್ಲದೇ ಅವರು ತಮ್ಮ ತಮ್ಮ ಸಾಮಾಜಿಕ ಭದ್ರತೆ ಹಾಗೂ ಕಲ್ಯಾಣವನ್ನು ಸಾಧಿಸಿಕೊಂಡು ಬರುತ್ತಿದ್ದರು ಹಾಗೂ ಜನರು ಹಸಿವೆಯಿಂದ ನರಳದಂತೆ ನೊಡಿಕೊಳ್ಳುತ್ತಿದ್ದರು.

ಭಾರತದ ಮೊಗಲರ ಆಳ್ವಿಕೆಯ ಅವಧಿಯಲ್ಲಿ ಅದರಲ್ಲಿಯೂ ಮುಖ್ಯವಾಗಿ ಅಕ್ಬರ್, ಜಹಂಗೀರ್ ಮತ್ತು ಷಹಜಾನ್ ಚಕ್ರವರ್ತಿಗಳ ಕಾಲದಲ್ಲಿ ಸಣ್ಣ ಗೃಹ ಉದ್ಯಮಿಗಳು ಉಚ್ಛ್ರಾಯ ಸ್ಥಿತಿಯಲ್ಲಿದ್ದವು. "ಭಾರತವು ಈ ಕಾಲದಲ್ಲಿ ವಿಶ್ವದ ಕಾರ್ಯಗಾರವಾಗಿತ್ತು" ಎಂಬುವುದಾಗಿ ಬರಹಗಾರರು ಉಲ್ಲೇಖಿಸಿದ್ದಾರೆ. ಆಕಾಲದಲ್ಲಿ ಭಾರತದ ಹತ್ತಿ, ರೇಷ್ಮೆ, ಮಸಲೀನ್ ಸೇರಿದಂತೆ ಯೂರೋಪ ಮತ್ತು ಇತರ ಹಲವಾರು ದೇಶಗಳಿಗೆ ರಫ್ತುಮಾಡುತ್ತಿದ್ದರು.[redacted] ಈ ಲೆಕ್ಕಾಚಾರದಲ್ಲಿ ಹದಿನೇಳನೆಯ ಶತಮಾನದಲ್ಲಿ ಭಾರತದಿಂದ ಯೂರೋಪಿಗೆ ಇತರೆ ನಮೂನೆಯ ಬಟ್ಟೆಗಳು ಇನ್ನೂರು ಗಜಕ್ಕೂ ಮೀರಿ ರಫ್ತು ಮಾಡುತ್ತಿದ್ದರು. ಈ ಬಟ್ಟೆಯ ತಯಾರಿಕೆಯಲ್ಲಿರುವ ತಯಾರಕರು ತಮ್ಮ ಸಂಘಟನೆಯಿಂದ ಇಷ್ಟೊಂದು ಬಟ್ಟೆಗಳನ್ನು ತಯಾರಿಸುತ್ತಿದ್ದರು. ನೇಯುವ ವ್ಯವಸ್ಥೆಯು ರಾಜರುಗಳ ಆಸ್ಥಾನಗಳಲ್ಲಿ ಸಿದ್ಧಪಡಿಸಿಕೊಡುತ್ತಿದ್ದರು. ರಾಜರ ಆಸ್ಥಾನದಲ್ಲಿ ದುಡಿಯುವ ನೇಕಾರರಿಗೆ ಹಾಗೂ ಅವರ ಕುಟುಂಬದ ಸದಸ್ಯರಿಗೆ ಒಳ್ಳೆಯ ಗೌರವ ನೀಡುತ್ತಿದ್ದರು. ಬಟ್ಟೆ ನೇಯುವ ಕಲೆಗಾರರನ್ನು ಹಾಗೂ ಇತರೆ ಕರಕುಶಲ ತಯಾರಕರನ್ನು ತಮ್ಮ ಆಸ್ಥಾನದಲ್ಲಿ ಆಶ್ರಯ ನೀಡುತ್ತಿದ್ದರು. ಈ ಉದ್ಯಮಿಗಳು ವೃತ್ತಿ ಸಂಘಗಳಾಗಿಯೂ ಸಂಘಟನೆಗೊಂಡಿದ್ದವು. ಕಾಲಾನಂತರದ ದಿನಗಳಲ್ಲಿ ಭಾರತದ ಪ್ರಾಚೀನ ಗುಡಿ ಕೈಗಾರಿಕೆಗಳು, ಗೃಹ ಕೈಗಾರಿಕೆಗಳು ಕ್ರಮೇಣ ಕಡಿಮೆಯಾಗುತ್ತಾ ಸಾಗಿದವು. ಅದಕ್ಕೆ ಪ್ರಮುಖವಾದ ಕಾರಣಗಳನ್ನು ನೋಡಿದಾಗ "೧೭೦೭ರಲ್ಲಿ ಮೊಗಲ್ ಚಕ್ರವರ್ತಿ ಔರಂಗ ಜೇಬನ ಮರಣದ ನಂತರ, ದೇಶವು ಗೊಂದಲದಲ್ಲಿ ಸಿಲುಕಿದ್ದಲ್ಲದೆ, ವ್ಯಾಪಾರ ಮತ್ತು ಕೈಗಾರಿಕೆಗಳು ತೀವ್ರ ಅಸ್ಥಿರತೆಯನ್ನು ಅನುಭವಿಸಿದವು. ಇಂಗ್ಲೆಂಡಿನಲ್ಲಿ ಸಂಭವಿಸಿದ ಕೈಗಾರಿಕಾ ಕ್ರಾಂತಿ ಪ್ರಭಾವದಿಂದ ಭಾರತದ ಆರ್ಥಿಕ ಕ್ಷೇತ್ರದ ಮೇಲೆ ಬಹಳ ಪ್ರಭಾವ ಮೂಡಿತು."[redacted] ಇದರ ಪರಿಣಾಮವಾಗಿ ಮಾರುಕಟ್ಟೆಯಲ್ಲಿ ಸಂಭವಿಸಿದ ಸಂಚಲನದಿಂದ ಮಾರುಕಟ್ಟೆಯಲ್ಲಿ ಸ್ಪರ್ಧಿಸಲು ಬಯಸಿದ ನಮ್ಮ ದೇಶದ ಗುಡಿ ಕೈಗಾರಿಕೆಗಳ ಸಮೂಹಗಳಿಗೆ, ಸಂಘಟನೆಗಳಿಗೆ, ಕುಶಲಕರ್ಮಿಗಳಿಗೆ ಹಾಗು ವ್ಯಾಪಾರಿಗಳಿಗೆ ಭಾರತದಲ್ಲಿಯ ಭಾರತೀಯರಿಗೆ ಹೆಚ್ಚು ಸುಂಕವನ್ನು ಹಾಕಿದರು. ೧೮೮೦ರ ವೇಳೆಗೆ ಭಾರತದ ಕರಕುಶಲ ಗುಡಿ ಕೈಗಾರಿಕೆಗಳು ಅಧಪತನದತ್ತ ಸಾಗಿದವು. ಬ್ರಿಟಿಷರ ವಸಾಹತುಶಾಹಿಗೂ ಮಣಿಯದ ಭಾರತೀಯರು ಪ್ರಮುಖ ಪ್ರದೇಶಗಳಲ್ಲಿ, ವಿಶೇಷವಾಗಿ ಗ್ರಾಮೀಣ ಹಾಗೂ ಸಣ್ಣ ಪಟ್ಟಣಗಳ ಮಟ್ಟದಲ್ಲಿ ತಮ್ಮ ವೃತ್ತಿ ಸಂಘಟನೆಯ ಮೂಲಕ ಕುಲ ಕಸುಬುಗಳನ್ನು ಅಥವಾ ವೃತ್ತಿಯನ್ನು ಮುಂದುವರಿಸಿಕೊಂಡು ಬಂದರು. ಇಲ್ಲಿ ವೃತ್ತಿ ಆಧಾರಿತ ಸಮೂಹ ಸಹಕಾರವು ಬೆಳೆಯಲು ಕಾರಣವಾಯಿತು.

**ಆಧುನಿಕ ಭಾರತದಲ್ಲಿ ಸಹಕಾರದ ಬೆಳವಣಿಗೆ ಹಂತ**

ಭಾರತದಲ್ಲಿ ಸುಮಾರು ೧೮೫೦-೬೦ರಲ್ಲಿ ಆಧುನಿಕತೆಯು ಪ್ರಾರಂಭವಾಯಿತು. ಮೊದ ಮೊದಲು ಹತ್ತಿ, ಸೆಣುಬುಗಳ ಗಿರಣಿಗಳು ಪ್ರಾರಂಭಗೊಂಡವು. ಆಧುನಿಕ ಉಪಕರಣಗಳು ನಮ್ಮ ದೇಶದಲ್ಲಿ ಬರುವುದಕ್ಕೆ ಪ್ರಾರಂಭವಾದವು. ದೇಶದ ಆಳ್ವಿಕೆ ಮಾಡುತ್ತಿದ್ದ ಬ್ರಿಟಿಷರು, ತಮ್ಮ ಇಂಗ್ಲೆಂಡ್ ದೇಶದಲ್ಲಿ ತಯಾರಾಗುತ್ತಿದ್ದ ಹೊಸ ಹೊಸ ಉಪಕರಣಗಳನ್ನು ಇಲ್ಲಿ ತಂದು ಮಾರಾಟ ಮಾಡುತ್ತಿದ್ದರು. ಭಾರತ ತಮ್ಮ ವ್ಯಾಪಾರಕ್ಕೆ ಸೂಕ್ತ ದೇಶವಾಗಿತ್ತು ಹಾಗೂ ಇಲ್ಲಿ ಕಡಿಮೆ ಕೂಲಿಯ ಕಾರ್ಮಿಕರನ್ನು ಬಳಸಿಕೊಳ್ಳಲು ಆಧುನಿಕ ಉಪಕರಣಗಳು ಭಾರತಕ್ಕೆ ಬರುತ್ತಿದ್ದವು ಎಂಬುವುದನ್ನು ತಾರ್ಕಿಕವಾಗಿ ಊಹಿಸಬಹುದು. ಅಂದಿನಿಂದ ಹೊಸ ಹೊಸ ತಾಂತ್ರೀಕರಣ, ಕೈಗಾರೀಕರಣಗಳು ಬೆಳೆದುಬಂದವು. ಆದರೆ ನಮ್ಮ ಗ್ರಾಮೀಣ ಹಾಗೂ ಸಣ್ಣ ಪಟ್ಟಣಗಳ ಮಟ್ಟದಲ್ಲಿಯ ಜನರು ತಮ್ಮ ಸಾಂಪ್ರದಾಯಿಕ ಕುಲ ಕಸುಬುಗಳಿಂದ ಜೀವನ ನಡೆಸುತ್ತಿದ್ದರು.

ಸ್ವಾತಂತ್ರ್ಯ ಸಂಗ್ರಾಮದ ಕಾಲಘಟ್ಟಗಳಲ್ಲಿ ಪ್ರಮುಖವಾಗಿ ಸಹಕಾರಿ ತತ್ವಗಳ ಆಧಾರದಲ್ಲಿ ಸ್ವಾತಂತ್ರ್ಯ ಹೋರಾಟಗಳು ಪ್ರಾರಂಭವಾದವು. ಈ ಹೋರಾಟಗಳೆ ಮುಂದೆ ದೇಶದ ಒಗ್ಗಟ್ಟನ್ನು ಬಿಂಭಿಸಿ ಸ್ವಾತಂತ್ರ್ಯ ತಂದು ಕೊಡುವಲ್ಲಿ ಸಹಕಾರಿಯಾಗಿವೆ. "ಮಹಾತ್ಮಾ ಗಾಂಧೀಜಿಯವರ ಅಭಿಪ್ರಾಯದಲ್ಲಿ ಸಹಕಾರಿ ಆಂದೋಲನ ಹಾಗೂ ಸಹಕಾರಿ ಚಳುವಳಿಯು ಸತ್ಯ, ಅಹಿಂಸೆ ಮತ್ತು ಸ್ವ ಸಹಾಯದ ವರ್ಗಾತೀತ ಸಮಾಜ ಸ್ಥಾಪನೆಗೆ ದಾರಿ." ಈ ವಾಕ್ಯದಲ್ಲಿ ಜನಗಳ ಸಮೂಹದಿಂದ ಮಾತ್ರ ಒಗ್ಗಟ್ಟು ಬೆಳೆಯುತ್ತದೆ, ಒಗ್ಗಟ್ಟಿನಿಂದ ನಮ್ಮ ಸಮಸ್ಯೆಗಳಿಗೆ ಸಹಾಯವನ್ನು ಪಡೆದುಕೊಳ್ಳಬಹುದು. ಇದರಿಂದ ನಮಗೆ ಬೇಕಾದ ಅವಶ್ಯಕ ಸೌಕರ್ಯಗಳನ್ನು ಸಮಬಲದ ಹೋರಾಟದಿಂದ ಪಡೆಯಲು ಸಾಧ್ಯ ಎಂಬ ಅರಿವು ಈ ತತ್ವವು ತಿಳಿಸುತ್ತದೆ.

ಭಾರತದಲ್ಲಿ ಸಹಕಾರಿ ಆಂದೋಲನವು ಇಪ್ಪತ್ತನೇ ಶತಮಾನದ ಪೂರ್ವದಲ್ಲಿ ಬೆಳೆದು ಬಂದಿವೆ. ಅಧಿಕೃತವಾಗಿ ೧೯೦೪ರಲ್ಲಿಯೇ ಗುರುತಿಸಲಾಗಿದೆ. ಈ ಕಾಲಘಟ್ಟಗಳಲ್ಲಿ ಭಾರತೀಯರ ಮೇಲೆ ಹಲವಾರು ರೀತಿಯ ಕಾನೂನುಗಳನ್ನು ಹೇರಿ ಅವರನ್ನು ಬಾಹ್ಯ ಬಂಧನದಲ್ಲಿರಿಸಿದ್ದರು. ಈ ಬಂಧನದಿಂದ ತಪ್ಪಿಸಿಕೊಳ್ಳಲು ಹಲವಾರು ಹೋರಾಟಗಳು ಈ ಸಹಕಾರಿ ತತ್ವಗಳ ಆಧಾರದಲ್ಲಿ ನಡೆದುಬಂದವು ಎಂದು ತಿಳಿಯುತ್ತದೆ. ಈ ಸಂದರ್ಭದಲ್ಲಿ ಗ್ರಾಮೀಣ ಜನರು, ಪಟ್ಟಣ ಪ್ರದೇಶದ ಜನರು ಮಳೆ ಬೆಳೆ ಇಲ್ಲದೆ ಅನಾವೃಷ್ಟಿಯಲ್ಲಿ ಸಿಲುಕಿ ಹಾಗೂ ಇಲ್ಲಿ ಯಾವುದೇ ಕುಲ ಕಸುಬುಗಳಿಗೆ ಹಾಗೂ ಉದ್ಯೋಗಗಳಿಗೆ ಬೆಲೆ ಇಲ್ಲದಂತೆ ಮತ್ತು ತೀವ್ರ ಬರಗಾಲದಿಂದ ಜನರು ಸಾಲ ವೃಣಭಾರದಿಂದ ತತ್ತರಿಸಿಹೊದ ಸಂದರ್ಭಗಳು ಬಂದವು. ಇದರ ಪ್ರಭಾವದಿಂದ ಜನರು ಸ್ವತಂತ್ರ್ಯಕ್ಕಾಗಿ ಹಾಗೂ ತಮ್ಮ ಅಸ್ತಿತ್ವವನ್ನು ಕಾಪಾಡಿಕೊಳ್ಳಲು ಸಹಕಾರಿ ಆಂದೋಲನಗಳು-ಚಳುವಳಿಗಳು ಭಾರತದಲ್ಲಿ ನಡೆದವು.

ಭಾರತದಲ್ಲಿ ಈ ಹೊರಾಟಗಳ ಹಾಗೂ ಪ್ರಕೃತೀಯ ಏರಿ ಪೇರುಗಳ ಪರಿಣಾಮವಾಗಿ ಮಾನವೀಯತೆಯ ನೆಲೆಯಲ್ಲಿ ಬ್ರಿಟಿಷ ಸರಕಾರವು ರೈತರಿಗೆ ಹಾಗೂ ಇತರೆ ಕಸುಬುಗಳನ್ನು ಮಾಡುವ ಜನ

ಸಮುದಾಯಗಳಿಗೆ ನೆರವನ್ನು ೧೮೮೨ರ ನಂತರ ಪ್ರಾರಂಭಿಸಿದರು. ೧೮೮೨ರಲ್ಲಿ ವಿಲಿಯಂ ಸಿಡ್ಡರ್ ಬರ್ನ್ ಮತ್ತು ನ್ಯಾಯಾಧೀಶ ಮಹಾದೇವ ಗೋವಿಂದ ರಾನಡೆ ಇವರು ರೈತರಿಗೆ ಸಾಲ ಪೂರೈಸುವ ಸದುದ್ದೇಶದಿಂದ ಕೃಷಿ ಬ್ಯಾಂಕುಗಳನ್ನು ಸ್ಥಾಪಿಸಲು ಒಂದು ವಿಶೇಷ ಯೋಜನೆಯನ್ನು ರೂಪಿಸಿದರು. ಈ ಯೋಜನೆಯ ಕೆಲವು ಅಂಶಗಳನ್ನು ಭೂಸುಧಾರಣೆ ಮತ್ತು ಕೃಷಿ ಸಾಲ ಕಾಯಿದೆಗಳಲ್ಲಿ ಬಳಸಿಕೊಳ್ಳಲಾಯಿತು. ಅವರ ಪ್ರಕಾರ ರೈತರು ಸರ್ಕಾದಿಂದ ಉತ್ಪಾದನಾ ಉದ್ದೇಶಗಳಿಗೆ ವರ್ಷಕ್ಕೆ ಶೇ ೬ ರಷ್ಟು ಬಡ್ಡಿ ದರದಲ್ಲಿ ಸಾಲ ಪಡೆಯಲು ಅವಕಾಶ ಕಲ್ಪಿಸಿಕೊಡಲಾಯಿತು. ಅಂದಿನ ಸರ್ಕಾರವು ೧೮೮೩ರಲ್ಲಿ ಭೂ ಸುಧಾರಣೆ ಕಾನೂನು ಮತ್ತು ೧೮೮೪ರಲ್ಲಿ ರೈತರಿಗಾಗಿ ಸಾಲದ ಕಾನೂನುಗಳನ್ನು ಜಾರಿಗೆ ತಂದರು. ಆ ಮೂಲಕ ಅವರಿಗೆ ಅಲ್ಪಾವಧಿ ಹಾಗೂ ದೀರ್ಘಾವಧಿ ಸಾಲಗಳ ಸೌಲಭ್ಯಗಳನ್ನು ಕಲ್ಪಿಸಿಕೊಟ್ಟರು. ಅದನ್ನು 'ತಕ್ಕಾವಿ ಸಾಲ' ಎಂದು ಕರೆದರು. ಭೂ ಸುಧಾರಣ ಕಾನೂನಿನ ಪ್ರಕಾರ, ಬಾವಿ ಮತ್ತು ಕೆರೆಗಳ ನಿರ್ಮಾಣ, ಭೂಮಿಯನ್ನು ಕೃಷಿ ಕಾರ್ಯಕ್ಕೆ ಸಿದ್ಧಗೊಳಿಸುವುದು, ಪ್ರವಾಹ, ಭೂ ಸವೆತ ಮೊದಲಾದವುಗಳಿಂದ ಭೂಮಿಯ ರಕ್ಷಣೆ ಹಾಗೂ ಭೂಮಿಯ ಖಾಯಂ ಸುಧಾರಣೆಯನ್ನು ಒಳಗೊಂಡಿತ್ತು. ರೈತರ ಸಾಲ ಕಾನೂನಿನ ಪ್ರಕಾರ ರೈತರಿಗೆ ದನಕರುಗಳನ್ನು, ಕೃಷಿ ಉಪಕರಣಗಳನ್ನು ಹಾಗೂ ಬೀಜಗಳನ್ನು ಕೊಳ್ಳಲು ಅಲ್ಪಾವಧಿಯ ಸಾಲ ಸೌಲಭ್ಯವನ್ನು ಒದಗಿಲಾಗಿದೆ."[೮]

**ಭಾರತದಲ್ಲಿ ಸಹಕಾರಿ ಚಳುವಳಿಗಳು**

"ಭಾರತದಲ್ಲಿ ಸಹಕಾರ ಸೊಸೈಟಿ ಕಾಯಿದೆಯನ್ನು ೧೯೦೪ರಲ್ಲಿ ಜಾರಿಗೆ ತಂದರು. ಈ ಚಳುವಳಿಯ ಹಾಗೂ ಹೋರಾಟದ ಸಂಘಟನೆಗಳ ಪ್ರತಿಫಲವಾಗಿ ಈ ಕಾಯಿದೆಯು ಜಾರಿಗೆ ಬಂದಿತು. ಇದನ್ನು ಹೆನ್ರಿ ಡಬ್ಲು ವೊಲ್ಫ್ರವರು ಆರ್ಥಿಕ ಹಾಗೂ ಸಾಮಾಜಿಕ ಇತಿಹಾಸದಲ್ಲಿ ಒಂದು ತಿರುವು ಎಂದು ಹಾಗೂ ಸರ್.ಡೇನಿಯಲ್ ಹ್ಯಾಮಿಲ್ಟನ್‌ರವರು 'ದಾರಿದ್ರ್ಯದಿಂದ ಸಮೃದ್ಧಿಯ ಕಡೆಗಿನ ಮಾರ್ಗೋಪಾಯದಲ್ಲಿ' ಎಂಬುದಾಗಿ ಅಭಿಪ್ರಾಯ ಪಟ್ಟಿದ್ದಾರೆ."[೯] ಈ ಹೇಳಿಕೆಯನ್ನು ಗಮನಿಸಿದಾಗ ಇವರು ತಮ್ಮದೆಯಾದ ನೆಲೆಯಲ್ಲಿ ಮಾತನಾಡಿದ್ದಾರೆ. ಗ್ರಾಮೀಣ ಗೃಹ ಕಸುಬುಗಳಿಗೆ, ಕೃಷಿಗೆ ಹಾಗೂ ಇನ್ನಿತರ ಕೆಲಸ ಕಾರ್ಯಗಳಿಗೆ ಕಂಪನಿ ಸರ್ಕಾರವು ಹೇರಿರುವ ನಿಬಂಧನೆಗಳು, ಕಟ್ಟುಪಾಡುಗಳು, ಹೆಚ್ಚಿನ ಸುಂಕ ವಿಧಿಸುವುದು ಹಾಗೂ ಬ್ರಿಟಿಷ್ ಅಧೀನದಲ್ಲಿಯ ಉಪಕರಣಗಳನ್ನು ಬಳಸಬೇಕೆಂಬುವುದು ನಮ್ಮ ಜನರನ್ನು ಕಟ್ಟಿಹಾಕಿರುವಂತೆ ಮಾಡಿದೆ. ಮುಕ್ತ ಅವಕಾಶವನ್ನು ನಮ್ಮ ದೇಶದ ಜನರಿಗೆ ನೀಡಿದ್ದರೆ ನಮ್ಮ ದೇಶವು ವಿಶ್ವದ ಮಾರುಕಟ್ಟೆಯಲ್ಲಿ ಒಂದು ಗುಣಾತ್ಮಕ ವಸ್ತುಗಳು ಹಾಗೂ ವಿವಿಧ ರೀತಿಯ ಕರಕುಶಲ ಉದ್ಯೋಗಗಳು ಹೆಸರಿಸಲ್ಪಡುತ್ತಿದ್ದವು.

೧೯೦೪ ಸಹಕಾರಿ ಸೊಸೈಟಿಯ ಕಾಯಿದೆಯ ಗುರಿಯು ಕೃಷಿಕರು, ಕಲಾಕಾರರು, ಕುಶಲಕರ್ಮಿಗಳು ಹಾಗೂ ಸೀಮಿತ ಆದಾಯವುಳ್ಳವರಲ್ಲಿ ಪ್ರವರ್ಧಮಾನ, ಸ್ವ ಸಹಾಯ ಹಾಗೂ ಸಹಕಾರವನ್ನು ತರುವುದೇ ಆಗಿದೆ. "ಭಾರತದಲ್ಲಿ ಸಹಕಾರಿ ಚಳುವಳಿಗೆ ಅಡಿಪಾಯ ಹಾಕಿದ್ದು ಕರ್ನಾಟಕ ರಾಜ್ಯ. ನಮ್ಮ ರಾಜ್ಯದ ಅಪ್ಪಟ

ಕನ್ನಡಿಗ ರಾಷ್ಟ್ರದ ಪ್ರಥಮ ಸಹಕಾರಿ ಸಂಘದ ಸಂಸ್ಥಾಪಕ ದಿವಂಗತ ಸಿದ್ದನಗೌಡ ಸಂಗಣ್ಣಗೌಡ ಪಾಟೀಲ್"[೧೦] ಸರ್ ಎಡ್ವರ್ಲ್ ಲಾ ಕಮಿಟಿಯ ಪ್ರಕಾರ ಪ್ರಪ್ರಥಮವಾಗಿ ವಿವಿಧ ರೀತಿಯ ಸಹಕಾರಿ ಸಂಘಗಳು ಪ್ರಾರಂಭವಾದದ್ದು ಕರ್ನಾಟಕದಲ್ಲಿ. ಪ್ರಥಮವಾಗಿ ಪ್ರಾರಂಭವಾದ ಪ್ರಾಥಮಿಕ ವ್ಯವಸಾಯ ಸಹಕಾರ ಸಂಘವು 'ಕಣಗಿನಾಳ' ಗ್ರಾಮದಲ್ಲಿ ಪ್ರಾರಂಭಿಸಲಾಯಿತು. ಇದು ಪ್ರಸ್ತುತ ಗದಗ ಜಿಲ್ಲೆಯಲ್ಲಿದೆ. ಇದು ದಿನಾಂಕ ೮ ಮೇ ೧೯೦೫ರಲ್ಲಿ ಪ್ರಾರಂಭಿಸಲಾಯಿತು. ಪ್ರಥಮ ಪಟ್ಟಣ ಸಹಕಾರಿ ಪತ್ತಿನ ಸಹಕಾರಿ ಸಂಘ ಬೆಟಗೇರಿ ನಗರದಲ್ಲಿ ೧೮ ಅಕ್ಟೋಬರ್ ೧೯೦೫ರಲ್ಲಿ ಸ್ಥಾಪಿಸಿದರು. ಇದು ಸಹ ಗದಗ ಜಿಲ್ಲೆಯಲ್ಲಿಯೇ ಪ್ರಾರಂಭವಾಯಿತು.

"ಮೈಸೂರು ಸಂಸ್ಥಾನದ ಪ್ರಥಮ ಸಹಕಾರ ಸಂಘವು ೧೯೦೫ರಲ್ಲಿ ದಿ ಬೆಂಗಳೂರ ಸಿಟಿ ಕನ್ಸೂಮರ್-ಕೋ ಆಫ್‌ಏಟಿವ್ಹ್ ಸೊಸೈಟಿ ಆರಂಭವಾಯಿತು. ಇದು ೬ ಏಪ್ರೀಲ್.೧೯೦೭ರಲ್ಲಿ ದಿ ಬೆಂಗಳೂರ ಕೋಆಫ್‌ರೇಟವ್ ಬ್ಯಾಂಕ ಆಯಿತು. ಇದು ಸಹಕಾರಿ ಕ್ಷೇತ್ರದ ಪ್ರಥಮ ಬ್ಯಾಂಕ."[೧೧]

"ದಿ ಹುಬ್ಬಳ್ಳಿ ಕಾಟನ್ ಸೇಲ್ಸ್ ಸೊಸೈಟಿ ಲಿಮಿಟೆಡ್ ೧೯೧೫ರಲ್ಲಿ ಪ್ರಾರಂಭವಾಯಿತು. ಇದು ಪ್ರಪ್ರಥಮ ಸಹಕಾರಿ ಮಾರ್ಕೇಟಿಂಗ್ ಸೊಸೈಟಿಗಳಲ್ಲಿ ಪ್ರಥಮವಾಗಿದೆ."[೧೨] "೧೯೨೧ರಲ್ಲಿ ಹುಲಕೋಟಿ ಕೋಆಪರೇಟಿವ್ ಸೊಸೈಟಿ. ೧೯೩೬ರಲ್ಲಿ 'ದಿ ಬಿಜಾಪೂರ ಡಿಸ್ಟ್ರಿಕ್ಟ್ ಇಂಡಸ್ಟ್ರೀಯಲ್ ಕೋ-ಆಫ್ ಅಸೋಶಿಯೇಷನ್ ಲಿ. ಕಮತಗಿ."[೧೩] ಇದು ಕೂಡಾ ನೇಕಾರಿಕಾ ಕ್ಷೇತ್ರದಲ್ಲಿಯ ನೂಲು, ರೇಷ್ಮೆ, ಬಣ್ಣ ಇತ್ಯಾದಿ ಕೈಮಗ್ಗಕ್ಕೆ ಬೇಕಾಗುವ ಕಚ್ಚಾ ವಸ್ತುಗಳನ್ನು ರೀಯಾತಿದರದಲ್ಲಿ ನೀಡುವ ಕಾರ್ಯಮಾಡುತ್ತಿತ್ತು. ಇದು ಮುಂಬೈ ಪ್ರಾಂತದಲ್ಲಿ ಬರುತ್ತಿತ್ತು.

"೧೯೪೪ ರಲ್ಲಿ ದಿ ಒನ್ ನಂಬರ್ ಅಮೀನಗಡ ಕೈಮಗ್ಗ ನೇಕಾರರ ಸಹಕಾರಿ ಸಂಘ, ಅಮೀನಗಡದಲ್ಲಿ ಪ್ರಾರಂಭವಾಯಿತು.

೧೯೪೫ರಲ್ಲಿ ದಿ ಎರಡನೇ ನಂಬರ್ ಅಮೀನಗಡ ಕೈಮಗ್ಗ ನೇಕಾರ ಸಂಘ, ಅಮೀನಗಡದಲ್ಲಿ ಪ್ರಾರಂಭಿಸಲಾಗಿದೆ. ಈ ಸಂಘದ ಹೆಸರನ್ನು ಶ್ರೀ ಜಯಶ್ರೀ ನೇಕಾರರ ಸಹಕಾರಿ ಸಂಘ ಎಂದು ಬದಲಾಯಿಸಲಾಗಿದೆ.

೧೯೪೬ರಲ್ಲಿ ಶ್ರೀ ಶಾಖಾಂಬರಿ ನೇಕಾರ ಸಹಕಾರಿ ಸಂಘ ನೀ, ಸೂಳಿಭಾವಿ, ನೇಕಾರ ಅಭಿವೃದ್ಧಿಗೆ ಸಹಕಾರಿ ಸಂಘಗಳು ಭಾಗಿಯಾಗಿವೆ. ಈ ನೇಕಾರ ಸಹಕಾರಿ ಸಂಘಗಳು ಕರ್ನಾಟಕದ ಪ್ರಮುಖವಾಗಿವೆ.

೧೯೫೬ರಲ್ಲಿ ಹಿರಣ್ಯಕೇಶಿ ಸಕ್ಕರೆ ಸಹಕಾರಿ ಸಂಘ, ಸಂಕೇಶ್ವರ, ೧೯೬೫ರಲ್ಲಿ ಫೆಡರೇಶನ್ ಆಫ್ ಅರ್ಬನ್ ಬ್ಯಾಂಕ್ಸ್. ಪ್ರಾರಂಭವಾಗಿವೆ.

೧೯೬೯ರಲ್ಲಿ ರೂರಲ್ ಎಲೆಕ್ಟ್ರಿಕಲ್ ಸೊಸೈಟಿ, ಹುಕ್ಕೇರಿಯಲ್ಲಿ ಪ್ರಾರಂಭವಾದವು."[೧೪]

ಕರ್ನಾಟಕದಲ್ಲಿ ಅತಿ ಹೆಚ್ಚು ಹಾಗೂ ವಿವಿಧ ಕ್ಷೇತ್ರಗಳಲ್ಲಿ ತಮ್ಮ ತಮ್ಮ ಅಭಿವೃದ್ಧಿಗೆ ವೃತ್ತಿಯ ಆಧಾರದಲ್ಲಿ ಸಂಘಟನೆಯನ್ನು ಕಟ್ಟಿಕೊಂಡವು. ತಮ್ಮ ಕ್ಷೇತ್ರದಲ್ಲಿ ಜನರ, ಜನರ ಸಮುದಾಯಗಳ ಅಭಿವೃದ್ಧಿ ಕಾರ್ಯವನ್ನು ಮಾಡುತ್ತಿರುವುದು ಕಂಡುಬರುತ್ತಿವೆ. ಈ ಎಲ್ಲಾ ಸಹಕಾರಿ ಕ್ಷೇತ್ರಗಳು ವಿವಿಧ ಉದ್ದೇಶಗಳಿಂದ ಕೂಡಿದ್ದು ಹೊಸ ಹೊಸ ಕ್ಷೇತ್ರಗಳನ್ನು, ತಮ್ಮ ಸಮೂಹದ ಆಸಕ್ತಿಗಳಿಗೆ ಅನುಸಾರ ಆದಾಯದ ಕ್ಷೇತ್ರವನ್ನು ರಕ್ಷಣೆಯೊಂದಿಗೆ, ಆಸಕ್ತಿದಾಯಕ ಕೆಲಸದಿಂದ ಉತ್ತಮ ಸೇವೆ ಸಲ್ಲಿಸುತ್ತಿವೆ. ಪ್ರತಿಯೊಂದು ಕ್ಷೇತ್ರದಲ್ಲಿಯೂ ಸಹಕಾರದ ತತ್ವಗಳನ್ನು ಅಳವಡಿಸಿಕೊಳ್ಳಲಾಯಿತು. ಇಂದು ಎಲ್ಲ ರಂಗಗಳಲ್ಲಿ ಸಹಕಾರಿ ಸಂಘಗಳು ಬೆಳೆಯುತ್ತಿವೆ. ಹತ್ತಿಗಿರಣಿ, ಬಟ್ಟೆ ತಯಾರಿಕೆ ಘಟಕಗಳು, ಎಣ್ಣೆ ತಯಾರಿಕಾ ಘಟಕಗಳು, ಹಾಲು ಉತ್ಪಾದಕರ ಸಂಘಗಳು, ಕೃಷಿ ಕ್ಷೇತ್ರದ ಸಹಕಾರಿ ಸಂಘಗಳು, ಆಹಾರ ಸಂಸ್ಕರಣೆ ಘಟಕಗಳು, ಸರಕಾರಿ ನೌಕರರ ಸಹಕಾರಿ ಸಂಘಗಳು ಹಾಗೂ ಮಹಿಳಾ ಸಹಕಾರಿ ಸಂಘಗಳು ಮುಂತಾದ ಕ್ಷೇತ್ರದಲ್ಲಿ ಸಹಕಾರಿ ಸಂಘಗಳು ಭಾರತ ಇತರೆ ರಾಜ್ಯಗಳಲ್ಲಿ ಹಾಗೂ ಕರ್ನಾಟಕ ರಾಜ್ಯದಲ್ಲಿ ಸಹಕಾರಿ ಸಂಘಗಳು ಬೆಳೆದವು.

**ಸಹಕಾರಿ ಕ್ಷೇತ್ರದಲ್ಲಿ ಬೆಳವಣಿಗೆಯ ಪಕ್ಷಿನೋಟ**

೧೯೦೬-೧೯೦೭ ರಿಂದ ೧೯೧೦-೧೯೧೧ರವರೆಗೆ

| ವರ್ಷ | ಸಹಕಾರಿ ಸಂಘಗಳ ಸಂಖ್ಯೆಗಳು | ಸದಸ್ಯರ ಸಂಖ್ಯೆ (ಸಾವಿರಗಳಲ್ಲಿ) | ಹೂಡಿದ ಬಂಡವಳ |
|---|---|---|---|
| ೧೯೦೬-೦೭ | ೮೪೩ | ೯೦.೮೪ | ೨೩.೭೨. |
| ೧೯೦೭-೦೮ | ೧.೯೬೭ | ೧೪೯.೧೬ | ೪೪.೧೪ |
| ೧೯೦೮-೧೦ | ೧.೯೬೩ | ೧೮೦.೩೪ | ೮೨.೩೨ |
| ೧೯೦೯-೧೦ | ೩.೪೨೮ | ೨೨೪.೪೦ | ೧೨೪.೬೮ |
| ೧೯೧೦-೧೧ | ೫.೩೨೧ | ೩೦೫.೦೬ | ೨೦೩.೦೫ |
| | ಎರಡನೆ ಹಂತದ ಬೆಳವಣಿಗೆ (೧೯೧೨-೧೯೧೮) | | |
| ೧೯೧೧-೧೨ | ೮.೧೭೭ | ೪.೭ | ೩೩೫.೭ |
| ೧೯೦೯-೧೦ | ೩.೩೨೧ | ೩೦೫.೦೬ | ೨೦೩.೦೫ |
| | ಐದನೆ ಹಂತದ ಬೆಳವಣಿಗೆ (೧೯೩೯-೧೯೪೨) | | |
| ೧೯೩೮-೩೯ | ೧೨೨ | ೫೩.೭ | ೧೦೬.೪೭ |
| ೧೯೩೯-೪೦ | ೧೭೭ | ೬೦.೮ | ೧೦೯.೩೨ |
| ೧೯೪೦-೪೨ | ೧೪೩ | ೬೪.೦ | ೧೦೯.೩೨ |
| ೧೯೪೧-೪೩ | ೧೪೬ | ೬೯.೧ | ೧೨೩.೧೪ |
| ೧೯೪೩-೪೪ | ೧೫೬ | ೭೬.೯ | ೧೩೨ |
| ೧೯೪೪-೪೫ | ೧೬೦ | ೮೩.೬ | ೧೪೬.೬೩ |
| ೧೯೪೫-೪೬ | ೧೭೨ | ೯೧.೬ | ೧೬೪.೦೦° |

(ಮೂಲ-ರಿವ್ಯೂ ಆಫ್ ದಿ ಕೋ ಆಪರೇಟಿವ್ಹ್ ಮೂಮೆಂಟ್ ಇಂಡಿಯಾ-೧೯೨೯-೪೬)

**ನೇಕಾರ ಸಹಕಾರಿ ಸಂಘಗಳ ಗುರಿ ಮತ್ತು ಉದ್ದೇಶಗಳು**

ಸಹಕಾರವು ಸಾರ್ವತ್ರಿಕವಾದದ್ದು ಮತ್ತು ನಿರಂತರ ಬದಲಾವಣೆಯನ್ನು ಹೊಂದುತ್ತಿರುವುದು. ಮನುಷ್ಯ ಮನುಷ್ಯನ ಒಂದು ಅವಿನಾಭಾವ ಸಂಬಂಧ ಹೊಂದಿರುತ್ತದೆ. ನೇಕಾರ ಸಹಕಾರಿ ಸಂಘಗಳು ನೇಕಾರರ ವೃತ್ತಿ

ಆಧಾರಿತ ಬದುಕನ್ನು ಕಟ್ಟಿಕೊಡಲು ನಿರಂತರ ಶ್ರಮಿಸುತ್ತಿವೆ. ಆಧುನಿಕ ಬಟ್ಟೆಗಳ ಭರಾಟೆಯಲ್ಲಿ ಸಾಂಪ್ರದಾಯಿಕ ಉತ್ಪನ್ನಗಳನ್ನು ತಯಾರಿಸುವುದರ ಜೊತೆಯಲ್ಲಿ, ಆಧುನಿಕ ಬಟ್ಟೆಗಳನ್ನು ತಯಾರಿಸುವತ್ತ ನೇಕಾರರನ್ನು ಸಿದ್ದ ಪಡಿಸುವಂತ ಕಾರ್ಯವನ್ನು ಸಂಘಗಳು ಮಾಡುತ್ತಿವೆ. ಇಂದಿನ ವಾಸ್ತವ ಸನ್ನಿವೇಶದಲ್ಲಿ ಹಲವಾರು ಸಮಸ್ಯೆಗಳನ್ನು ಎದುರಿಸಿಕೊಂಡು. ನೇಕಾರರ ಅಭಿವೃದ್ಧಿಯನ್ನು ಹೆಚ್ಚಿಸಲು ಸತತ ಶ್ರಮವನ್ನು ಪಡುತ್ತಿರುವುದು ಕಂಡುಬರುತ್ತವೆ. 'ಜನರಿಂದ ಜನರಿಗಾಗಿ ಜನರಿಗೋಸ್ಕರ ಇರುವ ಸರ್ಕಾರ ಪ್ರಜಾಪ್ರಭುತ್ವ'ದ ನೆಲೆಯಲ್ಲಿ, ಈ ನೇಕಾರ ಸಹಕಾರಿ ಸಂಘಗಳು 'ನೇಕಾರರಿಂದ ನೇಕಾರರಿಗಾಗಿ ನೇಕಾರರಿಗೋಸ್ಕರವಾಗಿ ಇರುವಂತ ಸಹಕಾರ ಕ್ಷೇತ್ರ ನೇಕಾರ ಸಹಕಾರಿ ಸಂಘಗಳು'. ನೇಕಾರರೂ ಕೂಡಿಕೊಂಡಿರುವ ಸಮೂಹದಲ್ಲಿ ತಾವು ಕಾನೂನಿನಾತ್ಮಕ ಸಹಕಾರಿ ಸದಸ್ಯತ್ವದಿಂದ ಕೂಡಿರುತ್ತವೆ. ಸಂಘಗಳು ನೇಕಾರರ ಷೇರು ಬಂಡವಾಳ, ದೇಣಿಗೆ ಬಂಡವಾಳದಿಂದ ಮತ್ತು ಸರಕಾರಿ ಸಹಾಯದಿಂದ ಅಸ್ಥಿತ್ವದಲ್ಲಿ ಸಾಗುತ್ತಿವೆ. ಕಚ್ಚಾ ಸಾಮಗ್ರಿಗಳು, ಉತ್ಪಾದನಾ ಉತ್ಪನ್ನಗಳು, ಸಿದ್ದ ಉಡುಪುಗಳು, ಮಾರಾಟ, ಲಾಭ, ಸರಕಾರಿ ಯೋಜನೆಗಳ ಸದುಪಯೋಗ, ನಿರಂತರ ನೇಕಾರ ಉತ್ಪನ್ನಗಳು ತಯಾರಿಸುವ ಚಟುಚಟಿಕೆಗಳಿಂದ ಪ್ರವೃತ್ತವಾಗಿರುವ ಸಂಘವು ಒಂದು ಉತ್ತಮ ಮಾದರಿಯ ಸಂಘ ಎನಿಸಿಕೊಳ್ಳುತ್ತದೆ. ಈ ನೇಕಾರರ ಸಹಕಾರಿ ಸಂಘಗಳು ನಿರಂತರವಾಗಿ ಸಾಗುವಂತ ಸಂಘಗಳು. ನೇಕಾರರ ಅಭಿವೃದ್ಧಿಗೆ ಪೂರಕವಾಗಿ ಕೆಲಸವನ್ನು ನಿರ್ವಹಿಸುತ್ತಿವೆ. ಒಂದು ಸಣ್ಣ ಉತ್ಪಾದನಾ ಕೈಗಾರಿಕೆಯಂತೆ ಕಾರ್ಯ ಮಾಡುತ್ತಿವೆ. ಪ್ರಜಾಪ್ರಭುತ್ವದ ಆಧಾರದಲ್ಲಿ ಸಂಘದ ಸಾಮಾನ್ಯ ಸದಸ್ಯರಿಗೂ ಮಂಡಳಿ ಸದಸ್ಯರಿಗೂ 'ಒಂದೆ ಮತ ಒಂದೆ ವ್ಯಕ್ತಿ' ಎನ್ನುವಂತೆ ಸಂಘಟನೆ ಸರಕಾರದ ಅಧಿನಯಮದ ಅನುಸಾರ ಉತ್ಪನ್ನಗಳ ಹೆಚ್ಚಳ, ನೇಕಾರರ ವೇತನ ಪರಿಸ್ಕರಣೆ ನಡೆಯುತ್ತಿರುತ್ತದೆ.

**ನೇಕಾರರ ಸಹಕಾರಿ ಸಂಘಗಳ ಸಾಮಾನ್ಯ ಗುರಿಗಳು**

೧. ನೇಕಾರರಿಗೆ ನಿರಂತರ ಉದ್ಯೋಗವನ್ನು ಕೊಡುವುದು ಹಾಗೂ ನೇಕಾರನ್ನು ಆರ್ಥಿಕವಾಗಿ ಸಬಲರನ್ನಾಗಿ ಮಾಡುವುದು.

೨. ನೇಕಾರರ ಸಾಮಾಜಿಕ ಸ್ಥಾನಮಾನ ಹೆಚ್ಚಿಸುವುದು.

೩. ಮಿತವ್ಯಯ ಮತ್ತು ಸ್ವ ಸಹಾಯವನ್ನು ಪ್ರೋತ್ಸಾಹಿಸುವುದು

೪. ನೇಕಾರರ ಅಭಿವೃದ್ಧಿಯಲ್ಲಿ ಆರ್ಥಿಕ, ಸಾಮಾಜಿಕ ಹಾಗೂ ಶೈಕ್ಷಣಿಕ ದೃಷ್ಟಿಕೋನವನ್ನು ಬದಲಾಯಿಸುವುದು.

೫. ಬಡ ನೇಕಾರರನ್ನು ಮುಖ್ಯವಾಹಿನಿಗೆ ಕರೆದುಕೊಂಡು ಬರುವುದು.

೬. ಒಬ್ಬನು ಎಲ್ಲರಿಗಾಗಿ ಮತ್ತು ಎಲ್ಲರು ಒಬ್ಬನಿಗಾಗಿ ಎಂಬ ತತ್ವದ ನಂಬಿಯಿಟ್ಟು ದುಡಿಯುವಂತೆ ಜನರಲ್ಲಿ ಜಾಗೃತಿ ಮೂಡಿಸುವುದು.

೭. ಸಹಕಾರಿ ಸಂಘಗಳಲ್ಲಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡ ಮತ್ತು ಮಹಿಳಾ ಸದಸ್ಯರುಗಳನ್ನು ನೋಂದಾಯಿಸುವುದು. ಎಂದು ಶ್ರೀ ಪಾಂಡುರಂಗ ಹೊಟಿ ಸಂಘದ ಮುಖ್ಯಕಾರ್ಯ ನಿರ್ವಾಹಕರು ಗುರಿಗಳ ಕುರಿತು ಹೇಳಿದರು.

**ನೇಕಾರರ ಉದ್ದೇಶಗಳು ಹಾಗೂ ಕಾರ್ಯಗಳು.**

೧. ಪ್ರಜಾಪ್ರಭುತ್ವದ ನೆಲೆಯಲ್ಲಿ ಎಲ್ಲ ನೇಕಾರರಿಗೂ ಸಮಾನವಾದ ಸ್ಥಾನಮಾನ ನೀಡುವುದು.

೨. ನೇಕಾರರಲ್ಲಿ ಸಂಘಟನೆಯನ್ನು ಮೂಡಿಸುವುದು.

೩. ನೇಕಾರರ ಮೂಲಭೂತ ಸೌಕರ್ಯಗಳನ್ನು ಒದಗಿಸುವುದು.

೪. ನೇಕಾರರಿಂದ ಶೇರು ಹಾಗೂ ದೇಣಿಗೆ ಸಂಗ್ರಹ ಮತ್ತು ನಿರ್ವಹಣೆ.

೫. ಪರಸ್ಪರ ಸಹಾಯ, ಸಹಕಾರ ಹಾಗೂ ಉದ್ಯೋಗವನ್ನು ನೀಡುವುದು.

೬. ಸಹಕಾರಿ ಸಂಘವು ವ್ಯಕ್ತಿಗಳಿಂದ ಸಮೂಹ ರಚಿಸಿ ಆ ಸಮೂಹದ ಬೇಕು ಬೇಡಿಕೆಗಳನ್ನು ಇಡೇರಿಸಿಕೊಳ್ಳುತ್ತಿವೆ.

೭. ನೇಕಾರರ ಆಂತರಿಕ ಹಾಗೂ ಬಾಹ್ಯ ಅಭಿವೃದ್ಧಿ ಪಡೆಯುವಂತೆ ಪ್ರೋತ್ಸಾಹ.

೮. ಒಂದೆ ವೃತ್ತಿಯಲ್ಲಿರುವವರನ್ನು ಸಂಘಟಿಸುತ್ತದೆ.

೯. ಉತ್ಪಾದನಾ ಕಾರ್ಯಕ್ರಮಗಳಲ್ಲಿ ಸಹಕರಿಸುತ್ತವೆ.

೧೦. ಉಳಿತಾದ ಮನೋಭಾವನವನು ಬೆಳಸುವುದು. ಎಂದು ಬಿ.ಎನ್. ರಾಮದುರ್ಗ ನೇಕಾರ ಸಹಕಾರಿ ಸಂಘದ ಮುಖ್ಯಕಾರ್ಯ ನಿರ್ವಾಹಕರು ತಿಳಿಸಿದರು.

ಈ ಎಲ್ಲ ಗುರಿ ಮತ್ತು ಉದ್ದೇಶಗಳನ್ನು ಹಾಗೂ ವೀಕ್ಷಣೆಯ ಪ್ರತಿಫಲವಾಗಿ ನೇಕಾರ ಸಹಕಾರಿ ಸಂಘಗಳಲ್ಲಿ ಕಾರ್ಯಗಳನ್ನು ಗಮನಿಸಿದಾಗ ಮೂಲಸೌಕರ್ಯಗಳಲ್ಲಿ ಆಹಾರ ಪದಾರ್ಥಗಳನ್ನು ಸರಕಾರದ ಸಹಯೋಗದಲ್ಲಿ ಶೇರುದಾರರಿಗೆ ಆಹಾರ ಪದಾರ್ಥಗಳನ್ನು ಹಂಚಿಕೆ ಮಾಡುವುದು. ನೇಕಾರರಿಗೆ ಸರಕಾರಿ ಯೋಜನೇಗಳ ತಿಳುವಳಿಕೆ ಹಾಗೂ ಯೋಜನೆಗಳನ್ನು ನೇಕಾರರ ಬಾಗಿಲಿಗೆ ಕೊಂಡೊಯ್ಯುವುದು. ಸಹಕಾರಿ ಸಂಘಗಳು ನೇಕಾರರ ಉತ್ಪಾದನೆಯಲ್ಲಿ ಬೆಳವಣಿಗೆಯು ಕಂಡುಬಂದಲ್ಲಿ ಸಂಘದ ಸದಸ್ಯರಿಗೆ ಪ್ರೋತ್ಸಾಹ ಒದಗಿಸಿ ಕೊಡುವುದು. ಬಡ ನೇಕಾರರಿಗೆ ಮೂಲ ಸೌಕರ್ಯಗಳನ್ನು ಒದಗಿಸಿಕೊಡವುದು. ಸಹಕಾರಿ ಸಂಘವು ನೇಕಾರರ ಉತ್ಪನ್ನಗಳಿಗೆ ಮಾರಾಟ ಹಾಗೂ ಕಚ್ಚಾ ಮಾಲನ್ನು ಒದಗಿಸಿಕೊಡುತ್ತಿದೆ. ನೇಕಾರರ ಕುಟುಂಬಗಳಿಗೆ ಸರಕಾರದ ಯೋಜನೆಗಳನ್ನು ಸುಲಭವಾಗಿ ತಲುಪಿಸುವತೆ ಮಾಡುವುದು. ನೇಕಾರರಿಗೆ ಹೊಸ ಉತ್ಪಾದನೆಗಳನ್ನು ತಯಾರಿಸಲು ತರಬೇತಿಗಳನ್ನು ಕೈಗೊಳ್ಳುವುದು ಹಾಗೂ ತರಬೇತಿಗೆ ನಿಯೋಗಿಸುವುದು. ನೇಕಾರರಿಗೆ ಆರೋಗ್ಯ ಸಂಬಂಧಿ ಚಿಕಿತ್ಸೆಗಳನ್ನು ನೀಡಲು ಶಿಬಿರಗಳನ್ನು ಹಮ್ಮಿಕೊಳ್ಳುವುದು. ನೇಕಾರರಿಗೆ ಪ್ರವಾಸ ಹಮ್ಮಿಕೊಳ್ಳುವುದು. ನಿರುದ್ಯೋಗ ಸಮಸ್ಯೆ ನಿವಾರಣೆಯಲ್ಲಿ ಸಂಘಗಳು. ಸರಿಯಾದ ತೂಕ ಮತ್ತು ನಿಗದಿತ ಬೆಲೆ.ವ್ಯಾಪಾರದಲ್ಲಿ

ಮಧ್ಯವರ್ತಿಗಳ ಹಾವಳಿಯನ್ನು ತಪ್ಪಿಸಿ ತಮ್ಮ ಸದಸ್ಯರಿಗೆ ಯೋಗ್ಯ ಉತ್ತಮ ಬೆಲೆಯಲ್ಲಿ ಪದಾರ್ಥವನ್ನು ಪೂರೈಕೆ ಹಾಗೂ ಶುದ್ಧ ಬಟ್ಟೆ ಪಡೆದುಕೊಳ್ಳುವುದು. ಕೆಲಸಗಳನ್ನು ನೋಡಲಾಗಿದೆ.

ಈ ಮೇಲ್ಕಾಣಿಸಿದ ಪ್ರಮುಖ ಉದ್ದೇಶಗಳನ್ನು ಇಟ್ಟುಕೊಂಡು ನೇಕಾರರನ್ನು ಅಭಿವೃದ್ಧಿಯ ಪತದತ್ತ ಕೊಂಡೊಯುವಲ್ಲಿ ಶ್ರಮಿಸುತ್ತಿವೆ. ಸಂಘಗಳು ನೇಕಾರರಿಗೆ ಸಹಾಯ, ಸಹಕಾರ, ಸಮೂಹಕಾರ್ಯ ಮಾಡಲು ಉತ್ತಮ ಕಾರ್ಯಕಾರಿಣಿ ಮಂಡಳಿ ರಚಿಸಿಕೊಂಡಿವೆ. ಉದ್ದೇಶಗಳನ್ನು ಇಡೇರಿಸುವಂತ ಕಾರ್ಯ ಮಾಡುವುದರ ಜೊತೆಯಲ್ಲಿ ಉತ್ಪಾದನೆ ಹೆಚ್ಚಿಸುವುದು ಹಾಗೂ ವೇತನವನ್ನು ಕಾಲಕ್ಕೆ ತಕ್ಕಂತೆ ಪರಿಷ್ಕರಿಸುವುದು ಮುಖ್ಯವಾಗಿದೆ. "ಉತ್ಪನ್ನವು ಉತ್ಪಾದನಾಭಿವೃದ್ಧಿಯು ಸಹಕಾರದ ಒಂದು ಕಣ್ಣಾದರೆ ಸಹಕಾರ ಮಾರಾಟ ವ್ಯವಸ್ಥೆ ಅದರ ಮತ್ತೊಂದು ಕಣ್ಣು, ಈ ಎರಡರ ಜೊಡಿಯಿಂದಲೇ ನೇರ ದೃಷ್ಠಿಗೆ, ಅದರ ಪ್ರಗತಿಗೆ ಆರೋಗ್ಯಕ್ಕೆ ನಾಂದಿಯಾಗುವುದಲ್ಲದೆ ಎಷ್ಟೋ ಸಮಸ್ಯೆಗಳಿಗೆ ಸುಲಲಿತ ನಿವಾರಣೆಯಾಗುವುದರಲ್ಲಿ ಸಂಶಯವಿಲ್ಲ."[೧೫] ಕಾರ್ಯನಿರತ ಸಹಕಾರಿ ಸಂಘಗಳು ನಿರಂತರ ಉತ್ಪಾದನೆಯಲ್ಲಿವೆ. ಕೆಲಸದಲ್ಲಿರುವ ನೇಕಾರರಿಗೆ ಸದಾ ಬೆನ್ನೆಲುಬಾಗಿ ನಿಲ್ಲುತ್ತಿವೆ. ಈ ಕ್ಷೇತ್ರದಲ್ಲಿ ಉತ್ಪಾದಕ ಹಾಗೂ ವ್ಯಾಪಾರವು ಎರಡು ಕಣ್ಣುಗಳಿದ್ದಂತೆ. ಇಲ್ಲಿ ಇವು ತೂಗುವ ಮಾಪನದ ತಟ್ಟೆಯಲ್ಲಿ ತೂಗಿದರೆ ಒಂದೇ ಸಮಾನಾಂತರದಲ್ಲಿ ತೂಗಿದರೆ ಮಾತ್ರ ಉತ್ತಮವಾದ ಸಹಕಾರಿ ಸಂಘವನ್ನು ರಚಿಸಲು ಸಾಧ್ಯವಾಗುವುದು. ಇಲ್ಲದಿದ್ದರೆ ನೇಕಾರರು ಹಾಗೂ ಸಹಕಾರಿ ಸಂಘದ ಎಲ್ಲ ಸದಸ್ಯರಿಗೆ ಅಸಮಾದಾನ ಉಂಟಾಗಿ ಸಂಘವು ವಿನಾಶವಾಗುವುದರಲ್ಲಿ ಸಂದೇಹವೆ ಇಲ್ಲ. ಆದ್ದರಿಂದ ನೇಕಾರರ ಸಹಕಾರಿ ಸಂಘಗಳು ಇದನ್ನು ಗಮನದಲ್ಲಿ ಇಟ್ಟುಕೊಂಡು ಕಾರ್ಯ ಪ್ರವೃತರಾಗಬೇಕಾಗಿದೆ. ಉತ್ಪಾದನದಲ್ಲಿರುವ ನೇಕಾರರು ಮಾರಾಟದಲ್ಲಿರುವ ವಸ್ತುಗಳನ್ನು ಹೆಚ್ಚು ಹೆಚ್ಚು ತಯಾರಿಸುವಂತೆ ಮಾಡಬೇಕು ಹಾಗೂ ಆಧುನಿಕ ಹಿತಾಸಕ್ತಿಯ ಬಟ್ಟೆ ತಯಾರಿಕೆಯಲ್ಲಿ ಮುಂದೆ ಸಾಗಬೇಕಾಗಿದೆ. ಮಾರಾಟದ ಆಸಕ್ತಿಗಳಿಗೆ ಅನುಗುಣವಾಗಿ, ನೇಕಾರಕೆಯಲ್ಲಿ ಬದಲಾವಣೆಯನ್ನು ನಿರಂತರ ಕಂಡಾಗ ಮಾತ್ರ ಸಹಕಾರಿ ಸಂಘಗಳು ನೇಕಾರಿಕೆ ಉಳಿಯಲು ಸಾಧ್ಯವಾಗುತ್ತದೆ. ಆದ್ದರಿಂದ ಈ ಸಂಘಗಳಲ್ಲಿ ಪ್ರಮುಖವಾದ ಉದ್ದೇಶಗಳ ಸಫಲತೆಯು ಮುಖ್ಯವಾಗಿರುತ್ತದೆ. ಇದರಲ್ಲಿ ಸಂಘದ ನಿರ್ವಹಣೆಯು ಪ್ರಮುಖ ಪಾತ್ರವಹಿಸುತ್ತದೆ. ನೇಕಾರಿಕೆ ಹಾಗೂ ವ್ಯಾಪಾರಿಗಳ ಸಮನಾರ್ಥಕ ಹೊಂದಾಣಿಕೆ ನಿರ್ವಹಣೆಯ ಹೊಣೆ ಸಹಕಾರಿ ಸಂಘದ ಕಾರ್ಯನಿರ್ವಾಹಕರ ಮೇಲೆ ನಿಂತಿರುತ್ತದೆ.

**ಸಹಕಾರಿ ತತ್ವಗಳು**

ಸಹಕಾರಿ ತತ್ವಗಳು ಸಹಕಾರಿ ಸಂಘಗಳ ಮಾರ್ಗದರ್ಶಕಗಳು ಇದ್ದ ಹಾಗೆ. ಈ ತತ್ವಗಳಿಗನುಸಾರವಾಗಿ ಕಾರ್ಯಗಳನ್ನು ನಿರ್ವಹಿಸಿಕೊಂಡು ಸಾಗಿದಾಗ ಮಾತ್ರ ಸಹಕಾರಿ ಸಂಘಗಳು ಯಶಸ್ವಿಯಾಗಿ ಕಾರ್ಯನಿರ್ವಹಿಸಲು ಸಾಧ್ಯವಾಗುತ್ತವೆ. ಅಂತಹ ಯಶಸ್ಸಿನ ಹಾದಿಯಲ್ಲಿ ನಡೆಯುವುದಕ್ಕೆ ಈ ಕೆಳಗಿನ ಸೂತ್ರಗಳನ್ನು ಸಹಕಾರಿ ಸಂಘಗಳು ಪಾಲಿಸಬೇಕಾಗುವುದು.

" ಈಕೆಳಗಿನ ಸಹಕಾರಿ ತತ್ವಗಳನ್ನು ನೊಡಬಹುದಾಗಿದೆ.

೧. ಸ್ವಯಂ ಪ್ರೇರಿತ ಹಾಗೂ ಮುಕ್ತ ಸದಸ್ಯತ್ವವನ್ನು ಹೊಂದುವುದು.

೨. ಪ್ರಜಾಸತಾತ್ಮಕ ನಿಯಂತ್ರಣ

೩. ಆರ್ಥಿಕ ಚಟುವಟಿಕೆಗಳಲ್ಲಿ ಎಲ್ಲ ಸದಸ್ಯರ ಪಾಲು ಅವಸ್ಯಕ

೪. ಶೇರು ಬಂಡವಾಳದಿಂದ ಬಂದಂತಹ ಲಾಭವನ್ನು ಸಮನಾಗಿ ಹಂಚುವುದು.

೫. ಸಹಕಾರಿ ಸಂಘಗಳ ನಡುವಿನ ಸಹಕಾರ

೬. ಪರಸ್ಪರ ಸಹಾಯ ಹಾಗೂ ಸ್ವ-ಸಹಾಯ ಪದ್ಧತಿಯ ಅಳವಡಿಕೆ

೭. ಹಣಕಾಸು ನಿರ್ವಹಿಸುವಿಕೆ

೮. ರಾಜಕೀಯ ಮತ್ತು ಧಾರ್ಮಿಕ ಅಲಿಪ್ತತೆ"[೧೬]

ಸಹಕಾರಿ ಸಂಘಗಳು ಯಾವುದೇ ವೃತ್ತಿ ಆಧಾರಿತ ಹಾಗೂ ಇತರೆ ವಾಣಿಜ್ಯ ಸಹಕಾರಿ ಸಂಘಗಳಿದ್ದರೂ ಈ ಸಹಕಾರಿ ತತ್ವಗಳನ್ನು ಅನುಕರಿಸಿಕೊಂಡು ಹೊದಾಗ ಮಾತ್ರ ಯಶಸ್ವಿ ಸಹಕಾರಿ ಸಂಘವಾಗುತ್ತದೆ. ಇಲ್ಲಿ ಎಲ್ಲ ಶೇರುದಾರರ ಗಮನವನ್ನು ಇರಿಸಿಕೊಂಡು ಕಾರ್ಯವನ್ನು ಸುಲಲಿತವಾಗಿ ಮಾಡಬೇಕು. ಹಾಗೆ ಆಧುನಿಕ ಬದಲಾವಣೆಗೆ ಒಗ್ಗೂಡಬೇಕಾಗುವುದು. ಇದರಿಂದ ಆಧುನಿಕ ಬೇಕು ಬೇಡಿಕೆಗಳನ್ನು ಸಂಘವು ಪರಿಗಣಿಸಿ ಹೊಸ ಉತ್ಪಾದನಾ ವಸ್ತುಗಳನ್ನು ತಯಾರಿಸಲು ಅನೂಕೂಲವಾಗುವುದು ಹಾಗೂ ಯುವಕರಿಗೆ ಹೊಸ ಉತ್ಪಾದನಾ ವಸ್ತುಗಳ ತರಬೇತಿ ಸಹಾಯವಾಗುತ್ತದೆ.

**೩.೨ ಸರಕಾರದ ಜವಳಿ ನೀತಿ**

'ನೇಕಾರಿಕೆಯು ಗ್ರಾಮೀಣ, ಸಣ್ಣ ಪಟ್ಟಣಗಳ ಹಾಗೂ ಮಧ್ಯಮ ನಗರಗಳ ಜನರ ಗೃಹ ಕೈಗಾರಿಕೆ ಆಗಿದ್ದರೂ, ದೇಶದ ಲಕ್ಷಾಂತರ ಜನರ ಜೀವನಾಡಿಯಾಗಿ ಜೀವನಾಧಾರಕ್ಕೆ ಕೈಮಗ್ಗಗಳು ಕಿರು ಉದ್ಯಮವಾಗಿದೆ. ನಮ್ಮ ದೇಶದಲ್ಲಿ ೧೯೬೧ರ ಜನಣತಿಯ ಪ್ರಕಾರವಾಗಿ ೨೧ಲಕ್ಷ ಜನ ಕೈಮಗ್ಗದ ನೇಕಾರರಾಗಿದ್ದು, ಅದರಲ್ಲಿ ೧೫ಲಕ್ಷ ಗ್ರಾಮೀಣ ಪ್ರದೇಶದಲ್ಲೇ ಇರುವರು. ಅವರಲ್ಲಿ ಬಂಡವಾಳದ ಕೊರತೆಯು ಹೆಚ್ಚು ಕಂಡುಬರುತ್ತಿತ್ತು ಎಂಬುವುದು ತಿಳಿದು ಬರುತ್ತದೆ. ಅದಲ್ಲದೆ ಮಾರಾಟ ವ್ಯವಸ್ಥೆ ಸ್ಥಳೀಯವಾಗಿ ಕಂಡುಬರುತ್ತಿತ್ತು ಹಾಗೂ ಬೃಹತ್ ಕೈಗಾರಿಕೆಗಳು ಗುಡಿ ಕೈಗಾರಿಕೆಯನ್ನು ನಾಶಮಾಡುತ್ತಾ ಸಾಗಿವೆ. ಕೈಮಗ್ಗ ಉತ್ಪನ್ನಗಳನ್ನು ಉಳಿಸಲು ಹಾಗೂ ನೇಕಾರರಿಗೆ ಉತ್ತಮ ಬೆಂಬಲ ಬೆಲೆ ನೀಡಲು ಸಹಾಯವಾಗಿದೆ. ಇದರ ಸುಧಾರಣೆಗಾಗಿ ನೀತಿ ಜಾರಿಗೊಂಡವು ಎನ್ನುತ್ತಾರೆ.

೧೯೩೪ರಲ್ಲಿ ಮೊದಲಬಾರಿಗೆ ಸರಕಾರವು ನೇಕಾರರಿಗೆ ಹಾಗೂ ನೇಕಾರ ಉದ್ಯಮಕ್ಕೆ ಕಾಯಕಲ್ಪ ನೀಡಲು ಮುಂದೆ ಬಂದಿತು. ಹೊಸದಾಯಿ ಎಂಬುವಂತೆ ಸರ್ಕಾರ ೧೯೪೯ರಲ್ಲಿ ನೇಕಾರರ ಅನುಕೂಲಕ್ಕಾಗಿ ಆಜ್ಞೆಯನ್ನು ಹೊರಡಿಸಿತು. ದೊಡ್ಡ ಗಿರಣಿಗಳ ಪೈಪೋಟಿ ತಪ್ಪಿಸಲು ಹಾಗೂ ದೊಡ್ಡ ಗಿರಿಣಿಗಳ ಅನಗತ್ಯ

ಪೈಪೋಟಿ ಬೆಳೆಸದಂತೆ ಮಾಡಲು ಸರ್ಕಾರ ದೊಡ್ಡ ಗಿರಿಣಿಗಳು ಪಂಚೆ ಹಾಗೂ ಸೀರೆ ಉತ್ಪಾದಿಸಲು ನಿರ್ದಿಷ್ಟ ಸಂಖ್ಯೆಯನ್ನು ನಿಗಧಿ ಮಾಡಿತು. ಇದು ಕೈಮಗ್ಗ ನೇಕಾರರ ಉದ್ಯಮಕ್ಕೆ ಸಹಾಯವಾಯಿತು.

“ಭಾರತ ಸರಕಾರ ೧೯೬೬ರಲ್ಲಿ ಆದೇಶ ಹೊರಡಿಸಿ, ವಿದ್ಯುತ್ ಮಗ್ಗಗಳು ಮೂರು ವರ್ಷದ ಅವಧಿಯವರೆಗೂ ಬಣ್ಣದ ಸೀರೆ ಉತ್ಪಾದನೆ ಮಾಡುವಂತಿರಲಿಲ್ಲ. ಭಾರತ ಸರ್ಕಾರ ೧೯೭೩ರಲ್ಲಿ ಯೋಜನಾ ಆಯೋಗದ ಸದಸ್ಯರಾದ ಬಿ. ಶಿವರಾಮನ್ ಅಧ್ಯಕ್ಷತೆಯಲ್ಲಿ ಕೈಮಗ್ಗದ ಉದ್ಯೋಗದ ಸಮಸ್ಯೆಯ ಅಧ್ಯಯನ ಮಾಡಿ ವರದಿ ಕೊಡುವಂತೆ ಕೋರಲಾಗಿತ್ತು. ಶಿವರಾಮ್ ಸಮೀತಿಯ ಶಿಪಾರಸ್ಸು ಜಾರಿಗೆಗೆ, ಪ್ರಧಾನ ಮಂತ್ರಿಯವರು ಆರ್ಥಿಕ ನೀತಿಯ ಕಾರ್ಯಕ್ರಮದಲ್ಲಿ ಆದ್ಯತೆ ನೀಡಲಾಗಿತ್ತು. ಶಿವರಾಮನ್ ಸಮೀತಿಯ ಶಿಪಾರಸ್ಸು ಜಾರಿಮಾಡಲು ಸಹಾಯವಾಗುವಂತೆ ಜವಳಿ ಆಯುಕ್ತರ ಹುದ್ದೆ ಸೃಷ್ಟಿ ಮಾಡಲಾಯಿತು. ಇದು ರಾಜ್ಯದಲ್ಲಿ ಪ್ರಮುಖ ಕೈಮಗ್ಗ ಅಭಿವೃದ್ಧಿ ನಿಗಮ ಹಾಗೂ ಪ್ರತ್ಯೇಕ ನಿರ್ದೇಶನಾಲಯ ಸ್ಥಾಪನೆಗೆ ಸಹಾಯವಾಯಿತು. ಇದರ ಜೊತೆಗೆ ಸ್ವಾಯತ್ತ ಅಖಿಲ ಭಾರತ ಕೈಮಗ್ಗ ಅಭಿವೃದ್ಧಿ ನಿಗಮ ಸ್ಥಾಪಿಸಿ ನೇಕಾರಿಕೆಯ ಪ್ರಗತಿ ಸಾಧಿಸಲು ನಿರ್ಧರಿಸಲಾಯಿತು. ಹತ್ತಿ ಗಿರಣಿಗಳಿಗೆ ನೇಕಾರರಿಗೆ ಬೇಕಾದ ಉತ್ತಮ ದರ್ಜೆಯ  ನೂಲನ್ನು ಉತ್ಪಾದನಾದರದಲ್ಲಿ, ಅವರ ಒಟ್ಟು ಉತ್ಪಾದನೆಯಲ್ಲಿ ಶೇ ೨೫ ರಷ್ಟು ಒದಗಿಸಲು ಸೂಚಿಸಲಾಯಿತು. ಹತ್ತಿ ಗಿರಣಿಗಳು ನೇಕಾರರಿಗೆ ಬೇಕಾದ ಕಚ್ಚಾ ವಸ್ತಗಳನ್ನು ಸಂಬಂಧ ಪಟ್ಟ ಸಹಕಾರಿ ಸಂಘಗಳಿಗೆ ನೇರವಾಗಿ ಸರಬರಾಜು ಮಾಡಲಾಗುತ್ತದೆ. ಸಹಕಾರಿ ವಲಯದಲ್ಲಿ ೧೯೭೩-೭೪ರಲ್ಲಿ ೬೫ ಸಹಕಾರಿ ಹತ್ತಿ ಗಿರಣಿಗಳಿದ್ದವು. ಇದರಲ್ಲಿ ೨.೩೦ ದಶಲಕ್ಷ ನೂಲಿನ ರಾಟೆಗಳಿದ್ದವು. ಐದನೆಯ ಪಂಚವಾರ್ಷಿಕ ಯೋಜನೆಯಲ್ಲಿ ರಾಷ್ಟ್ರೀಯ ಸಹಕಾರಿ ಅಭಿವೃದ್ಧಿ ನಿಗಮ ೨೫ ಗಿರಣಿಗಳು, ೨೫೦೦೦ ನೂಲಿನ ರಾಟೆಗಳನ್ನು ಹೊಂದಿರುವ ಹಾಗೆ ಅಸ್ತಿತ್ವಕ್ಕೆ ಬರುವಂತೆ ಸಲಹೆ ಮಾಡಿತು.”[redacted]

“ಭಾರತ ಸರ್ಕಾರ ಇದರಲ್ಲಿ ಐದು ನಮೂನೆಯ ವಸ್ತಗಳನ್ನು ಉತ್ಪಾದನೆ ಮಾಡಲು ವಿದ್ಯುತ್ ಮಗ್ಗಗಳಿಗೆ ಅನುಮತಿ ನೀಡಿತು. ಕೈಮಗ್ಗದ ಅಭಿವೃದ್ಧಿ ೧೯೭೭-೭೬ರಲ್ಲಿ ವಿಶೇಷವಾಗಿ ಅದರ ಉತ್ಪನ್ನಗಳಿಗೆ ರಪ್ತು ಹೆಚ್ಚಿಸಲು ೧೦೫ ಕೋಟಿ ರೂ. ಸಹಾಯಧನ ನೀಡಿದೆ. ಐದನೇ ಪಂಚವಾರ್ಷಿಕ ಯೋಜನೆಯ ಕೊನೆಗೆ ಕೈಮಗ್ಗದ ಉದ್ಯಮವನ್ನು ಶೇ ೬೦ರಷ್ಟು ಸಹಕಾರಿ ಸಂಘಗಳ ಅಡಿಯಲ್ಲಿ ಕಾರ್ಯನಿರ್ವಹಿಸಲು ಆಯೋಜಿಸಲಾಯಿತು. ಸಹಕಾರ ಕ್ಷೇತ್ರದ ವ್ಯಾಪ್ತಿಯಿಂದ ಹೊರಗಿರುವ ನೇಕಾರರಿಗೆ ಕ್ರಿಯಾ ಯೋಜನೆ ತಯಾರಿಸುವಂತೆ ಅದರಲ್ಲಿ ೫ರಿಂದ ೧೦ ಸಾವಿರ ತನಕ ನೇಕಾರರು ಪ್ರಯೋಜನ ಪಡೆಯಬೇಕೆಂದು ಇದರ ಉದ್ದೇಶವಾಗಿತ್ತು. ಕೇಂದ್ರ ಸರಕಾರ ಕೈಮಗ್ಗ ಅಭಿವೃದ್ಧಿಗೆ ೫ ಕಿಟಕಿ ಯೋಜನೆ ಜಾರಿಗೆ ತಂದಿದೆ. ಅದರಲ್ಲಿ ಕರ್ನಾಟಕದಲ್ಲಿ ನಾಲ್ಕು ಜಿಲ್ಲೆಗಳು ಒಳಗೊಂಡಿವೆ. ವಿಜಯಪುರ(ಬಾಗಲಕೋಟ), ಬೆಳಗಾವಿ, ಗುಲಬುರ್ಗಾ ಹಾಗೂ ಧಾರವಾಡ ಜಿಲ್ಲೆಗಳು ಇದರಲ್ಲಿ ಸೇರಿವೆ. ಈ ಯೋಜನೆಯಡಿಯಲ್ಲಿ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. ಎರಡರಿಂದ ಮೂರು ವರ್ಷದ ಡಿಪ್ಲೊಮೋ ತರಬೇತಿ ಹಾಗೂ ಸೇವಾನಿರತ ನೇಕಾರರಿಗೆ

ತರಬೇತಿ ಕೊಡಲು ತಿರ್ಮಾನಿಸಲಾಯಿತು. ನೇಕಾರರಿಗೆ ಅಗತ್ಯ ತಾಂತ್ರಿಕ ಸಲಹೆ ಹಾಗೂ ಮಾರ್ಗದರ್ಶನ ನೀಡಲು ನಿರ್ಧಾರ ಮಾಡಲಾಗಿದೆ. ನೇಯ್ಗೆ ಉಪಕರಣಗಳ ರೀಪೇರಿಗೆ ಬೇಕಾದ ಸಲಹೆಗಾರರನ್ನು ಜಿಲ್ಲಾ ಕೇಂದ್ರದಲ್ಲಾದರೂ ನೇಮಕ ಮಾಡಲು ಯೋಜಿಸಲಾಗಿದೆ. ಕಚ್ಚಾ ಸಾಮಗ್ರಿ, ಹತ್ತಿ ನೂಲು, ಕಚ್ಚಾ ರೇಷ್ಮೆ, ಡೈಯಿಂಗ್ ಮಾಡಲು ಬೇಕಾದ ರಾಸಾಯನಿಕ ವಸ್ತುಗಳು ಕೇಂದ್ರ ಉಗ್ರಾಣ ಸ್ಥಾಪಿಸಬೇಕೆಂದು ಯೋಜನೆ ರೂಪಿಸಲಾಯಿತು. ದಸ್ತಾನಿನ ಗುಣಮಟ್ಟ ಕಾಪಾಡಲು ನಿರ್ಧಾರ ಕೈಗೊಳ್ಳಲಾಯಿತು."[೧೪]

"ಸಿಂಡಿಕೇಟ್ ಬ್ಯಾಂಕ ಹುನಗುಂದ ತಾಲೂಕಿನ ಇಳಕಲ್ ನಡೆಸಿದ ಸಮೀಕ್ಷೆಯು ಮಧ್ಯವರ್ತಿಗಳಿಂದ ನೇಕಾರರನ್ನು ರಕ್ಷಿಸಲು ಅಗತ್ಯ ಕ್ರಮಗಳನ್ನು ರೂಪಿಸಲಾಗಿದೆ ಹಾಗೂ ಕ್ರಮಗಳನ್ನು ಕೈಗೊಳ್ಳಲು ಹೇಳಿದೆ. ಇಳಕಲ್ ಸೀರೆಗಳು ಮಿಲ್ಲಿನ ಸೀರೆಗಳಿಗಿಂತ ಹೆಚ್ಚನ ಬೆಲೆ ಹೊಂದಿರುತ್ತದೆ. ದುಬಾರಿಯಾದ ಕಚ್ಚಾವಸ್ತು ಹಾಗೂ ಮಾದರಿ ಉತ್ಪಾದನೆಯಲ್ಲಿ ಏಕರೂಪತೆಯಿಲ್ಲದಿರುವುದು, ಪ್ರಚಾರದ ಕೊರತೆ ಹಾಗೂ ಹಣಕಾಸಿನ ಅಡಚಣೆಗಳಿಂದ ಇಳಕಲ್ಲ ಸೀರೆಗಳು ಬೆಲೆ ಹೆಚ್ಚಿಸುತ್ತವೆ. ಇದು ಬಿಜಾಪುರ ಜಿಲ್ಲೆಯ ನೇಕಾರ ಅಭಿವೃದ್ಧಿಗೆ ಉತ್ತಮ ಸಹಾಯಕವಾಗುತ್ತದೆಂದು ಆರ್ಥಿಕ ಸಮೀಕ್ಷೆಗಳು ತಿಳಿಸುತ್ತವೆ. ಈ ಜಿಲ್ಲೆಯಲ್ಲಿ ವಿಶಿಷ್ಟ ಎನಿಸಿರುವ ತನ್ನದೆ ಆದ ಗಮನ ಸೆಳೆಯುವ ಇಳಕಲ್ ಮಾದರಿಯ ಸೀರೆಗಳು ಗುಳೇದಗುಡ್ಡ ಖಣಗಳು, ಕಂಬಳಿಗಳು, ಲುಂಗಿ, ಟವಲು, ಬೆಡ್‌ಸೀಟುಗಳನ್ನು ನೇಯುವಲ್ಲಿ ನೇಕಾರರು ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ. ನೇಕಾರರ ಅಭಿವೃದ್ಧಿಗೆ ರಾಜ್ಯ ಸರ್ಕಾರಕ್ಕೆ ಮಗ್ಗ ಅಭಿವೃದ್ಧಿ ನಿಗಮ ಹಾಗೂ ಪ್ರೀಯದರ್ಶಿನಿ ಕೈಮಗ್ಗ ಮಾರಾಟ ಮಳಿಗೆಯನ್ನು ತೆರದಿವೆ. ಇವುಗಳ ಜೊತೆಗೆ ರಾಜ್ಯದಲ್ಲಿ ೧೯೭೨ರಿಂದ ಪ್ರತ್ಯೇಕ ಜವಳಿ ನಿರ್ದೇಶನಾಲಯವನ್ನು ಅಸ್ಥಿತ್ವಕ್ಕೆ ತಂದು ಈ ಉದ್ಯಮಕ್ಕೆ ಕಾಯಕಲ್ಪ ನೀಡಿದೆ. ನೇಕಾರರ ಕುಟುಂಬವು ನೇಕಾರಿಕೆಯ ಜೊತೆಗೆ ಪಶು ಸಂಗೋಪನೆ, ಕುರಿ ಸಾಕಾಣಿಕೆ, ಕೋಳಿ ಸಾಕಾಣಿಕೆ ಮೊದಲಾದ ಉಪಕಸುಬುಗಳನ್ನು ಕೈಗೊಳ್ಳುವುದು. ಕುಣಿ ಮಗ್ಗದಿಂದ ನೇಕಾರರು ತಾಂತ್ರಿಕ ಮಗ್ಗಕ್ಕೆ ಪರಿವರ್ತತನೆಯಾದುದು ಹಾಗೂ ಪರಿವರ್ತನೆ ಯಾಗುತ್ತಿರುವುದು ಕಂಡುಬರುತ್ತದೆ. ನಾಲ್ಕು ವರ್ಷದವರೆಗೆ ಸಾಲ ತೀರಿಸಲು ಅನೂಕೂಲವಾಗುವ ಯೋಜನೆ ಜಾರಿಗೋಳಿಸಲು ನಿರ್ಧಾರ ಕೈಗೊಳ್ಳಲಾಗಿದೆ. ವಾಣಿಜ್ಯ ಬ್ಯಾಂಕುಗಳು ನೇಕಾರರಿಗೆ ಆರ್ಥಿಕ ನೆರವು ಕೊಡಲು ತಿರ್ಮಾಣಿನಿಸಿವೆ. ಈ ಪ್ರಾಂತ್ಯದಲ್ಲಿ ೧೯೭೬-೭೭ರಲ್ಲಿ ೧೫೮೦೦ ಕೈಮಗ್ಗಗಳು ಇದ್ದವು. ೩೩೦೦ ಮಗ್ಗಗಳು ಸ್ಥಗಿತಗೊಂಡಿದ್ದವು. ಉಳಿದ ೧೨೫೦೦ ಮಗ್ಗಗಳು ಸಹಕಾರಿ ಸಂಘಗಳ ವಶದಲ್ಲಿದ್ದವು. ಇದರ ಪೈಕಿ ೬೦೦ ಮಗ್ಗಗಳಿಗೆ ವಾಣಿಜ್ಯ ಬ್ಯಾಂಕುಗಳ ಸಹಾಯಧನ ನೀಡಿವೆ. ಈ ಪ್ರಾಂತ್ಯದಲ್ಲಿ ೧೦ ಸಾವಿರ ಮಗ್ಗಗಳಿಗೆ ತಲಾ ೫೦೦ರೂ.ರಂತೆ ಹಣಕಾಸು ನೇರವು ನೀಡಲು ೫೦ ಲಕ್ಷ ರೂ. ಬೇಕಾಗುತ್ತದೆಂದೂ ವಾಣಿಜ್ಯ ಬ್ಯಾಂಕುಗಳು ಅಂದಾಜು ಮಾಡಿವೆ. ಇಳಕಲ್, ಅಮೀನಗಡ, ಸೂಳಿಭಾವಿ, ಗುಡೂರು ಹಾಗೂ ಗುಳೇದಗುಡ್ಡದ ಸ್ಥಳಗಳಿಗೆ ನೇಕಾರರ ಸಮುದಾಯದಿಂದ ಬಂದಂತಹ ವಿದ್ಯಾವಂತರನ್ನು ನೇಮಿಸಿಕೊಂಡು ನೇಕಾರಿಕೆಯಲ್ಲಿ ಆಧುನಿಕ ಮಾರ್ಪಾಡು ತರಬೇಕೆಂದು ಅಭಿಪ್ರಾಯವಿದೆ. ಇದರೊಂದಿಗೆ ಕರ್ನಾಟಕ ಸರಕಾರ ಈ ಕಾಲದಲ್ಲಿ ನೇಕಾರರು ಹೆಚ್ಚಿರುವ

ಸ್ಥಳಗಳಲ್ಲಿಗೆ ಸಮಾಜ ಸೇವಾ ಕಾರ್ಯಕರ್ತರನ್ನು ನೇಮಿಸಿ ಅವರುಗಳ ಆರೋಗ್ಯ, ಶಿಕ್ಷಣ, ಕುಟುಂಬ ಯೋಜನೆ, ಉಳಿತಾಯ, ಕುಡಿತದ ಹಾಗೂ ಗುಟಕಾ ಪಾನಗಳಂತಹ ಪರಿಣಾಮಗಳನ್ನು ತಿಳಿಸುವಂತೆ ಸೂಚಿಸಿತ್ತು. ಆದರೆ ಯಾವುದೇ ರೀತಿಯಲ್ಲಿ ಯೋಜನೆಗಳನ್ನು ಪರಿಣಾಮಕಾರಿ ಜಾರಿಗೆ ಬಂದಿಲ್ಲದಿರುವುದು ಕಂಡುಬರುತ್ತದೆ.”[redacted] (೧೧೧ಪು)

### ೩.೩ ನೇಕಾರರ ಅಭಿವೃದ್ಧಿಯಲ್ಲಿ ಸರಕಾರಿ ಯೋಜನೆಗಳು

ಪ್ರಾಚೀನ ಕಾಲದಿಂದಲೂ ಪಾರಂಪರಿಕ ಕಸುಬುಗಳನ್ನೇ ತಮ್ಮ ಜೀವನದ ಆರ್ಥಿಕ ಆಧಾರಗಳೆಂದು ಹಾಗೂ ಮೂಲಗೆಳೆಂದು ನಂಬಿಕೊಂಡು ಇಂದಿನವರೆಗೂ ಬಂದಿವೆ. ಆದರೆ ಪಾಶ್ಚಾತ್ಯ ರಾಷ್ಟ್ರಗಳು ಅಭಿವೃದ್ಧಿಯ ಹೆಸರಿನಲ್ಲಿ ಹೊಸ ಹೊಸ ತಾಂತ್ರಿಕ ಉಪಕರಣಗಳನ್ನು ಬಳಸಿಕೊಂಡು ದೇಶಿಯತೆಯನ್ನು ತಮ್ಮ ವಸ್ತುಸಂಗ್ರಹಾಲಯದಲ್ಲಿ ಇರುವಂತೆ ಮಾಡಿವೆ.

ನೇಕಾರಿಕೆಯು ಜವಳಿಯ ನೀತಿಗಳ ಮೂಲಕ ಇಂದು ರಾಷ್ಟ್ರದಲ್ಲಿ ಹಲವಾರು ಪ್ರಮುಖ ಬದಲಾವಣೆಯನ್ನು ತಂದಿವೆ. ಸಹಕಾರಿ ಕ್ಷೇತ್ರದಿಂದ ನೇಕಾರಿಕೆಯು ಬೆಳೆದು ಸಂಘಟನೆಯ ಮುಖೇನ ಅಭಿವೃದ್ಧಿಯ ಕಡೆಗೆ ಮುಖಮಾಡಿರುವುದು ಕಂಡುಬರುತ್ತದೆ. ಈ ಜವಳಿ ಕ್ಷೇತ್ರದ ಉದ್ಯಮವು ಇಂದು ಬೃಹತ್ಪ್ರಮಾಣದಲ್ಲಿ ಬೆಳೆದು ನಿಂತಿದೆ. ನೇಕಾರಿಕೆ ದೇಶದ ಆರ್ಥಿಕತೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಆದ್ದರಿಂದ ಭಾರತ ಸರಕಾರವು ಈ ಜವಳಿ ಕ್ಷೇತ್ರಕ್ಕೆ ಅಪಾರವಾದ ಕೊಡುಗೆಯನ್ನು ನೀಡುತ್ತಾ ಬಂದಿದೆ. ಆದರೆ ಅವುಗಳ ಫಲಾನುಫಲವು ಸಾಮಾನ್ಯ ಜನರಿಗೆ ತಿಳಿದು ಒದಗಿಬರುವಂತಾಗಬೇಕು.

ಜವಳಿ ಉದ್ಯಮ ಲಕ್ಷಾಂತರ ಜನರಿಗೆ ಉದ್ಯಮ ಒದಗಿಸುವಂತ ಕಾರ್ಯಮಾಡುತ್ತಿದೆ ಹಾಗೂ ಅವರ ಆರೋಗ್ಯ, ಶಿಕ್ಷಣ, ಆರ್ಥಿಕ ಸುಧಾರಣೆಗಳನ್ನು ತರುವುದು ಹಾಗೂ ಉತ್ತಮ ಗುಣಮಟ್ಟದ ವಸ್ತುಗಳನ್ನು ತಯಾರಿವಂತೆ ಪ್ರೇರೇಪಣೆ ಮಾಡುವ ನಿಟ್ಟಿನಲ್ಲಿ ಸರಕಾರವು ಹಲವಾರು ಕಾರ್ಯಕ್ರಮಗಳನ್ನು ನೇಕಾರರಿಗೆ ನೀಡುತ್ತ ಬಂದಿವೆ.

ಜವಳಿ ಉದ್ಯಮದಲ್ಲಿ ವಿಭಿನ್ನ ವಿಭಾಗಳನ್ನಾಗಿ ವಿಂಗಡಿಸಿ ಹಲವು ರೀತಿಯ ಕುಶಲತೆಯನ್ನು ಹೊಂದಿರುವಂತ ಜನಸಮುದಾಯದವರು ಇರುವುದನ್ನು ಗಮನಿಸಿದ ಸರಕಾರವು, ಅವರ ಸಾಮರ್ಥ್ಯಕ್ಕೆ ರಾಷ್ಟ್ರಮಟ್ಟದ ರಾಜ್ಯಮಟ್ಟದ ಕಾರ್ಯಕ್ರಮಗಳನ್ನು ಹಾಗೂ ಪ್ರಾದೇಶಿಕ ವಿಶೇಷತೆಗೆ ಸಂಬಂಧಿಸಿದಂತೆ ಘಟಕವಾರು ಯೋಜನೆಗಳನ್ನು ಸರಕಾರಗಳು ಜಾರಿಗೊಳಿಸುತ್ತಿದೆ.

“ಈ ಕಾರ್ಯಕ್ರಮಗಳನ್ನು ಈ ಕೆಳಗಡೆ ಚರ್ಚಿಸಲಾಗುವುದು.

**೧. ಕೈಮಗ್ಗ ನೇಕಾರರಿಗೆ ಕಲ್ಯಾಣ ಯೋಜನೆಗಳು**

ಕೈಮಗ್ಗ ಕ್ಷೇತ್ರದಲ್ಲಿ ದುಡಿಯುವವರ ಆರ್ಥಿಕ ಹಾಗೂ ಸಾಮಾಜಿಕ ಸ್ಥಿತಿಗತಿ, ಇತರೆ ವಿದ್ಯುತ್ ನೇಕಾರರ ಸ್ಥಿತಿಗಿಂತ ಬಹಳ ಭಿನ್ನವಾಗಿದೆ ಎಂದು ತಿಳಿಯುತ್ತದೆ. ಅಂದರೆ ಸಾಂಪ್ರದಾಯಿಕ ಉತ್ಪನ್ನಗಳಿಗೆ ಜನರು

ಪ್ರೋತ್ಸಾಹಿಸಿ ವ್ಯಾಪಾರ ಮಾಡುವುದು ಕಡಿಮೆಯಾಗಿದೆ. ಅದಕ್ಕೆ ಹಲವಾರು ಕಾರಣಗಳನ್ನು ನಾವು ನೋಡುತ್ತೇವೆ. ಹಲವಾರು ಸಮಸ್ಯೆಗಳ ಸುಳಿಯಲ್ಲಿ ಕೈಮಗ್ಗದ ನೇಕಾರ ಜೀವನ ಸಾಗಿಸುತ್ತಿದ್ದಾರೆ. ಕೈಮಗ್ಗದ ನೇಕಾರರು, ಬುಡಕಟ್ಟು ಮೂಲ ನಿವಾಸಿಗಳೂ ಸೇರಿದಂತೆ ಭಾರತದಾದ್ಯಂತ ಹರಡಿಕೊಂಡಿದ್ದಾರೆ. ಈ ನೇಕಾರರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಸ್ಥಿತಿಗತಿ ಗಂಭೀರ ಹಾಗೂ ಶೋಚನಿಯವಾಗಿದೆ. ಅವರ ಸಾಮಾಜಿಕ ಭದ್ರತೆಯ ವಿಚಾರ ಹೆಚ್ಚು ಹೆಚ್ಚು ಜಟಿಲವಾಗುತ್ತಿರುವುದಕ್ಕೆ ಇದೇ ಕಾರಣವಾಗಿದೆ.

"ಭಾರತ ಸರಕಾರ ನೇಕಾರರ ಅನುಕೂಲಕ್ಕಾಗಿ ಹಲವಾರು ಕಲ್ಯಾಣ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದು ಅವುಗಳಲ್ಲಿ ಕೆಲವು ಚರ್ಚಿಸಲಾಗಿದೆ.

**ಅ) ಮಹಾತ್ಮಾ ಗಾಂಧಿ ನೇಕಾರರ ವಿಮಾ ಯೋಜನೆ (ಎಂ.ಜಿ.ಬಿ.ಬಿ.ವಾಯ್.)**

ನೇಕಾರರ ಜೀವನದಲ್ಲಿ ಅಕಸ್ಮಿಕ ಸಂದರ್ಭದಲ್ಲಿ ಈ ವಿಮಾ ಸಹಕಾರಿ ಯಾಗುತ್ತದೆ. ಈ ಯೋಜನೆಯ ಅಡಿಯಲ್ಲಿ ನೇಕಾರರು ವಿಮೆಯನ್ನು ಮಾಡಿಸುವುದು. ವಿಮೆ ಮಾಡಿಸಿರುವ ನೇಕಾರರಿಗೆ ಈ ಮುಂದಿನ ಸೌಕರ್ಯಗಳು ನೇಕಾರರು ಪಡೆಯುತ್ತಾನೆ ಅಥವಾ ಅರ್ಹರಾಗಿರುತ್ತಾರೆ.

ಎ) ವಿಮೆ ಮಾಡಿಸಿರುವಂತ ವ್ಯಕ್ತಿಯು ಸಹಜ ಸಾವು ಸಂಭವಿಸಿದರೆ, ಅಂತಹ ಕುಟುಂಬಗಳಲ್ಲಿಯ ನಾಮನಿರ್ದೇನದ ಹೆಸರಿನ ವ್ಯಕ್ತಿಗೆ ೬೦,೦೦೦ ರೂಪಾಯಿಗಳನ್ನು ನೀಡುತ್ತಾರೆ.

ಬಿ) ವಿಮೆ ಹೊಂದಿದ ವ್ಯಕ್ತಿಗಳಿಗೆ ಅಪಘಾತದಲ್ಲಿ ಸಾವುಂಟಾದರೆ ೧,೫೦,೦೦೦ ರೂಪಾಯಿಗಳನ್ನು ಆ ಕುಟುಂಬದ ನಾಮನಿರ್ದೇಶನ ವ್ಯಕ್ತಿಯ ಹೆಸರಿಗೆ ಹಣ ಸಂದಾಯವಾಗುತ್ತದೆ.

ಸಿ) ವಿಮೆ ಹೊಂದಿದ ವ್ಯಕ್ತಿಗೆ ಅಪಘಾತದಲ್ಲಿ ಶಾಶ್ವತ ಅಂಗವಿಕಲತೆ ಉಂಟಾದರೆ ೧,೫೦,೦೦೦ ರೂಪಾಯಿಗಳನ್ನು ಆ ಕುಟುಂಬದ ನಾಮನಿರ್ದೇಶನ ವ್ಯಕ್ತಿಯ ಹೆಸರಿಗೆ ಹಣ ಸಂದಾಯವಾಗುತ್ತದೆ.

ಡಿ) ವಿಮೆ ಹೊಂದಿದ ವ್ಯಕ್ತಿ ಅಪಘಾತದಲ್ಲಿ ಭಾಗಶ: ಅಂಗವಿಕಲತೆ ಉಂಟಾದರೆ ೭೫,೦೦೦ ರೂಪಾಯಿಗಳನ್ನು ಆ ಕುಟುಂಬದ ನಾಮನಿರ್ದೇಶನ ವ್ಯಕ್ತಿಯ ಹೆಸರಿಗೆ ಹಣ ಸಂದಾಯವಾಗುತ್ತದೆ.

ಇದರೊಂದಿಗೆ ನೇಕಾರರ ಮಕ್ಕಳಿಗೆ ಶಿಕ್ಷಣ ಸಹಾಯ ಯೋಜನೆಯಡಿಯಲ್ಲಿ ವಿಮೆ ಮಾಡಿಸಿದ ವ್ಯಕ್ತಿಯ ಕುಟುಂಬದ ೯ ರಿಂದ ೧೨ನೆಯ ತರಗತಿಯವರೆಗೆ ಓದುವ ಇಬ್ಬರು ಮಕ್ಕಳಿಗೆ ವಾರ್ಷಿಕ ಗರಿಷ್ಠ ೨೪೦೦ ರೂಪಾಯಿಗಳನ್ನು ಶಿಕ್ಷಣ ಅನುದಾನ ನೀಡುವ ಅವಕಾಶವಿದೆ. ಈ ಯೋಜನೆಯ ಅಡಿಯಲ್ಲಿ ನೇಕಾರ ವಾರ್ಷಿಕ ಪ್ರೀಮಿಯಂ ೪೭೦ ರೂಪಾಯಿಗಳಲ್ಲಿ ೮೦ ರೂಪಾಯಿ ಮಾತ್ರ ಪಾವತಿಸಬೇಕಾಗುತ್ತದೆ. ಉಳಿದ ಮೊತ್ತವನ್ನು ಭಾರತ ಸರ್ಕಾರ ಕಟ್ಟಿಕೊಡುವುದು."[೨೦]

**"ಆ) ಆರೋಗ್ಯ ವಿಮಾ ಯೋಜನೆ (ಹೆಚ್ಐಎಸ್.)**

೧೨ನೇ ಪಂಚವಾರ್ಷಿಕ ಯೋಜನೆಯಲ್ಲಿ ಆರ್ಥಿಕ ವ್ಯವಹಾರಗಳ ಸಂಪುಟ ಸಮಿತಿ, ಉದ್ಯೋಗ ಮತ್ತು ಕಾರ್ಮಿಕ ಸಚಿವಾಲಯದ ರಾಷ್ಟ್ರೀಯ ಸ್ವಾಸ್ಥ್ಯ ಭೀಮಾ ಯೋಜನೆಯ ಮಾದರಿಯಲ್ಲಿ ಆರೋಗ್ಯ ವಿಮಾ ಯೋಜನೆಯೊಂದನ್ನು ಅನುಮೋದಿಸಿದೆ. ೨೦೧೬ರ ಮಾರ್ಚ ೨೯ರಂದು ಆರೋಗ್ಯ ಸಚಿವಾಲಯ, ಕೈಮಗ್ಗ

ನೇಕಾರರಿಗೆ ರಾಷ್ಟ್ರೀಯ ಸ್ವಾಸ್ಥ್ಯ ಭೀಮಾ ಯೋಜನೆಯ ಲಾಭ ಒದಗಿಸಲು ವಿವರವಾದ ನಿರ್ದೇಶನ ನೀಡಿದೆ. ಈ ಯೋಜನೆ ಆಸ್ಪತ್ರೆಯಲ್ಲಿ ಭರ್ತಿಯಾದ ದಾಖಲಾದಲ್ಲಿ ೩೦,೦೦೦ ರೂಪಾಯಿಗಳ ವಿಮಾ ಸೌಲಭ್ಯವನ್ನು ನೀಡುತ್ತದೆ.

ರಾಷ್ಟ್ರೀಯ ಸ್ವಾಸ್ಥ್ಯ ಭೀಮಾ ಯೋಜನೆ ಜಾರಿಯಾಗುತ್ತಿರುವ ೧೯ ರಾಜ್ಯಗಳೆಂದರೆ ಅಸ್ಸಾಂ, ಬಿಹಾರ, ಹಿಮಾಚಲ ಪ್ರದೇಶ, ಛತ್ತಿಸಗಢ, ಗುಜರಾತ್, ಹರಿಯಾನ, ಜಾರ್ಖಾಂಡ್, ಕರ್ನಾಟಕ, ಕೇರಳ, ಮಣಿಪುರ, ಮೇಘಾಲಯ, ಮಿಜೊರಾಂ, ಒಡಿಸಾ, ಪಂಜಾಬ್, ರಾಜಸ್ಥಾನ, ತ್ರಿಪುರಾ, ಉತ್ತರ ಪ್ರದೇಶ, ಉತ್ತರಖಂಡ ಹಾಗೂ ಪಶ್ಚಿಮ ಬಂಗಾಳ, ತಮಿಳುನಾಡು ರಾಷ್ಟ್ರೀಯ ಸ್ವಾಸ್ಥ್ಯ ಭೀಮಾ ಯೋಜನೆಯನ್ನು ಜಾರಿಗೊಳಿಸಿಲ್ಲ. ಅಲ್ಲಿ ಸಚಿವ ಸಂಪುಟದ ತಿರ್ಮಾನದಂತೆ ರಾಷ್ಟ್ರೀಯ ಸ್ವಾಸ್ಥ್ಯ ಭೀಮಾ ಯೋಜನೆಯ ಮಾದರಿಯನ್ನು ಜಾರಿಗೋಳಿಸಲಾಗುತ್ತಿದೆ.

ಈ ಯೋಜನೆಯಡಿಯಲ್ಲಿ ಭಾರತ ಸರ್ಕಾರದ ವತಿಯಿಂದ ಒಳರೋಗಿಗಳಿಗೆ ೩೦,೦೦೦ ರೂಪಾಯಿಗಳನ್ನು ಹಾಗೂ ಹೊರ ರೋಗಿಗಳಿಗೆ ೭,೫೦೦ ರೂಪಾಯಿಗಳನ್ನು ಹಾಗೂ ಅಕ್ಟೋಬರ್ ೧, ೨೦೧೫ರ ವರೆಗೆ ೧,೪೪,೨೯೪ ಮಂದಿ ನೇಕಾರರು ಈ ಯೋಜನೆಯಡಿ ನಾಮ ನಿರ್ದೇಶನ ಹೊಂದಿದ್ದಾರೆ. ಜವಳಿ ಸಚಿವಾಲಯ ಅಗಾಗ್ಗೆ ರಾಷ್ಟ್ರೀಯ ಸ್ವಾಸ್ಥ್ಯ ಭೀಮಾ ಯೋಜನೆಯ ಬಗ್ಗೆ ಕಾರ್ಯಲಯಗಳನ್ನು ಏರ್ಪಡಿಸುತ್ತಿದೆ. ಈ ಕಾರ್ಯಾಲಯಗಳಲ್ಲಿ ರಾಜ್ಯ ಕೈಮಗ್ಗ ಇಲಾಖೆಯ ಆಯುಕ್ತರು, ನಿರ್ದೇಶಕರು, ರಾಷ್ಟ್ರೀಯ ಸ್ವಾಸ್ಥ್ಯ ಭೀಮಾ ಯೋಜನೆಯ ಅಧಿಕಾರಿಗಳು ಭಾಗವಹಿಸಿ ಯೋಜನೆಯನ್ನು ಜಾರಿಗೊಳಿಸುವ ವಿಧಿ ವಿಧಾನಗಳ ಬಗ್ಗೆ ಚರ್ಚಿಸಲಾಗುತ್ತದೆ."[redacted]

**"ಇ) ಜವಳಿ ನೇಕಾರರ ಪುನರ್ವಸತಿ ಪುದವಟ್ಟು ಯೋಜನೆ (ಐಡಬ್ಲ್ಯೂಆರ್ಇಎಸ್)**

ಈ ಘಟಕ ಯೋಜನೆಯ ಅಡಿಯಲ್ಲಿ ಜವಳಿ ಘಟಕ ಅಥವಾ ಅದರ ಯಾವುದೇ ಜವಳಿ ವಿಭಾಗ ಬಾಗಿಲು ಮುಚ್ಚಿದರೆ ಕಾರ್ಮಿಕರಿಗೆ/ನೇಕಾರರಿಗೆ ಮಧ್ಯಂತರ ಪರಿಹಾರ ಒದಗಿಸಿಲಾಗುವುದು.

ಈ ವರ್ಷ, ೨೦೧೬ರ ಅಗಸ್ಟವರೆಗೆ ಭಾರತದಾದ್ಯಂತ ಬಾಗಿಲು ಮುಚ್ಚಿದ ೯೮ ಜವಳಿ ಮಿಲ್‌ಗಳ ೧,೧೭೧೭೫೧ ಕಾರ್ಮಿಕರಿಗೆ ೩೧೯.೬೬ ಕೊಟಿ ರೂಪಾಯಿಗಳ ಪರಿಹಾರ ಒದಗಿಸಲಾಗಿದೆ.

**"ಇತರೆ ಸರಕಾರಿ ಯೋಜನೆಗಳು**

೨೦೧೬-೧೭ನೇ ಸಾಳಿನಲ್ಲಿ ಜವಳಿ ಕ್ಷೇತ್ರದ ಅಭಿವೃದ್ಧಿಗಾಗಿ ಈ ಮುಂದಿನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗಿದೆ. ಅದರಲ್ಲಿ ಪ್ರಮುಖವಾದವುಗಳನ್ನು ವಿವರಿಸಲಾಗಿದೆ.

**೧. ವಸತಿ ಕಾರ್ಯಗಾರ**

ವಸತಿ ಕಾರ್ಯಗಾರ ಯೋಜನೆಯಡಿ ಒಟ್ಟು ೨,೫೦,೦೦೦ ರೂಪಾಯಿಗಳ ಘಟಕ ವೆಚ್ಚದಲ್ಲಿ ಸಾಮಾನ್ಯ ಫಲಾನುಭವಿಗಳಿಗೆ, ೧,೦೦,೦೦೦ ರೂಪಾಯಿಗಳ ಸಹಾಯಧನ ಹಾಗೂ ೧,೨೦,೦೦೦ ರೂಪಾಯಿಗಳು ಸಾಲದ ರೂಪದಲ್ಲಿ ಹಾಗೂ ಫಲಾನುಭವಿಗಳ ವಂತಿಕೆ ೩೦,೦೦೦ ರುಪಾಯಿಗಳು ಹಾಗೂ ಪರಿಶಿಷ್ಟ ಜಾತಿ

ಹಾಗೂ ಪರಿಶಿಷ್ಟ ಪಂಗಡಗಳ ಫಲಾನುಭವಿಗಳಿಗೆ ೨,೨೫,೦೦೦ ರೂಪಾಯಿಗಳ ಸಹಾಯಧನ ಹಾಗೂ ೨೫,೦೦೦ ರೂಪಾಯಿಗಳ ಸಾಲ ನೀಡಿ ವಸತಿ ಸೌಲಭ್ಯ ಒದಗಿಸಲು ಕ್ರಮವಹಿಸಲಾಗಿದೆ.

೨೦೧೬-೧೭ನೇ ಸಾಲಿಗೆ ರೂ. ೭೭೧.೯೧ ಲಕ್ಷಗಳ ಅನುದಾನ ಹಾಗೂ ರೂ. ೨೩೮.೦೯ ಲಕ್ಷಗಳ ಸಾಲದ ಬಾಬ್ತು ಸೇರಿ ಒಟ್ಟು ರೂ.೧೦೦೦.೦೦ ಲಕ್ಷಗಳ ಆಯವ್ಯಯ ಒದಗಿಸಲಾಗಿದ್ದು, ೯೫೮ ವಸತಿ ಕಾರ್ಯಾಗಾರವನ್ನು ನಿರ್ಮಾಣದ ಕಾರ್ಯ ಕೈಗೊಳ್ಳಲು ಉದ್ದೇಶಿಸಲಾಗಿದೆ.

**೨. ನೇಕಾರರ ವಿಶೇಷ ಪ್ಯಾಕೇಜ್**

**ಅ) ಕೈಮಗ್ಗ ನೇಕಾರರ ಏಳಿಗೆ ನಿಧಿ ಯೋಜನೆ:**

ಈ ಯೋಜನೆಯಡಿಯಲ್ಲಿ ನೇಕಾರರ ದುಡಿಮೆಯಿಂದ ಶೇಕಡಾ ೮ ರಷ್ಟು ಹಣವನ್ನು ಕಡಿತಗೊಳಿಸಿ ರಾಜ್ಯ ಸರ್ಕಾರದಿಂದ ಶೇಕಡ ೮ರಷ್ಟು ಸಮ ಚಂದಾವನ್ನು ಸೇರಿಸಿ ಸಂಬಂಧಪಟ್ಟ ತಾಲ್ಲೂಕು ಖಜಾನೆಯಲ್ಲಿ ನೇಕಾರರ ಖಾತೆಗೆ ಜಮಾ ಮಾಡಲಾಗುತ್ತಿದೆ. ಆಳುಮೆಯಾದ ಮೊತ್ತಕ್ಕೆ ರಾಜ್ಯ ಸರ್ಕಾರದ ವತಿಯಿಂದ ವಾರ್ಷಿಕ ಶೇಕಡ ೧೨ ರಷ್ಟು ಬಡ್ಡಿ ನೀಡಲಾಗುವುದು ಈ ಯೋಜನೆಯಡಿಯಲ್ಲಿಯ ಫಲಾನುಭವಿಗಳು ಮದುವೆ, ಮನೆ ಕಟ್ಟಡ, ವೈದ್ಯಕೀಯ ಹಾಗೂ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಮುಂಗಡ ಪಡೆಯಬಹುದಾಗಿದೆ. ಈ ಯೋಜನೆಯಲ್ಲಿ ಅಳವಡಿಸಬಹುದಾದ ಫಲಾನುಭವಿಗಳು ೧೫ ವರ್ಷಗಳ ನಂತರ ಅಥವಾ ನೇಕಾರರ ವೃತ್ತಿ ಮಾಡಲು ಸಾಧ್ಯವಾಗದಿದ್ದ ಪಕ್ಷದಲ್ಲಿ ಅಥವಾ ಅವನಿಗೆ ೬೦ ವರ್ಷ ತುಂಬಿದ ನಂತರ ಪಾವತಿಯಾದ ಪೂರ್ತಿಹಣವನ್ನು ಬಡ್ಡಿ ಸಮೇತ ಹಿಂದಿರುಗಿಸಲಾಗುವುದು.

ಈ ಯೋಜನೆಯಡಿ ಕರ್ನಾಟಕದಲ್ಲಿ ೨೦೧೬-೧೭ನೇ ಸಾಲಿಗೆ ರೂ.೮೦.೦೦ ಲಕ್ಷಗಳ ಆಯವ್ಯಯವನ್ನು ಒದಗಿಸಲಾಗಿದೆ.

**ಆ) ಗುಂಪು ವಿಮಾ ಯೋಜನೆ:**

ಕೈಮಗ್ಗ ನೇಕಾರರ ವಿಮಾ ಸೌಲಭ್ಯ ಒದಗಿಸುವುದರೊಂದಿಗೆ ಕೈಮಗ್ಗ ನೇಕಾರರ ಮಕ್ಕಳಿಗೆ ವಿದ್ಯಾರ್ಥಿ ವೇತನವನ್ನು ಈ ಯೋಜನೆಯಡಿಯಲ್ಲಿ ಒದಗಿಸಲಾಗಿದೆ. ಕೇಂದ್ರ ಸರಕಾರವು ಕೈಮಗ್ಗ ನೇಕಾರರ ಸಾಮಾಜಿಕ ಭದ್ರತೆಗಾಗಿ ಕೆ.ಹೆಚ್.ಡಿ.ಸಿ., ಸಹಕಾರಿ ಸಂಘಗಳು ಹಾಗೂ ಖಾಸಗಿ ವಲಯದ ನೇಕಾರರಿಗೆ ಮಹಾತ್ಮಾಗಾಂಧಿ ಬುನ್ಕರ್ ಭೀಮಾ ಯೋಜನೆ ಎಂಬ ಯೋಜನೆಯನ್ನು ಭಾರತೀಯ ಜೀವವಿಮಾ ನಿಗಮದ ಮೂಲಕ ಅನುಷ್ಠಾನಗೊಳಿಸಲಾಗಿದೆ. ಯೋಜನೆಯಡಿ ೧೮ ರಿಂದ ೬೦ವರ್ಷದೊಳಗಿನ ಎಲ್ಲ ಅರ್ಹ ಪುರುಷ ಮತ್ತು ಮಹಿಳಾ ನೇಕಾರರನ್ನು ನೊಂದಾಯಿಸಲಾಗುವುದು. ನೊಂದಾಯಿತ ಪ್ರತಿ ನೇಕಾರರ ವಿಮಾ ಕಂತಿನಲ್ಲಿ ರೂ. ೪೦/- ನ್ನು ರಾಜ್ಯ ಸರಕಾರ ವತಿಯಿಂದ ಪಾವತಿಸಲಾಗುತ್ತದೆ.

ಎ) ವಿಮೆ ಮಾಡಿಸಿರುವಂತ ವ್ಯಕ್ತಿಯು ಸಹಜ ಸಾವು ಸಂಭವಿಸಿದರೆ, ಅಂತಹ ಕುಟುಂಬಗಳಲ್ಲಿಯ ನಾಮನಿರ್ದೇನದ ಹೆಸರಿನ ವ್ಯಕ್ತಿಗೆ ೬೦,೦೦೦ ರೂಪಾಯಿಗಳನ್ನು ನೀಡುತ್ತಾರೆ.

ಬಿ) ವಿಮೆ ಹೊಂದಿದ ವ್ಯಕ್ತಿ ಅಪಘಾತದಲ್ಲಿ ಸಾವುಂಟಾದರೆ ೧,೫೦,೦೦೦ ರೂಪಾಯಿಗಳನ್ನು ಆ ಕುಟುಂಬದ ನಾಮನಿರ್ದೇಶನ ವ್ಯಕ್ತಿಯ ಹೆಸರಿಗೆ ಹಣ ಸಂದಾಯವಾಗುತ್ತದೆ.

ಸಿ) ವಿಮೆ ಹೊಂದಿದ ವ್ಯಕ್ತಿ ಅಪಘಾತದಲ್ಲಿ ಶಾಶ್ವತ ಅಂಗವಿಕಲತೆ ಉಂಟಾದರೆ ೧,೫೦,೦೦೦ ರೂಪಾಯಿಗಳನ್ನು ಆ ಕುಟುಂಬದ ನಾಮನಿರ್ದೇಶನ ವ್ಯಕ್ತಿಯ ಹೆಸರಿಗೆ ಹಣ ಸಂದಾಯವಾಗುತ್ತದೆ.

ಡಿ) ವಿಮೆ ಹೊಂದಿದ ವ್ಯಕ್ತಿ ಅಪಘಾತದಲ್ಲಿ ಭಾಗಶ: ಅಂಗವಿಕತೆ ಉಂಟಾದರೆ ೭೫,೦೦೦ ರೂಪಾಯಿಗಳನ್ನು ಆ ಕುಟುಂಬದ ನಾಮನಿರ್ದೇಶನ ವ್ಯಕ್ತಿಯ ಹೆಸರಿಗೆ ಹಣ ಸಂದಾಯವಾಗುತ್ತದೆ.

ಈ ಯೋಜನೆಗೆ ೨೦೧೬-೧೭ ನೇ ಸಾಲಿನಲ್ಲಿ ೪೫೦೦೦ ನೇಕಾರರನ್ನು ಅಳವಡಿಸುವ ಗುರಿಯನ್ನು ಕೇಂದ್ರ ಹಾಗೂ ರಾಜ್ಯ ಸರಕಾರ ಗುರಿ ಹೊಂದಿದೆ. ರೂ.೨೦.೦೦ ಲಕ್ಷಗಳ ಆಯವ್ಯಯ ಒದಗಿಸಲಾಗಿದೆ.

**ಇ) ಕೈಮಗ್ಗ ಸಹಕಾರಿ ಸಂಘಗಳಿಗೆ ಸಹಾಯ:**

ರಾಜ್ಯ ಸರಕಾರಗಳು ರಾಜ್ಯದಲ್ಲಿರುವ ಕೈಮಗ್ಗ ನೇಕಾರಿ ಸಹಕಾರಿ ಸಂಘಗಳಿಗೆ ವಿಶೇಷವಾದ ರೀತಿಯಲ್ಲಿ ಪ್ರೋತ್ಸಾವನ್ನು ನೀಡುತ್ತಿದ್ದು. ಈ ಯೋಜನೆಯಡಿ ೨೦೧೬-೧೭ನೇ ಸಾಲಿಗೆ ರೂ.೬೫.೦೦ ಲಕ್ಷಗಳ ಆಯವ್ಯಯ ಒದಗಿಸಲಾಗಿದೆ.

- ಸದರಿ ಅನುದಾನದಲ್ಲಿ ಸೇಲಂನಲ್ಲಿರುವ ಕೈಮಗ್ಗ ತರಬೇತಿ ಸಂಸ್ಥೆಯಲ್ಲಿ ವ್ಯಾಸಂಗ ಮಾಡುತ್ತಿರುವ ಕರ್ನಾಟಕದ ವಿದ್ಯಾರ್ಥಿ ವೇತನ ಬಾಬ್ತು ರೂ.೨.೦೦ ಲಕ್ಷಗಳು.
- ರೂ.೪೩.೦೦ ಲಕ್ಷಗಳನ್ನು ಮೃತ ನೇಕಾರರ ಅಂತ್ಯ ಸಂಸ್ಕಾರ, ನೇಕಾರರ ಹೃದಯ, ಕಿಡ್ನಿ ಮತ್ತು ಕ್ಯಾನ್ಸರ್‌ಗೆ ಸಂಬಂಧ ಕಾಯಿಲೆಗಳಿಗೆ ವೆಚ್ಚ ಮಾಡಿದ ವೈದ್ಯಕೀಯ ವೆಚ್ಚ ಮರುಪಾವತಿಸಲಾಗುವುದು.
- ರೂ ೩.೦೦ ಲಕ್ಷಗಳನ್ನು ಸಹಕಾರ ಸಂಘಗಳಿಗೆ ನಬಾರ್ಡ್ ಪುರ್ನಧನ ಯೋಜನೆಯಡಿ ಪಡೆದ ಸಾಲದ ಮೇಲಿನ ಬಡ್ಡಿ ಸಹಾಯಧನಕ್ಕಾಗಿ ಉಪಯೋಗಿಸುವುದು.
- ರೂ. ೧೬.೦೦ ಲಕ್ಷಗಳನ್ನು ರಾಜ್ಯಮಟ್ಟದ ಕೈಮಗ್ಗ ಮೇಳದ ಆಯೋಜನೆಗಾಗಿ ಹಾಗೂ ರೂ.೧.೦೦ ಲಕ್ಷವನ್ನು ಕೈಮಗ್ಗ ನೇಕಾರರ ಪ್ರವಾಸಕ್ಕಾಗಿ ಬಳಸಲಾಗುವುದು. (ಮೂಲ: ಯೋಜನಾ ಪುಸ್ತಕ)

**ಈ) ಕೈಮಗ್ಗ ಉತ್ಪನ್ನಗಳ ಮಾರುಕಟ್ಟೆ ಸಹಾಯ (೨೦% ರಿಬೇಟ್)**

ಕೈಮಗ್ಗ ಉತ್ಪನ್ನಗಳ ಉತ್ಪಾದನೆ ಹೆಚ್ಚಿಸಿ ನೇಕಾರರಿಗೆ ನಿರಂತರ ಉದ್ಯೋಗ ಹೆಚ್ಚಿಸಿ ನೇಕಾರರಿಗೆ ನಿರಂತರ ಉದ್ಯೋಗ ಒದಗಿಸುವ ಉದ್ದೇಶದಿಂದ ರಾಜ್ಯದ ಕೈಮಗ್ಗ ನೇಕಾರರ ಸಹಕಾರ ಸಂಘಗಳು ಮತ್ತು ಕಾವೇರಿ ಹ್ಯಾಂಡ್‌ಲೂಮ್ಸ್ ಸಂಸ್ಥೆಯು ವಾರ್ಷಿಕ ನಿಗದಿಪಡಿಸಿದ ೧೮೦ ದಿನಗಳಲ್ಲಿ ಮಾರಾಟ ಮಾಡಿದ ಕೈಮಗ್ಗ ಉತ್ಪನ್ನಗಳ ಮೇಲೆ ೨೦% ರಿಬೇಟನ್ನು ರಾಜ್ಯ ಸರ್ಕಾರದ ವತಿಯಿಂದ ಮರುಪಾವತಿಸಲಾಗುತ್ತಿದೆ.

ಈ ೨೦೧೬-೧೭ನೇ ಸಾಲಿನಲ್ಲಿ ರೂ.೬೦೦.೦೦ ಲಕ್ಷಗಳ ಆಯವ್ಯಯವನ್ನು ಕೈಮಗ್ಗ ಸಹಕಾರಿ ಸಂಘಗಳು, ಕಾವೇರಿ ಹ್ಯಾಂಡ್‌ಲೂಮ್ಸ್, ಉಣ್ಣೆ ನೇಕಾರರ ಮಹಾಮಂಡಳಿ, ಬೆಂಗಳೂರು ಹಾಗೂ

ಖಾದಿಯೇತರ ಉಣ್ಣೆ ನೇಕಾರರ ಮಹಾಮಂಡಳ, ಚಳ್ಳಕೆರೆ ಸಂಸ್ಥೆಗಳಿಗೆ ರಿಬೇಟ್ ಭರಿಸಲು ಆಯವ್ಯಯದಲ್ಲಿ ನಿಗದಿಪಡಿಸಲಾಗಿದೆ.

**೨ಆ) ವಿಶೇಷ ಘಟಕ ಯೋಜನೆ:**

ಪರಿಶಿಷ್ಟ ಜಾತಿಗೆ ಸೇರಿದ ನಿರುದ್ಯೋಗಿಗಳಿಗೆ ತರಬೇತಿ ನೀಡಿ ಇವರು ಜವಳಿ ಕ್ಷೇತ್ರದ ವಿವಿಧ ಚಟುವಟಿಕೆಗಳಲ್ಲಿ ತೊಡಗಿಸಲು ವಿನೂತನವಾಗಿ ಯೋಜನೆಯನ್ನು ರೂಪಿಸಲಾಗಿರುತ್ತದೆ. ಈ ಯೋಜನೆಯಡಿ ಪರಿಶಿಷ್ಟ ಜಾತಿ ಫಲಾನುಭವಿಗಳಿಗೆ ತರಬೇತಿ, ಕಾರ್ಯಾಗಾರ, ಸಾಮೂಹಿಕ ಸೌಲಭ್ಯ ಕೇಂದ್ರಗಳು, ಸುಧಾರಿತ ಮಗ್ಗ ಮತ್ತು ಸಲಕರಣೆಗಳು, ದುಡಿಮೆ ಬಂಡವಾಳ, ಶೇರು ಬಂಡವಾಳ, ಹೊಸ ಸದಸ್ಯರುಗಳಿಗೆ ಶೇರು, ಮಗ್ಗಪೂರ್ವ ಸೌಲಭ್ಯಗಳು, ಸಂಚಾರಿ ಮಾರುಕಟ್ಟೆ ವಾಹನ ಮುಂತಾದ ಸೌಲಭ್ಯಗಳನ್ನು ಹಮ್ಮಿಕೊಳ್ಳಲಾಗಿದೆ.

ಈ ಯೋಜನೆಯಡಿಯಲ್ಲಿ ೨೦೧೬-೧೭ನೇ ಸಾಲಿನಲ್ಲಿ ರೂ.೨೧೯೮.೮೭ ಲಕ್ಷಗಳನ್ನು ೧೫೭೫ ಪರಿಶಿಷ್ಟ ಜಾತಿ ನಿರುದ್ಯೋಗಿಗಳನ್ನು ನೇಕಾರಿಕೆ ವೃತ್ತಿಯಲ್ಲಿ ತೊಡಗಿಸಲು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಆಯವ್ಯಯ ಒದಗಿಸಲಾಗಿದೆ.

**೨ಇ) ಗಿರಿಜನ ಉಪ ಯೋಜನೆ:**

ಪರಿಶಿಷ್ಟ ಪಂಗಡಕ್ಕೆ ಸೇರಿದ ನಿರುದ್ಯೋಗಿಗಳಿಗೆ ತರಬೇತಿ ನೀಡಿ ಇವರಿಗೆ ಜವಳಿ ಕ್ಷೇತ್ರದ ವಿವಿಧ ಚಟುವಟಿಕೆಗಳಲ್ಲಿ ತೊಡಗಿಸಲು ವಿನೂತನವಾಗಿ ಯೋಜನೆಯನ್ನು ರೂಪಿಸಲಾಗಿದೆ. ಈ ಯೋಜನೆಯಡಿ ಪರಿಶಿಷ್ಟ ಜಾತಿ ಫಲಾನುಭವಿಗಳಿಗೆ ತರಬೇತಿ, ಕಾರ್ಯಾಗಾರ, ಸಾಮೂಹಿಕ ಸೌಲಭ್ಯ ಕೇಂದ್ರಗಳು, ಸುಧಾರಿತ ಮಗ್ಗ ಮತ್ತು ಸಲಕರಣೆಗಳು, ದುಡಿಮೆ ಬಂಡವಾಳ, ಶೇರು ಬಂಡವಾಳ, ಹೊಸ ಸದಸ್ಯರುಗಳಿಗೆ ಶೇರು, ಮಗ್ಗಪೂರ್ವ ಸೌಲಭ್ಯಗಳು, ಸಂಚಾರಿ ಮಾರುಕಟ್ಟೆ ವಾಹನ ಮುಂತಾದ ಸೌಲಭ್ಯಗಳನ್ನು ಹಮ್ಮಿಕೊಳ್ಳಲಾಗಿದೆ.

ಈ ಯೋಜನೆಯಡಿಯಲ್ಲಿ ೨೦೧೬-೧೭ನೇ ಸಾಲಿನಲ್ಲಿ ಗಿರಿಜನ ಉಪಯೋಜನೆ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ರೂ.೮೮೦.೩೩ ಲಕ್ಷಗಳನ್ನು ೨೮೯ ಪರಿಶಿಷ್ಟ ಪಂಗಡದ ನಿರುದ್ಯೋಗಿಗಳನ್ನು ನೇಕಾರಿಕೆ ವೃತ್ತಿಯಲ್ಲಿ ಕಾರ್ಯಕ್ರಮಗಳನ್ನು ಹಮ್ಮಿಕೋಳ್ಳಲು ಆಯವ್ಯಯದಲ್ಲಿ ಒದಗಿಸಲಾಗಿದೆ."[redacted]

**೩. ನೇಕಾರರ ವಿಶೇಷ ಪ್ಯಾಕೇಜ್ ಯೋಜನೆ(ಕೆ.ಎಚ್.ಡಿ.ಸಿ.)**

ನೇಕಾರರ ಅಭಿವೃದ್ಧಿಯಲ್ಲಿ ವಿಶೇಷವಾದ ಯೋಜನೆಯನ್ನು ಹಮ್ಮಿಕೊಳ್ಳಲಾಗಿದೆ.

- ೨೦೧೬-೧೭ನೇ ಸಾಲಿನಲ್ಲಿ ರೂ.೨೪೦೦.೦೦ ಲಕ್ಷಗಳ ಆಯವ್ಯಯ ಒದಗಿಸಲಾಗಿದೆ.
- ರೂ.೧೮೫೩.೦೦ ಲಕ್ಷಗಳನ್ನು ಸಾಮಾನ್ಯ ಕಾರ್ಯಕ್ರಮಗಳು,
- ರೂ.೩೯೧.೦೦ ಲಕ್ಷಗಳನ್ನು ವಿಶೇಷ ಘಟಕ ಯೋಜನೆ ಮತ್ತು
- ರೂ.೧೫೬.೦೦ ಲಕ್ಷಗಳನ್ನು ಗಿರಿಜನ ಉಪಯೋಜನೆ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮಕ್ಕೆ ಒದಗಿಸಲಾಗಿದೆ.

೪. ನೂತನ ಜವಳಿ ನೀತಿ ಅನುಷ್ಠಾನ

ಈ ಜವಳಿ ನೀತಿಯು ೨೦೧೩-೨೦೧೮ರ ವರೆಗೆ ಮುಂದುವರೆಸಿದ್ದಾರೆ. ೨೦೧೬-೧೭ನೇ ಸಾಲಿನಲ್ಲಿ ಕರ್ನಾಟಕದಲ್ಲಿ ರೂ.೭೫೦೦.೦೦ ಲಕ್ಷಗಳನ್ನ ಆಯವ್ಯಯ ಒದಗಿಸಲಾಗಿದ್ದು. ಇದರಲ್ಲಿ

- ರೂ.೩೫೦.೦೦ ಲಕ್ಷಗಳನ್ನ ೫೨೫೦ ಪರಿಶಿಷ್ಟ ಜಾತಿ ಫಲಾನುಭವಿಗಳ,
- ರೂ.೧೫೦.೦೦ ಲಕ್ಷಗಳನ್ನು ೨೨೫೦ ಪರಿಶಿಷ್ಟ ಪಂಗಡದ ಫಲಾನುಭವಿಗಳಿಗೆ ಹಾಗೂ
- ರೂ.೧೦೦೦.೦೦ ಲಕ್ಷಗಳನ್ನು ೧೪೯೦೦ ಸಾಮಾನ್ಯ ವರ್ಗದ ಫಲಾನುಭವಿಗಳಿಗೆ ಸಿದ್ಧ ಉಡುಪು ತರಬೇತಿಗಾಗಿ,
- ರೂ.೧೨೦೦.೦೦ ಲಕ್ಷಗಳನ್ನು ಮೆಗಾ ಪ್ರಾಜೆಕ್ಟ್ ಸ್ಥಾಪನೆಗಾಗಿ ಹಾಗೂ ರೂ.೩೦೦.೦೦ ಲಕ್ಷಗಳನ್ನು ಯೋಜನಾ ನಿರ್ವಹಣಾ ವೆಚ್ಚಕ್ಕಾಗಿ ಆಯವ್ಯಯ ನಿಗದಿಪಡಿಸಿ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿದೆ.

೫. ವಿದ್ಯುತ್‌ಮಗ್ಗ ಸಹಕಾರ ಸಂಘಗಳಿಗೆ ಶೇರು ಬಂಡವಾಳ ಹೂಡಿಕೆ ಯೋಜನೆ

೨೦೧೬-೧೭ನೇ ಸಾಲಿನಲ್ಲಿ ರೂ.೫.೦೦ ಲಕ್ಷಗಳ ಆಯವ್ಯಯ ಒದಗಿಸಿ ಇದನ್ನು ೫ ವಿದ್ಯುತ್‌ಮಗ್ಗ ಸಹಕಾರಿ ಸಂಘಗಳಿಗೆ ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ.

೨೦೧೬-೧೭ನೇ ಸಾಲಿನ (೨೦೧೪-೧೫ನೇ ಸಾಲಿನಲ್ಲಿ ಬಾಕಿ ಇರುವ ವಿಶೇಷ ಘಟಕ ಯೋಜನೆ ರೂ. ೧೭೭೦.೦೦ ಲಕ್ಷ ಹಾಗೂ ಗಿರಿಜನ ಉಪ ಯೋಜನೆ ರೂ.೭೯೪.೦೦ ಲಕ್ಷ) ೨೦೧೩ರ ಸಮಾಜ ಕಲ್ಯಾಣ ಇಲಾಖೆ ಕಾಯ್ದೆಯಡಿ ಬರುವ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ವಸತಿ ನಿಲಯ ಹಾಗೂ ಆಶ್ರಯ ಶಾಲೆಗಳಿಗೆ ಬೆಡಶೀಟ್ ಮತ್ತು ಬ್ಲಾಂಕೆಟ್ ಮತ್ತು ಕಾರ್ಪೆಟ್ ಒದಗಿಸಲಾಗುವುದು. ಎಂದು ಈ ವರ್ಷದ ಯೋಜನೆಗಳ ಸ್ಪಷ್ಟತೆಯನ್ನು ತಿಳಸಲಾಗಿದೆ.

"ರಾಜ್ಯ ವಲಯ ಯೋಜನೆಗಳು

- ಅ) ರಾಷ್ಟ್ರೀಯ ಸಹಕಾರಿ ಅಭಿವೃದ್ಧಿ ನಿಗಮ ಯೋಜನೆ(ಎನ್.ಸಿ.ಡಿ.ಸಿ) ಆ) ನಬಾರ್ಡ ಯೋಜನೆಯಲ್ಲಿ ದುಡಿಯುವ ಬಂಡವಾಳ ಸಾಲ ಯೋಜನೆ ಇ) ಹೊಸವಿನ್ಯಾಸ ಮತ್ತು ಪ್ರವೃತ್ತಿ ಯೋಜನೆ ನೇಕಾರರಿಗೆ ತರಬೇತಿ ಕಾರ್ಯಾಗಾರದಲ್ಲಿ ತರಬೇತಿ. ಈ) ಕೈಮಗ್ಗ ನೇಕಾರರಿಗೆ ರಾಜ್ಯಮಟ್ಟದ ಪ್ರಶಸ್ತಿ ಉ) ಕೈಮಗ್ಗ ನೇಕಾರರಿಗೆ/ಕ್ರಾಪ್ ಮನ್‌ಗಳಿಗೆ ರಾಷ್ಟ್ರಮಟ್ಟದ ಪ್ರಶಸ್ತಿ ಊ) ನೇಕಾರರ ಕಲ್ಯಾಣ ಯೋಜನೆಗಳು(*ಆರೋಗ್ಯ ಯೋಜನೆಗಳು *ನೇಕಾರರ ಅಂತ್ಯ ಸಂಸ್ಕಾರದ ಖರ್ಚು * ಶೈಕ್ಷಣಿಕ ಯೋಜನೆಗಳು)
- ಕೈಮಗ್ಗ ನೇಕಾರರಿಗೆ ಇತರೆ ಯೋಜನೆಗಳು- ಆರೋಗ್ಯ ವಿಮಾ ಯೋಜನೆಗಳು

ಜಿಲ್ಲಾ ವಲಯ ಯೋಜನೆಗಳು

- ಕೈಮಗ್ಗ ಉದ್ದಿಮೆಗಳಿಗೆ ಸಹಾಯ: ಈ ಯೋಜನೆಮೂಲಕ ಅ) ಕೈಮಗ್ಗ ನೇಕಾರಿಕೆ ತರಬೇತಿ ಕಾರ್ಯಾಗಾರವನ್ನು ಹಮ್ಮಿಕೊಳ್ಳುವುದು. ಆ) ಸಾಮೂಹಿಕ ನೇಯ್ಗೆ ಕೆಂದ್ರಗಳ ಸ್ಥಾಪನೆ. ಇ) ಬಣ್ಣದ

ಮನೆಗಳಿಗೆ ಸಹಾಯ ಧನ. ಈ) ವಸತಿ ಕಾಲೋನಿಗಳ ನಿರ್ಮಾಣಕ್ಕೆ ಸಹಾಯ ಉ) ಸುಧಾರಿತ ಮಗ್ಗಗಳು ಮತ್ತು ಉಪಕರಣಗಳನ್ನು ಪೂರೈಕೆ ಮಾಡುವುದು. ಊ)ಆರ್.ಎ.ಪಿ: ಆರ್.ಐ.ಪಿ. ಯೋಜನೆಗಳನ್ನು ಕುಶಲಕರ್ಮಿಗಳ ಸುಧಾರಿತ ಸಹಾಯ ಧನ ಹಾಗು ತರಬೇತಿ ನೀಡುವುದು. ಋ)ಕೈಮಗ್ಗಳ ದುಡಿಮೆ ಬಂಡವಾಳ ಎ)ಹೊಸ ಸದಸ್ಯರಿಗೆ ಶೇರು ಸಾಲದ ವ್ಯವಸ್ಥೆ.

- ಕೈಮಗ್ಗ ನೇಕಾರ ಸಹಕಾರಿ ಸಂಘಗಳಿಗೆ ಸರ್ಕಾರದ ಶೇರು ಬಂಡವಾಳ ಹೂಡಿಕೆ.
- ಕೇಂದ್ರ ಪುರಸ್ಕೃತ ಮಿತವ್ಯೆಯ ನಿಧಿ ಯೋಜನೆ(ಸಹಕಾರ)
- ಕೇಂದ್ರ ವಲಯ ವಸತಿ ಕಾರ್ಯಗಾರ ಯೋಜನೆ ಮುಂತಾದವುಗಳನ್ನು ನೇಕಾರರ ಕಲ್ಯಾಣಕ್ಕಾಗಿ ಯೋಜನೆಗಳನ್ನು ಅನಿಷ್ಠಾನ ಮಾಡಿದ್ದಾರೆ. ಆದರೆ ಸರಿಯಾದ ಫಲಾನುಭವಿಗಳಿಗೆ ಸದುಪಯೋಗವಾಗಬೇಕಾಗಿದೆ."

### ೩.೪. ನೇಕಾರ ಸಹಕಾರ ಸಂಘಗಳ ಸ್ವಯಂ ಕಾರ್ಯಕ್ರಮಗಳು

ನೇಕಾರರ ಅಭಿವೃದ್ಧಿಗೆ ಮೂಲ ಮಂತ್ರದೊಂದಿಗೆ ರಚಿಸಿರುವ ಈ ನೇಕಾರ ಸಹಕಾರಿ ಸಂಘಗಳು ನೇಕಾರರ ಅಭಿವೃದ್ಧಿಗೆ ಹಲವಾರು ಸ್ವಯಂ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿವೆ. ನೇಕಾರರ ಸಾಮಾಜಿಕ ಅಂತಸ್ತು, ಆರ್ಥಿಕ ಸುಧಾರಣೆ, ತುರ್ತು ನಿಘಾಕಾರ್ಯಗಳು, ಶೈಕ್ಷಣಿಕ ಸೌಲತ್ತು, ಆರೋಗ್ಯ ಸೇವೆ, ಕೌಶಲ್ಯ ತರಬೇತಿ, ಮಾರುಕಟ್ಟೆ ತರಬೇತಿ ಮುಂತಾದ ಸ್ವಯಂ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದ್ದಾರೆ. ಅಭಿವೃದ್ಧಿ ಹೊಂದಿರುವ ನೇಕಾರ ಸಹಕಾರಿ ಸಂಘಗಳು ಸಾಮಾಜಿಕ ಕಳಕಳಿಯ ಕಾರ್ಯಕ್ರಮಗಳನ್ನು ಆರೋಗ್ಯ, ಶೈಕ್ಷಣಿಕ ಹಾಗೂ ಮನರಂಜನಾ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ. ಈ ಕೆಳಗಿನ ರೀತಿಯಲ್ಲಿ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ.

**೧) ನೇಕಾರರ ಮಕ್ಕಳಿಗೆ ಶಿಕ್ಷಣಕ್ಕೆ ಪ್ರೋತ್ಸಾಹ ಧನ**

ನೇಕಾರ ಮಕ್ಕಳಿಗೆ ಶಿಕ್ಷಣವನ್ನು ಮುಂದುವರೆಸಿಕೊಂಡು ಹೋಗಲು ಈ ಯೋಜನೆಯನ್ನು ಹಮ್ಮಿಕೊಂಡಿದ್ದಾರೆ. ಈ ಯೋಜನೆಯಿಂದ ಬಡ ನೇಕಾರ ಮಕ್ಕಳಿಗೆ ಉಪಯೋಗವಿದೆ. ಈ ಯೋಜನೆಯು ನೇಕಾರ ಸಹಕಾರಿ ಸಂಘಗಳಲ್ಲಿ ಶೇರುದಾರ ನೇಕಾರ ಕುಟುಂದಲ್ಲಿಯ ಮಕ್ಕಳು ಅರ್ಹರಿರುತ್ತಾರೆ. ಈ ನೇಕಾರ ಮಕ್ಕಳು ಎಸ್.ಎಸ್.ಎಲ್.ಸಿ.ಯಲ್ಲಿ ಉತ್ತೀರ್ಣರಾದ ನಂತರ ಅವರ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಕುಟುಂಬದ ಮಕ್ಕಳಿಗೆ ೨೦೦೦ ರೂ. ಸಹಾಯ ಧನ ನೀಡುವರು. ಅದಲ್ಲದೆ ತಾಂತ್ರಿಕ ಶಿಕ್ಷಣಕ್ಕಾಗಿ ಹೆಚ್ಚಿನ ಸಹಾಯ ಧನ ನೀಡುವರು.

**೨) ಸಂಘದ ಲಾಭಾಂಶದ ಹಣದಲ್ಲಿ ಡಿವ್ಹಿಡೆಂಟ್**

ನೇಕಾರ ಸಹಕಾರಿ ಸಂಘಗಳಲ್ಲಿ ವಾರ್ಷಿಕ ಲಾಭಾಂಶವನ್ನು ಪಡೆದಂತ ಸಂಘಗಳು ಅಥವಾ ಸಂಘದ ವ್ಯವಹಾರದಲ್ಲಿ ಲಾಭಾವಾದರೆ ಅದರಲ್ಲಿ ನೇಕಾರರಿಗೆ ಬೋನಸ್ ಹಾಗೂ ಡಿವ್ಹಿಡೆಂಟ್ ರೂಪದಲ್ಲಿ ಲಾಭಾಂಶದ ಹಣ ಎಲ್ಲ ಶೇರುದಾರ ನೇಕಾರರಿಗೆ ಸಮನಾಗಿ ಹಂಚಲಾಗುತ್ತದೆ.

**೩) ಆರೋಗ್ಯ ಹಾಗೂ ನೈರ್ಮಲ್ಯ ಕಾರ್ಯಕ್ರಮಗಳು**

ನೇಕಾರಿ ಸಹಕಾರಿ ಸಂಘಗಳು ತಮ್ಮ ನೇಕಾರರನ್ನೂ ಹೊರತು ಪಡಿಸಿ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದಾರೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ನೇತ್ರ ತಪಸಣಾ ಶಿಬಿರ, ಆರೋಗ್ಯ ಶಿಬಿರ, ನಗರದ ಹಾಗೂ ಗ್ರಾಮೀಣ ಜನರಿಗೆ ನೈರ್ಮಲ್ಯ ಕುರಿತು ಜನಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿವೆ.

**೪) ನೇಕಾರರಿಗೆ ಶಿಕ್ಷಣ ಹಾಗೂ ತರಬೇತಿ**

ನೇಕಾರರಿಗೆ ಆಧುನಿಕ ವಿನ್ಯಾಸಗಳ ಕುರಿತು ತರಬೇತಿ, ಹೊಸ ಹೊಸ ಮಗ್ಗಗಳ ನೇಯುವ ತರಬೇತಿ, ಮಾರಾಟದ ತರಬೇತಿ, ಹೊಸ ಆಧುನಿಕ ಮಗ್ಗವನ್ನು ಕೂಡಿಸುವ(ಇನ್‌ಸ್ಟಾಲೇಶನ್) ಕುರಿತು ತರಬೇತಿಗಳನ್ನು ಸಂಘಗಳಲ್ಲಿ ಹಮ್ಮಿಕೊಳ್ಳುತ್ತಾರೆ. ಇದರಿಂದ ಯುವಕರನ್ನು ನೇಕಾರಿಕೆಯತ್ತ ಸೆಳೆಯಬಹುದಾಗಿದೆ.

**೫) ನೇಕಾರರ ಮರಣೋತ್ತರದ ನಂತರದ ನಿಧಿ**

ನೇಕಾರ ಸದಸ್ಯರು ಮರಣ ಹೊಂದಿದರೆ ಅವರ ಅಂತ್ಯ ಸಂಸ್ಕಾರಕ್ಕೆ ರೂ.೧೫೦೦ ರಿಂದ ೨೦೦೦ಗಳ ವರೆಗೂ ಧನ ಸಹಾಯ ಹಾಗೂ ಮರಣೋತ್ತರ ನಿಧಿ ಯೋಜನೆಯಲ್ಲಿ ಭಾಗಿಯಾದ ಸದಸ್ಯರುಗಳಿಗೆ ರೂ.೫೦೦೦ ಗಳನ್ನು ಅವರ ಕುಟುಂಬಕ್ಕೆ ನೀಡಲಾಗುವುದು.

೬) **ಬ್ಯಾಂಕುಗಳಿಂದ ೩% ಬಡ್ಡಿ** ದರದಲ್ಲಿ ನೇಕಾರರಿಗೆ ಸಾಲವನ್ನು ಒದಗಿಸುವುದು.

## ೩.೫. ನೇಕಾರರ ಅಭಿವೃದ್ಧಿಯಲ್ಲಿ ಸಹಕಾರಿ ಸಂಘಗಳ ಪಾತ್ರ ಮತ್ತು ಸ್ಥಿತಿ

ಪ್ರಜಾಪ್ರಭುತ್ವದ ನೆಲೆಯಲ್ಲಿ ನಿರ್ಮಾಣವಾಗಿರುವ ಈ ಸಹಕಾರಿ ಸಂಘಗಳು ಸಹಕಾರಿ ತತ್ವಗಳನ್ನು ಪಾಲಿಸುತ್ತ ಸಾಗುತ್ತಲಿವೆ. ಪರಸ್ಪರ ನೇಕಾರರು ತಮ್ಮ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಹಾಗೂ ಇನ್ನಿತರರ ಬೆಳವಣಿಗೆಯನ್ನು ಕಾಣಲು ನಿರಂತರ ನೇಕಾರಿಕೆ ಉತ್ಪಾದನೆಯ ಹೆಚ್ಚಳದೊಂದಿಗೆ ಶ್ರಮಿಸುತ್ತಿವೆ. ಈ ನೇಕಾರರನ್ನು ಒಳಗೊಂಡಿರುವ ಸಂಘಗಳ ವಾಸ್ಥವದ ಬಗ್ಗೆ ಹಾಗೂ ನೇಕಾರರ ಅಭಿವೃದ್ಧಿಯಲ್ಲಿ ತನ್ನ ಸ್ಥಾನವನ್ನು ಹೇಗೆ ಮುಂದುವರೆಸಿದೆ ಎಂಬುವುದು ಮುಖ್ಯವಾಗಿರುತ್ತದೆ. ನೇಕಾರರು ನಿರಂತರವಾಗಿ ಮುಂದುವರೆಯಲು ಆಡಳಿತ ವ್ಯವಸ್ಥೆ, ನೇಕಾರ ಶೇರುದಾರ ಭಾಗವಹಿಸುವಿಕೆ, ಬಂಡವಾಳದ ವ್ಯವಸ್ಥೆ, ದುಡಿಯುವ ಬಂಡವಾಳ, ಮಾರುಕಟ್ಟೆ, ಉತ್ಪಾದನ ಉತ್ಪನ್ನಗಳು ಮುಖ್ಯವಾಗಿರುತ್ತವೆ. ಸರಕಾರಿ ಸೌಲಭ್ಯಗಳ

ಸದುಪಯೋಗ, ಸಂಘಗಳ ಮೂಲಸೌಕರ್ಯಗಳು, ಇತರೆ ಸಂಘಗಳ ಜೊತೆಯಲ್ಲಿನ ಬಾಂಧವ್ಯ, ಇವುಗಳ ವಿಶ್ಲೇಷಣೆಯಿಂದ ಸಹಕಾರಿ ಸಂಘಗಳು ತಮ್ಮ ಕಾರ್ಯವನ್ನು ಹೇಗೆ ಮುಂದುವರೆಸಿಕೊಂಡು ಸಾಗುತ್ತಲಿವೆ ಎಂಬುವುದು ಕಂಡುಕೊಳ್ಳಬಹುದಾಗಿದೆ.

**ಮೂಲ ಸೌಕರ್ಯಗಳು:** ನೇಕಾರರ ಸಂಘಗಳಿಗೆ ಮುಖ್ಯ ಅವಶ್ಯವಾಗಿರುವುದು ಮೂಲ ಸೌಕರ್ಯಗಳಾದ ಸ್ವಂತ ಕಟ್ಟಡ, ಸಮೂಹ ನೇಕಾರ ಮನೆಗಳು, ಕಚ್ಚಾ ವಸ್ತುಗಳ ಸಂಗ್ರಹ, ಬಣ್ಣದ ಮನೆ, ಶುದ್ಧ ಬಟ್ಟೆಗಳ ಸಂಗ್ರಹಾಲಯ, ಮಾರಾಟ ಮಳಿಗೆಗಳು, ನೇಕಾರರ ಮನೆಗಳು ಮುಂತಾದ ಮೂಲಸೌಕರ್ಯಗಳನ್ನು ಹೊಂದಿರುತ್ತವೆ. ಈ ನೇಕಾರರ ಅಭಿವೃದ್ಧಿಗೆ ಸಹಕಾರಿ ಸಂಘಗಳು ಇಂತಹ ಮೂಲಭೂತ ಸೌಕರ್ಯಗಳನ್ನು ಹೊಂದಿದ್ದರೆ ಆ ಸಂಘಗಳು ಅಭಿವೃದ್ಧಿ ಹೊಂದುತ್ತವೆ. ಅಧ್ಯಯನದಲ್ಲಿ ಈ ಎಲ್ಲ ಮೂಲಸೌಕರ್ಯಗಳನ್ನು ಹೊಂದಿರುವ ನೇಕಾರ ಸಹಕಾರಿ ಸಂಘಗಳಲ್ಲಿ ಒಂದೇ ಒಂದು ಸಂಘವು ಹೊಂದಿದೆ ಹಾಗೂ ಅದು ಅಭಿವೃದ್ಧಿಯ ಹಾದಿಯಲ್ಲಿ ಸಾಗುತ್ತಲಿದೆ. ಇತರೆ ನೇಕಾರ ಸಂಘಗಳು ಮೂಲ ಸೌಕರ್ಯಗಳನ್ನು ಕಡಿಮೆ ಹೊಂದಿದ್ದರೂ ಸಹ ನೇಕಾರರ ಶ್ರಮಕ್ಕೆ ದುಡಿಯುತ್ತಲಿವೆ ಎಂಬುದು ಕಂಡುಬರುತ್ತವೆ.

ಕೋಷ್ಟಕ-೪.೧

ನೇಕಾರರ ಸಹಕಾರಿ ಸಂಘಗಳ ಮೂಲ ಸೌಕರ್ಯಗಳು

| ಅ.ನಂ | ಮೂಲ ಸೌಕರ್ಯಗಳು | ಹೊಂದಿದೆ | ಹೊಂದಿಲ್ಲ | ಒಟ್ಟು |
|---|---|---|---|---|
| ೧ | ಕಛೇರಿ | ೮ | ೨ | ೧೦ |
| ೨ | ನೇಕಾರ ಭಾವಣಿ | ೬ | ೪ | ೧೦ |
| ೩ | ಉಗ್ರಾಣ | ೫ | ೫ | ೧೦ |
| ೪ | ಮಳಿಗೆ | ೨ | ೮ | ೧೦ |
| ೫ | ಬಣ್ಣದ ಘಟಕ | ೧ | ೯ | ೧೦ |
| ೬ | ಇತರೆ ಮಳಿಗೆ | ೨ | ೮ | ೧೦ |
| ೭ | ಭೂಮಿ | ೭ | ೩ | ೧೦ |
| ೮ | ವಾಹನಗಳು | ೩ | ೭ | ೧೦ |

*ಮೂಲ : ಕ್ಷೇತ್ರಕಾರ್ಯ ಅಧ್ಯಯನದ ವರದಿ ಪ್ರಕಾರ



**ಆರ್ಥಿಕವಾಗಿ ಸಹಕಾರಿ ಸಂಘಗಳು:** ನೇಕಾರರ ಸಹಕಾರಿ ಸಂಘಗಳ ಮೂಲ ಬಂಡವಾಳ ಇರುವುದು ನೇಕಾರರ ಶೇರುಬಂಡವಾಳ ಹಾಗೂ ಅವರ ದುಡಿಮೆ. ಈ ಬಂಡವಾಳವು ನೇಕಾರರ ಸಂಘಗಳ ಅಡಿಪಾಯವಿದ್ದಂತೆ. ಇಲ್ಲಿ ನೇಕಾರರ ವಾರ್ಷಿಕ ಉತ್ಪಾದನೆ, ಉತ್ಪಾದನೆಗೆ ತಗುಲಿದ ವೈಚ್ಚ, ಉಳಿತಾದ ಹಣ. ಇವುಗಳನ್ನು ನೋಡಿದಾಗ ಸಂಘಗಳ ಆರ್ಥಿಕ ಸ್ಥಿತಿಯನ್ನು ಹಾಗೂ ನೇಕಾರರಿಗೆ ನೀಡುವಂತ ಶ್ರಮ ವೇತನವು ತಿಳಿಯುತ್ತದೆ. ಶೇರುದಾರರು ಇಲ್ಲಿ ಉತ್ಪಾದನೆ ಕ್ರಿಯೆಗೆ ಪಾಲುದಾರರು.

**ಕೋಷ್ಟಕ–೪.೨**

**ನೇಕಾರರ ಸಹಕಾರಿ ಸಂಘಗಳಲ್ಲಿಯ ಶೇರುದಾರ ನೇಕಾರ ಬಾಂಧವರು**

| ಅ.ನಂ | ನೇಕಾರ ಸಹಕಾರಿ ಸಂಘಗಳ ಹೆಸರು | ಒಟ್ಟು ಶೇರುದಾರರು |
|---|---|---|
| ೧ | ಶ್ರೀ ಶಾಖಾಂಬರಿ ನೇಕಾರ ಸಹಕಾರಿ ಸಂಘ, ಸೂಳಿಭಾವಿ | ೧೭೫೨ |
| ೨ | ಶ್ರೀ ಚಾಮುಂಡೇಶ್ವರಿ ಕೈಮಗ್ಗ ನೇ. ಸ. ಸಂಘ. ಕಮತಗಿ | ೩೧೭ |
| ೩ | ಶ್ರೀ ಪಾರ್ವತಿ ಪರಮೇಶ್ವರ ಕೈ. ನೇ. ಸ. ಸಂಘ. ಕಮತಗಿ | ೧೦೦೬ |
| ೪ | ಪ್ರಾಥಮಿಕ ಕೈಮಗ್ಗ. ನೇ. ಸ. ಸಂಘ. ಕಮತಗಿ | ೪೧೨ |
| ೫ | ಶ್ರೀ ದಾನೇಶ್ವರಿ ಪ್ರಾಥಮಿಕ ಕೈ. ನೇ. ಸ. ಸಂಘ. ಕಮತಗಿ | ೨೦೦ |
| ೬ | ಶ್ರೀ ಹುಚ್ಚೇಶ್ವರ ಕೈ. ನೇ. ಸ. ಸಂಘ. ಕಮತಗಿ | ೪೧೦ |
| ೭ | ಶ್ರೀ ಜಯಶ್ರೀ ಕೈಮಗ್ಗ. ನೇ. ಸ. ಸಂಘ. ಅಮೀನಗಡ | ೬೮೮ |
| ೮ | ಶ್ರೀ ಶಿವಪ್ಪಯ್ಯ ಕೈ. ನೇ. ಸ. ಸಂಘ. ಗುಳೇದಗುಡ್ಡ | ೫೧೨ |
| ೯ | ಶ್ರೀ ಮೂಕೇಶ್ವರಿ ಕೈ. ನೇ. ಸ. ಸಂಘ. ಗುಳೇದಗುಡ್ಡ | ೨೬೬ |
| ೧೦ | ಶ್ರೀ ಮಾರ್ಕಂಡೇಶ್ವರ ಕೈ. ನೇ. ಸ. ಸಂಘ. ಗುಳೇದಗುಡ್ಡ | ೨೩೬ |
| | **ಒಟ್ಟು** | **೫೭೯೯** |

*ಮೂಲ : ಕ್ಷೇತ್ರಕಾರ್ಯ ಅಧ್ಯಯನದ ವರದಿ ಪ್ರಕಾರ

**ಕೋಷ್ಟಕ–೪.೩**

**ನೇಕಾರರ ಸಹಕಾರಿ ಸಂಘಗಳಲ್ಲಿಯ ತಲಾ ಸಂಘಗಳ ವಾರ್ಷಿಕ ಬಂಡವಾಳ(ಅಂದಾಜು)**

| ಅ.ನಂ | ನೇಕಾರ ಸಹಕಾರಿ ಸಂಘಗಳ ಹೆಸರು | ತಲಾ ವಾರ್ಷಿಕ ಬಂಡವಾಳ |
|---|---|---|
| ೧ | ಶ್ರೀ ಶಾಖಾಂಬರಿ ನೇಕಾರ ಸಹಕಾರಿ ಸಂಘ, ಸೂಳಿಭಾವಿ | ೧೫,೦೦೦,೦೦೦ |
| ೨ | ಶ್ರೀ ಚಾಮುಂಡೇಶ್ವರಿ ಕೈಮಗ್ಗ ನೇ, ಸ, ಸಂಘ. ಕಮತಗಿ | ೧೦,೦೦೦,೦೦೦ |
| ೩ | ಶ್ರೀ ಪಾರ್ವತಿ ಪರಮೇಶ್ವರ ಕೈ, ನೇ, ಸ, ಸಂಘ, ಕಮತಗಿ | ೧,೮೦೦,೦೦೦ |
| ೪ | ಪ್ರಾಥಮಿಕ ಕೈಮಗ್ಗ, ನೇ, ಸ, ಸಂಘ, ಕಮತಗಿ | ೧,೦,೦೦೦೦೦ |
| ೫ | ಶ್ರೀ ದಾನೇಶ್ವರಿ ಪ್ರಾಥಮಿಕ ಕೈ, ನೇ, ಸ, ಸಂಘ, ಕಮತಗಿ | ೨೦೦,೦೦೦ |
| ೬ | ಶ್ರೀ ಹುಚ್ಚೇಶ್ವರ ಕೈ, ನೇ, ಸ, ಸಂಘ, ಕಮತಗಿ | ೧,೯೦೦,೦೦೦ |
| ೭ | ಶ್ರೀ ಜಯಶ್ರೀ ಕೈಮಗ್ಗ, ನೇ, ಸ, ಸಂಘ, ಅಮೀನಗಡ | ೧,೪೦೦,೦೦೦ |
| ೮ | ಶ್ರೀ ಶಿವಪ್ಪಯ್ಯ ಕೈ, ನೇ, ಸ, ಸಂಘ, ಗುಳೇದಗುಡ್ಡ | ೧,೦೦೦,೦೦೦ |
| ೯ | ಶ್ರೀ ಮೂಕೇಶ್ವರಿ ಕೈ, ನೇ, ಸ, ಸಂಘ, ಗುಳೇದಗುಡ್ಡ | ೧೫೦,೦೦೦ |
| ೧೦ | ಶ್ರೀ ಮಾರ್ಕಂಡೇಶ್ವರ ಕೈ, ನೇ, ಸ, ಸಂಘ, ಗುಳೇದಗುಡ್ಡ | ೩೦೦,೦೦೦ |
| | **ಒಟ್ಟು** | **೩೧,೭೫೦,೦೦೦** |

*ಮೂಲ : ಕ್ಷೇತ್ರಕಾರ್ಯ ಅಧ್ಯಯನದ ವರದಿ ಪ್ರಕಾರ

ಉತ್ಪಾದನೆಯಲ್ಲಿ ತೊಡಗಿರುವ ನೇಕಾರರಿಗೆ ಕಚ್ಚಾ ಮಾಲನ್ನು ನೀಡುವುದು, ವೇತನ, ಬಾಕಿ, ತುರ್ತು ಸಂದರ್ಭಲ್ಲಿನ ಆರ್ಥಿಕ ನೆರವು ನೀಡಲು ಸಂಘಗಳಲ್ಲಿ ಹೇರಳವಾದ ಬಂಡವಾಳ ಹೊಂದಿಬೇಕಾಗುವುದು. ಬಂಡವಾಳ ಹಾಗೂ ಅದರೊಂದಿಗೆ ಉತ್ಪಾದನಾ ಕ್ರಿಯೆಯು ಮತ್ತು ಮಾರಾಟದ ವ್ಯವಸ್ಥೆಯು ನಿರಂತರ ಸಾಗುತ್ತಿದ್ದರೆ. ಸಹಕಾರಿ ಸಂಘಗಳು ಉತ್ತಮ ಸ್ಥಿತಿಯಲ್ಲಿ ಕಂಡುಬರುತ್ತವೆ. ಇಲ್ಲಿಯ ಸಹಕಾರಿ ಸಂಘಗಳು ಅತಿಯಾದ ಆರ್ಥಿಕವಾಗಿ ಬಂಡವಾಳದ ಕೊರತೆಯನ್ನು ಹೊಂದಿವೆ. ಕೇವಲ ಬೆರಳೆಣಿಕೆಯಷ್ಟೇ ಸಂಘಗಳಲ್ಲಿ ಬಂಡವಾಳವನ್ನು ಹೆಚ್ಚು ಹೊಂದಿರುವುದು ಕಂಡುಬರುತ್ತದೆ.

**ನೇಕಾರಿಕೆಯಲ್ಲಿ ಲಿಂಗ ಸಂವೇದನೆ ಮತ್ತು ಮಹಿಳಾ ಸ್ಥಾನ:** ನೇಕಾರಿಕೆ ಎಂಬುವುದು ಪುರುಷ ಹಾಗೂ ಮಹಿಳೆ ಭೇದಭಾವ ವಿಲ್ಲದೆ ಕೂಡಿಕೊಂಡು ನೇಕಾರಿಕೆಯನ್ನು ಮಾಡುತ್ತಾರೆ. ಮಹಿಳೆಯರಿಗೆ ಈ ಸಹಕಾರಿ ಸಂಘಗಳಲ್ಲಿ ಶೇರುದಾರಿಕೆ ಪ್ರಮಾಣವು ಮುಖ್ಯವಾಗಿರುತ್ತದೆ. ಇಂದು ಮಹಿಳೆ ಎಲ್ಲ ರಂಗಗಳಲ್ಲಿ ತನ್ನ ಸ್ಥಾನವನ್ನು ಹೊಂದಿದ್ದು. ಈ ನೇಕಾರಿಕೆಯ ಕೆಲಸಗಳಲ್ಲಿಯೂ ಮಹಿಳೆಯರು ಕುಟುಂಬದೊಂದಿಗೆ ಕೆಲಸ ಮಾಡುತ್ತಿದ್ದಾರೆ.

**ಕೋಷ್ಟಕ–೪.೪**

**ನೇಕಾರರ ಸಹಕಾರಿ ಸಂಘಗಳಲ್ಲಿಯ ಶೇರುದಾರ ನೇಕಾರರ ಲಿಂಗಾನುಪಾತ ಸರಾಸರಿ**

| ಅ.ನಂ | ನೇಕಾರ ಸಹಕಾರಿ ಸಂಘಗಳ ಹೆಸರು | ಪುರುಷರು | ಮಹಿಳೆಯರು |
|---|---|---|---|
| ೧ | ಶ್ರೀ ಶಾಖಾಂಬರಿ ನೇಕಾರ ಸಹಕಾರಿ ಸಂಘ, ಸೂಳಿಭಾವಿ | ೧೧೩೨ | ೬೨೦ |
| ೨ | ಶ್ರೀ ಚಾಮುಂಡೇಶ್ವರಿ ಕೈಮಗ್ಗ ನೇ, ಸ, ಸಂಘ. ಕಮತಗಿ | ೨೦೫ | ೧೧೨ |
| ೩ | ಶ್ರೀ ಪಾರ್ವತಿ ಪರಮೇಶ್ವರ ಕೈ, ನೇ, ಸ, ಸಂಘ, ಕಮತಗಿ | ೫೧೯ | ೪೮೭ |
| ೪ | ಪ್ರಾಥಮಿಕ ಕೈಮಗ್ಗ, ನೇ, ಸ, ಸಂಘ, ಕಮತಗಿ | ೨೯೮ | ೧೧೪ |
| ೫ | ಶ್ರೀ ದಾನೇಶ್ವರಿ ಪ್ರಾಥಮಿಕ ಕೈ, ನೇ, ಸ, ಸಂಘ, ಕಮತಗಿ | ೧೪೦ | ೬೦ |
| ೬ | ಶ್ರೀ ಹುಚ್ಚೇಶ್ವರ ಕೈ, ನೇ, ಸ, ಸಂಘ, ಕಮತಗಿ | ೨೫೦ | ೧೬೦ |
| ೭ | ಶ್ರೀ ಜಯಶ್ರೀ ಕೈಮಗ್ಗ, ನೇ, ಸ, ಸಂಘ, ಅಮೀನಗಡ | ೩೪೮ | ೩೪೦ |
| ೮ | ಶ್ರೀ ಶಿವಪ್ಪಯ್ಯ ಕೈ, ನೇ, ಸ, ಸಂಘ, ಗುಳೇದಗುಡ್ಡ | ೩೦೨ | ೨೧೦ |
| ೯ | ಶ್ರೀ ಮೂಕೇಶ್ವರಿ ಕೈ, ನೇ, ಸ, ಸಂಘ, ಗುಳೇದಗುಡ್ಡ | ೧೬೬ | ೧೦೦ |
| ೧೦ | ಶ್ರೀ ಮಾರ್ಕಂಡೇಶ್ವರ ಕೈ, ನೇ, ಸ, ಸಂಘ, ಗುಳೇದಗುಡ್ಡ | ೧೮೯ | ೪೭ |
| | ಒಟ್ಟು | ೩೫೪೯ | ೨೨೫೦ |

*ಮೂಲ : ಕ್ಷೇತ್ರಕಾರ್ಯ ಅಧ್ಯಯನದ ವರದಿ ಪ್ರಕಾರ

ಸಹಕಾರಿ ಸಂಘಗಳಲ್ಲಿಯೂ ಮಹಿಳೆಯರ ಸ್ಥಾನವು ಮುಖ್ಯವಾಗಿರುವುದರಿಂದ ಮಹಿಳೆಯರ ಹೆಸರಿನಲ್ಲಿ ಶೇರುಗಳೊಂದಿಗೆ ಸಹಕಾರಿ ಕ್ಷೇತ್ರದಲ್ಲಿ ಸ್ಥಾನವು ಪಡೆದಿದ್ದಾರೆ. ಕರಕುಶಲತೆಯಲ್ಲಿ, ನಾಜೂಕಿನ ಕೆಲಸಗಳಲ್ಲಿ ಮಹಿಳೆಯು ತನ್ನ ಸ್ಥಾನವನ್ನು ಪಡೆದುಕೊಂಡಿದ್ದಾಳೆ. ಮಹಿಳೆಯರು ನೇಕಾರಿಕೆಯ ಕುಟುಂಬದ ಆದಾಯದ ಮೂಲವಾಗಿದ್ದಳು ಅದನ್ನು ಪರಿಗಣಿಸಲಾಗುತ್ತಿರಲಿಲ್ಲ ಎಂಬುವುದು ವಿಷಾದನೀಯವಾಗಿದೆ. ಸಹಕಾರಿ ಸಂಘಗಳಲ್ಲಿ, ನೇಕಾರಿಕೆಯಲ್ಲಿ ಮಹಿಳೆಯರ ಪಾತ್ರ ಅತಿ ಮುಖ್ಯವಾದದ್ದು. ಪುರುಷರು ಹೆಚ್ಚಾಗಿ ನೇಕಾರಿಕೆಯನ್ನು ಮಾತ್ರ ಮಾಡಿದರೆ, ಮಹಿಳೆಯರು ಹಣಗಿ ಕೆಚ್ಚುವ, ಅಣಿ ಹಾಕುವ, ಉಂಕಿ ಹೂಡುವ, ಉಂಕಿ

ಸುತ್ತುವ ಕೆಲಸಗಳನ್ನಲ್ಲದೆ ನೇಕಾರಿಕೆಯನ್ನು ಮಾಡುತ್ತಿರುತ್ತಾಳೆ. ಆದ್ದರಿಂದ ಈ ಕ್ಷೇತ್ರದಲ್ಲಿ ಮಹಿಳೆಗೆ ಹೆಚ್ಚಿನ ಸ್ಥಾನ ನೀಡಿದ್ದಾರೆ. ಈ ಅಂಕಿಅಂಶಗಳು ಸಂಘಗಳು ಉತ್ತಮ ಸ್ಥಿತಿಯಲ್ಲಿದ್ದರು ಮಹಿಳೆಗೆ ಉನ್ನತ ಸ್ಥಾನವನ್ನು ನೀಡಿರುವುದು ವಿರಳವಾಗಿವೆ. ಎರಡರಿಂದ ಮೂರು ಸಹಕಾರಿ ಸಂಘಗಳಲ್ಲಿ ಮಹಿಳೆಯರಿಗೆ ಹೆಚ್ಚಿನ ಶೇರುಗಳನ್ನು ನೀಡಿ ಅವರ ಅಭಿವೃದ್ಧಿಗೆ ಸಹಕರಿಸುತ್ತಿವೆ. ನೇಕಾರಿಕೆಯ ಎಲ್ಲ ಕ್ಷೇತ್ರಗಳಲ್ಲಿ ಮಹಿಳೆಯರ ಪಾತ್ರ ಮುಖ್ಯವಾಗಿರುವುದರಿಂದ ಮಹಿಳೆಯರಿಗೆ ಆಡಳಿತ ಕ್ಷೇತ್ರದವರೆಗೂ ಅವಕಾಶ ಕೊಡುವುದು ಕಡಿಮೆ ಪ್ರಮಾಣದಲ್ಲಿರುವುದು ಕಂಡುಬರುತ್ತಿದೆ. ಆದ್ದರಿಂದ ಮಹಿಳೆಯರಿಗೂ ಉನ್ನತಸ್ಥಾನ ಕೊಡುವುದರಲ್ಲಿ ಸಂಘಗಳ ಪಾತ್ರ ಮುಖ್ಯವಾಗಿರುತ್ತದೆ.

**ನೇಕಾರ ಸಹಕಾರಿ ಸಂಘಗಳ ಮಾನವ ಸಂಪನ್ಮೂಲ:** ಸಹಕಾರಿ ಸಂಘಗಳಲ್ಲಿ ಕೈಮಗ್ಗದಲ್ಲಿ ದುಡಿಯುವ ನೇಕಾರರು, ಸಂಘದ ಸದಸ್ಯರು, ಆಡಳಿತ ಸದಸ್ಯರು, ಮುಖ್ಯ ಕಾರ್ಯನಿರ್ವಾಹಕರು, ಇತರೆ ಸಿಬ್ಬಂದಿಗಳು ಈ ಸಂಘದ ಮೂಲ ಮಾನವ ಸಂಪನ್ಮೂಲವಾಗಿರುತ್ತಾರೆ. ಇವರನ್ನು ಹೊರತು ಪಡಿಸಿ ಸಹಕಾರಿ ಸಂಘದ ಸದಸ್ಯರಿಲ್ಲದ್ದಿದ್ದರು ನೇಕಾರರ ಕುಟುಂಬದಲ್ಲಿ ನೇಕಾರಿಕೆಗೆ ಸಹಾಯ ಮಾಡುವಂತ ಮಹಿಳೆಯರು, ಮಕ್ಕಳು ಹಾಗೂ ಯುವಕರು ಮತ್ತು ಹಿರಿಯರು ಈ ಸಂಘದ ಮಾನವ ಸಂಪನ್ಮೂಲಗಳಾಗಿ ಪರಿಗಣಿಸಲಾಗುತ್ತದೆ.

**ಕೋಷ್ಟಕ–೪.೫**

**ನೇಕಾರರ ಸಹಕಾರಿ ಸಂಘಗಳಲ್ಲಿಯ ಶೇರುದಾರ ದುಡಿಯುವ ಮಾನವ ಸಂಪನ್ಮೂಲ (ನೇಕಾರರು)**

| ಅ.ನಂ | ನೇಕಾರ ಸಹಕಾರಿ ಸಂಘಗಳ ಹೆಸರು | ಒಟ್ಟು ಶೇರುದಾರರು | ದುಡಿಯುವ ಮಾನವ ಸಂಪನ್ಮೂಲ (ನೇಕಾರರು) | ಸಂಘದಲ್ಲಿಯ ಒಟ್ಟು ಶೇಕಡಾ ಮಾನವ ಸಂಪತ್ತು |
|---|---|---|---|---|
| | | | ದುಡಿಯುವ ನೇಕಾರರು | % |
| ೧ | ಶ್ರೀ ಶಾಖಾಂಬರಿ ನೇಕಾರ ಸಹಕಾರಿ ಸಂಘ, ಸೂಳಿಭಾವಿ | ೧೭೫೨ | ೮೯೦ | ೫೦.೮ |
| ೨ | ಶ್ರೀ ಚಾಮುಂಡೇಶ್ವರಿ ಕೈಮಗ್ಗ ನೇ, ಸ, ಸಂಘ. ಕಮತಗಿ | ೩೧೭ | ೮೩ | ೨೬.೧೮ |
| ೩ | ಶ್ರೀ ಪಾರ್ವತಿ ಪರಮೇಶ್ವರ ಕೈ, ನೇ, ಸ, ಸಂಘ, ಕಮತಗಿ | ೧೦೦೬ | ೭೦ | ೬.೯೫ |
| ೪ | ಪ್ರಾಥಮಿಕ ಕೈಮಗ್ಗ, ನೇ, ಸ, ಸಂಘ, ಕಮತಗಿ | ೪೧೨ | ೨೦೦ | ೪೮.೫೪ |
| ೫ | ಶ್ರೀ ದಾನೇಶ್ವರಿ ಪ್ರಾಥಮಿಕ ಕೈ, ನೇ, ಸ, ಸಂಘ, ಕಮತಗಿ | ೨೦೦ | ೧೫೦ | ೭೫ |
| ೬ | ಶ್ರೀ ಹುಚ್ಚೇಶ್ವರ ಕೈ, ನೇ, ಸ, ಸಂಘ, ಕಮತಗಿ | ೪೧೦ | ೧೧೫ | ೨೮.೦೮ |
| ೭ | ಶ್ರೀ ಜಯಶ್ರೀ ಕೈಮಗ್ಗ, ನೇ, ಸ, ಸಂಘ, ಅಮೀನಗಡ | ೬೮೮ | ೧೮೭ | ೨೭.೧೮ |
| ೮ | ಶ್ರೀ ಶಿವಪ್ಪಯ್ಯ ಕೈ, ನೇ, ಸ, ಸಂಘ, ಗುಳೇದಗುಡ್ಡ | ೫೧೨ | ೩೨ | ೬.೨೫ |
| ೯ | ಶ್ರೀ ಮೂಕೇಶ್ವರಿ ಕೈ, ನೇ, ಸ, ಸಂಘ, ಗುಳೇದಗುಡ್ಡ | ೨೬೬ | ೫೦ | ೧೮.೭೯ |
| ೧೦ | ಶ್ರೀ ಮಾರ್ಕಂಡೇಶ್ವರ ಕೈ, ನೇ, ಸ, ಸಂಘ, ಗುಳೇದಗುಡ್ಡ | ೨೩೬ | ೬೦ | ೨೪.೪೨ |
| | **ಒಟ್ಟು** | **೫೭೯೯** | **೧೮೩೭** | **೩೧.೧೬** |

*ಮೂಲ : ಕ್ಷೇತ್ರಕಾರ್ಯ ಅಧ್ಯಯನದ ವರದಿ ಪ್ರಕಾರ

ನೇಕಾರನ ಉತ್ಪಾದನಾ ಸಾಮರ್ಥ್ಯದ ಮೇಲೆ ಸಂಘದ ಅಭಿವೃದ್ಧಿ ನಿಂತಿರುತ್ತದೆ. ಈ ಸಹಕಾರಿ ಸಂಘವು ನೇಕಾರರ ಕುಶಲತೆ, ಉತ್ತಮ ಬಟ್ಟೆ ತಯಾರಿಕೆ, ವೇಗ, ಸಮಯ ಪ್ರಜ್ಞೆ ಮುಂತಾದವುಗಳನ್ನುಯಾರು

ಅಳವಡಿಸಿಕೊಂಡಿರುವರೂ ಅವರು ನೇಕಾರಿಕೆಯಲ್ಲಿ ಉತ್ತಮ ಬಟ್ಟೆ ಹೆಚ್ಚು ಉತ್ಪನ್ನಗಳನ್ನು ತಯಾರಿಸುತ್ತಾರೆ. ಸಂಘವು ಉತ್ತಮ ನಿರ್ವಹಣೆಯಲ್ಲಿ ವ್ಯವಸ್ಥಾಪನೆ ಕೆಲಸವು ಈ ಸಂಘದ ಹೃದಯ ಭಾಗವೆಂದು ಪರಿಗಣಿಸುತ್ತಾರೆ. ಅವರ ಮಾರ್ಗದರ್ಶನದಿಂದ ಹಾಗೂ ಕಚ್ಚಾ ಮಾಲು ತರುವುದು ಹಾಗೂ ಪಕ್ಕಾ ಮಾಲು ಮಾರಾಟವನ್ನು ಮಾಡುವಂತ ಕೆಲಸ ಮುಖ್ಯವಾಗಿ ನಿರ್ವಹಿಸುತ್ತಾರೆ. ಸರಕಾರದ ಯೋಜನೆಗಳನ್ನು ಸರಿಯಾದ ಫಲಾನುಭವಿಗಳಿಗೆ ತಲುಪಿಸುವ ಕಾರ್ಯ ಮಾಡುತ್ತಾರೆ. ನೇಕಾರ ಸಹಕಾರಿ ಸಂಘಗಳು ಮಾನವ ಸಂಪನ್ಮೂಲವನ್ನು ಹೊಂದಿದ್ದರು, ಸಂಘಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಕೇವಲ ಬೆರಳೆಣಿಕೆಯಷ್ಟು ಮಾತ್ರ, ಮಾನವ ಸಂಪನ್ಮೂಲಗಳ ಸದ್ಬಳಕೆಯನ್ನು ಮಾಡಿಕೊಂಡಿದ್ದಾರೆ. ಈ ಮಾನವ ಸಂಪನ್ಮೂಲಗಳ ತಯಾರಿಕೆಯಲ್ಲಿ ತರಬೇತಿಗಳನ್ನು ಹಮ್ಮಿಕೊಳ್ಳುವಂತ ಪಾತ್ರವನ್ನು ಸಂಘಗಳು ನಿರ್ವಹಿತ್ತಿವೆ. ಇಂದು ಕೆಲವು ನೇಕಾರ ಸಹಕಾರಿ ಸಂಘಗಳು ಹೊಸ-ಹೊಸ ಬಟ್ಟೆ ತಯಾರಿಕೆಯ ಕೈಮಗ್ಗಗಳನ್ನು ಅಳವಡಿಸಿಕೊಳ್ಳುತ್ತಾರೆ. ಉತ್ತಮ ನೇಕಾರರಿಗೆ ಪ್ರೋತ್ಸಾಹ ಧನವನ್ನು ಹಾಗೂ ವೇತನ ಹೆಚ್ಚಳ ಮಾಡುತ್ತಾರೆ.

## ಉತ್ಪಾದನಾ ಬಟ್ಟೆಗಳ ವಿಧಗಳು ಹಾಗೂ ಮಾದರಿಗಳು

ಕೋಷ್ಟಕ-೪.೬
ನೇಕಾರರ ಸಹಕಾರಿ ಸಂಘಗಳು ಉತ್ಪಾದಿಸುತ್ತಿರುವ ಉತ್ಪಾದನಾ ಮಾದರಿಗಳು

| ಅ.ನಂ | ನೇಕಾರ ಸಹಕಾರಿ ಸಂಘಗಳ ಹೆಸರು | ಇಳಕಲ್ಲ ಮಾದರಿ ಸೀರೆ | ಚಾಲುಕ್ಯ ಸಿಲ್ಕ | ಕಾಟನ್ ಸೀರೆ | ವೇಲ್ | ದುಪ್ಪಟೈ | ಪಟಗಾ | ಖಣ | ಖಾದಿ | ಒಟ್ಟು |
|---|---|---|---|---|---|---|---|---|---|---|
| ೧ | ಶ್ರೀ ಶಾಖಾಂಬರಿ ನೇಕಾರ ಸಹಕಾರಿ ಸಂಘ, ಸೂಳಿಭಾವಿ | ೧ | ೧ | ೧ | ೧ | ೧ | ೦ | ೦ | ೦ | ೫ |
| ೨ | ಶ್ರೀ ಚಾಮುಂಡೇಶ್ವರಿ ಕೈಮಗ್ಗ ನೇ, ಸ, ಸಂಘ. ಕಮತಗಿ | ೧ | ೧ | ೧ | ೧ | ೧ | ೧ | ೦ | ೦ | ೬ |
| ೩ | ಶ್ರೀ ಪಾರ್ವತಿ ಪರಮೇಶ್ವರ ಕೈ ನೇ, ಸ, ಸಂಘ, ಕಮತಗಿ | ೧ | ೦ | ೦ | ೦ | ೦ | ೦ | ೦ | ೦ | ೧ |
| ೪ | ಪ್ರಾಥಮಿಕ ಕೈಮಗ್ಗ, ನೇ, ಸ, ಸಂಘ, ಕಮತಗಿ | ೧ | ೧ | ೦ | ೦ | ೦ | ೧ | ೦ | ೦ | ೩ |
| ೫ | ಶ್ರೀ ದಾನೇಶ್ವರಿ ಪ್ರಾಥಮಿಕ ಕೈ, ನೇ, ಸ, ಸಂಘ, ಕಮತಗಿ | ೧ | ೦ | ೧ | ೦ | ೦ | ೧ | ೦ | ೦ | ೩ |
| ೬ | ಶ್ರೀ ಹುಚ್ಚೇಶ್ವರ ಕೈ, ನೇ, ಸ, ಸಂಘ, ಕಮತಗಿ | ೧ | ೦ | ೦ | ೦ | ೦ | ೦ | ೦ | ೦ | ೧ |
| ೭ | ಶ್ರೀ ಜಯಶ್ರೀ ಕೈಮಗ್ಗ, ನೇ, ಸ, ಸಂಘ, ಅಮೀನಗಡ | ೧ | ೦ | ೦ | ೦ | ೦ | ೦ | ೦ | ೦ | ೧ |
| ೮ | ಶ್ರೀ ಶಿವಪ್ಪಯ್ಯ ಕೈ, ನೇ, ಸ, ಸಂಘ, ಗುಳೇದಗುಡ್ಡ | ೦ | ೦ | ೦ | ೦ | ೦ | ೦ | ೧ | ೧ | ೨ |
| ೯ | ಶ್ರೀ ಮೂಕೇಶ್ವರಿ ಕೈ, ನೇ, ಸ, ಸಂಘ, ಗುಳೇದಗುಡ್ಡ | ೧ | ೦ | ೦ | ೦ | ೦ | ೦ | ೧ | ೧ | ೩ |
| ೧೦ | ಶ್ರೀ ಮಾರ್ಕಂಡೇಶ್ವರ ಕೈ, ನೇ, ಸ, ಸಂಘ, ಗುಳೇದಗುಡ್ಡ | ೧ | ೦ | ೦ | ೦ | ೦ | ೦ | ೧ | ೧ | ೩ |
| | ಒಟ್ಟು | ೯ | ೩ | ೩ | ೨ | ೨ | ೩ | ೩ | ೩ | ೨೮ |

*ಮೂಲ : ಕ್ಷೇತ್ರಕಾರ್ಯ ಅಧ್ಯಯನದ ವರದಿ ಪ್ರಕಾರ

ನೇಕಾರರು ಈ ಸಂಘಗಳ ನೀಡುವಂತಹ ಬಟ್ಟೆಗಳನ್ನು ನೇಯ್ದು ಕೊಡುತ್ತಾರೆ. ಈ ಪ್ರದೇಶದಲ್ಲಿ ಹೆಚ್ಚಾಗಿ ಸಾಂಪ್ರದಾಯಿಕ ಉತ್ಪನ್ನಗಳನ್ನು ತಯಾರಿಸುತ್ತಾರೆ. ಇಲ್ಲಿನ ನೇಕಾರರ ಸಹಕಾರಿ ಕ್ಷೇತ್ರಗಳಲ್ಲಿ ಆಧುನಿಕ ಬಟ್ಟೆಗಳನ್ನು ತಯಾರಿಸುತ್ತಿದ್ದಾರೆ. ಹೆಚ್ಚಾಗಿ ಸಾಂಪ್ರದಾಯಿಕ ಬಟ್ಟೆಗಳು ತಯಾರಿಸುವುದು ಕಂಡುಬರುತ್ತದೆ. ಇಲ್ಲಿನ ಉತ್ಪಾದನ ಬಟ್ಟೆಗಳಾದ ಇಳಕಲ್ಲ ಮಾದರಿಯ ಸೀರೆ, ಗುಳೇದಗುಡ್ಡದ ಖಣ, ಪಟಗಾ ಹಾಗೂ ಚಮಕಾ ಸೀರೆಗಳು ಸಾಂಪ್ರದಾಯಿಕ ಉತ್ಪನ್ನಗಳು. ಹೊಸ ವಿನ್ಯಾಸಗಳಿಂದ ಉತ್ಪಾದಿಸಲ್ಪಡುವ ಕಾಟನ್ ಬಟ್ಟೆಗಳು, ಮಹಿಳೆಯರ ಕಾಟನ್ ವೇಲ್‌ಗಳು, ಟಾವೆಲ್‌ಗಳು, ಚೈನಾ ಸೀಲ್ಕ ಸೀರೆ, ಕಾಂಚಿವರಂ, ಧರ್ಮಾವರಂ ಸೀರೆಗಳನ್ನು ಇಲ್ಲಿ ತಯಾರಿಸುತ್ತಾರೆ. ನೇಕಾರ ಸಹಕಾರಿ ಸಂಘದಲ್ಲಿ ಸಾಂಪ್ರದಾಯಿಕ ಹಾಗೂ ಹೊಸ ಉತ್ಪಾದನಾ ವಸ್ತುಗಳನ್ನು ಒಳಗೊಂಡಿರುವ ಸಹಕಾರಿ ಸಂಘಗಳು ತಮ್ಮ ಆದಾಯವನ್ನು ವರ್ಷದಿಂದ ವರ್ಷಕ್ಕೆ ಹೆಚ್ಚಿಸಿಕೊಳ್ಳುತ್ತಿವೆ. ಆದರೆ ಈ ವ್ಯಾಪ್ತಿಯು ಕೇವಲ ಸಾಂಪ್ರದಾಯಿಕ ವಸ್ತುಗಳನ್ನು ಹೆಚ್ಚು ಉತ್ಪಾದಿಸುವ ಸಹಕಾರಿ ಸಂಘಗಳಲ್ಲಿ ಕಂಡುಬರುತ್ತಿವೆ. ಆದ್ದರಿಂದ ಸಂಘಗಳ ಆದಾಯವು ಕಡಿಮೆ ಮಟ್ಟದಲ್ಲಿರುವುದು ಕಂಡುಬರುತ್ತದೆ.

**ಕೋಷ್ಟಕ–೪.೭**
**ನೇಕಾರರ ಸಹಕಾರಿ ಸಂಘಗಳ ಮುಖಾಂತರ ಮಹಾತ್ಮಾ ಗಾಂಧೀ ಬುನಕರ ಭೀಮಾ ಯೋಜನೆಯಲ್ಲಿ ಎಲ್.ಐ.ಸಿ. ಪಡೆದಿರುವ ಹಾಗೂ ಪ್ರಸ್ತುತ ಚಲಾವಣೆಯಲ್ಲಿರುವ ಫಲಾನುಭವಿಗಳ ವಿವರ**

| ಅ.ನಂ | ನೇಕಾರ ಸಹಕಾರಿ ಸಂಘಗಳ ಹೆಸರು | ಎಂ.ಜಿ.ಬಿ.ಬಿ.ವಾಯ್. ಫಲಾನುಭವಿಗಳು |
|---|---|---|
| ೧ | ಶ್ರೀ ಶಾಖಾಂಬರಿ ನೇಕಾರ ಸಹಕಾರಿ ಸಂಘ, ಸೂಳಿಭಾವಿ | ೮೯೦ |
| ೨ | ಶ್ರೀ ಚಾಮುಂಡೇಶ್ವರಿ ಕೈಮಗ್ಗ ನೇ. ಸ. ಸಂಘ. ಕಮತಗಿ | ೨೮೦ |
| ೩ | ಶ್ರೀ ಪಾರ್ವತಿ ಪರಮೇಶ್ವರ ಕೈ. ನೇ. ಸ. ಸಂಘ. ಕಮತಗಿ | ೮೯೦ |
| ೪ | ಪ್ರಾಥಮಿಕ ಕೈಮಗ್ಗ. ನೇ. ಸ. ಸಂಘ. ಕಮತಗಿ | ೩೭೫ |
| ೫ | ಶ್ರೀ ದಾನೇಶ್ವರಿ ಪ್ರಾಥಮಿಕ ಕೈ. ನೇ. ಸ. ಸಂಘ. ಕಮತಗಿ | ೧೮೮ |
| ೬ | ಶ್ರೀ ಹುಚ್ಚೇಶ್ವರ ಕೈ. ನೇ. ಸ. ಸಂಘ. ಕಮತಗಿ | ೩೮೫ |
| ೭ | ಶ್ರೀ ಜಯಶ್ರೀ ಕೈಮಗ್ಗ. ನೇ. ಸ. ಸಂಘ. ಅಮೀನಗಡ | ೫೬೭ |
| ೮ | ಶ್ರೀ ಶಿವಪ್ಪಯ್ಯ ಕೈ. ನೇ. ಸ. ಸಂಘ. ಗುಳೇದಗುಡ್ಡ | ೪೧೮ |
| ೯ | ಶ್ರೀ ಮೂಕೇಶ್ವರಿ ಕೈ. ನೇ. ಸ. ಸಂಘ. ಗುಳೇದಗುಡ್ಡ | ೨೩೦ |
| ೧೦ | ಶ್ರೀ ಮಾರ್ಕಂಡೇಶ್ವರ ಕೈ. ನೇ. ಸ. ಸಂಘ. ಗುಳೇದಗುಡ್ಡ | ೨೨೦ |
| | ಒಟ್ಟು | ೪೪೪೩ |
| | *ಮೂಲ : ಕ್ಷೇತ್ರಕಾರ್ಯ ಅಧ್ಯಯನದ ವರದಿ ಪ್ರಕಾರ | |

ಸಾಂಪ್ರದಾಯ ಉತ್ಪನ್ನಗಳ ಜೊತೆಯಲಿ ಹೊಸ ಉತ್ಪನ್ನಗಳ ತರಬೇತಿ ಕೈಗೊಂಡು ಹೊಸ ಉತ್ಪಾದನೆಗೆ ಹೆಚ್ಚಿನ ಆದ್ಯತೆ ನೀಡುವಂತ ಕೆಲಸ ಮಾಡಬೇಕಾಗಿದೆ.

**ಆಡಳಿತ ನಿರ್ವಹಣೆ:** ನೇಕಾರರ ಸಹಕಾರಿ ಸಂಘಗಳು ಆಡಳಿತ ವ್ಯವಸ್ಥೆ ಹಾಗೂ ನಿರ್ವಹಣ ವ್ಯವಸ್ಥೆ ಸಹಕಾರದಿಂದ ನೇಕಾರರ ಪರವಾಗಿ ಕೆಲಸ ಮಾಡುತ್ತವೆ. ನೇಕಾರರ ಏಳಿಗೆ, ಕ್ಷೇಮಾಭಿವೃದ್ಧಿ ಮತ್ತು ನಿರಂತರ ಉದ್ಯೋಗವನ್ನು ಒದಗಿಸಿಕೊಡುವಲ್ಲಿ ಸಂಘಟನಾತ್ಮಕವಾಗಿ ಕೆಲಸ ಮಾಡುತ್ತಿವೆ. ಸಂಘಗಳ ಸಭೆ, ಆರೋಗ್ಯ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು, ನೇಕಾರರ ಕೂಲಿ ಪರಿಷ್ಕರಣೆ, ತರಬೇತಿಯ ಕಾರ್ಯಕ್ರಮಗಳನ್ನು

ಹಮ್ಮಿಕೊಳ್ಳುವುದು ಮುಂದಿನ ಕಾರ್ಯಗಳನ್ನು ಸಂಘಗಳಲ್ಲಿ ತೀರ್ಮಾನಿಸುತ್ತಾರೆ. ಆಡಳಿತ ವ್ಯವಸ್ಥೆ ಹಾಗೂ ನಿರ್ವಹಣಾ ವ್ಯವಸ್ಥೆಯು ಪ್ರಾಮಾಣಿಕ ಕಾರ್ಯ ಮಾಡುವಂತ ಸಂಘಗಳು ಉತ್ತಮ ಸ್ಥಿತಿಯಲ್ಲಿರುವುದು ಕಂಡುಬಂದಿದೆ.

**ಕೋಷ್ಟಕ–೪.೮.**

**ನೇಕಾರರ ಸಹಕಾರಿ ಸಂಘಗಳ ಮಧ್ಯಸ್ಥಿಕೆಯಿಂದ ನೇಕಾರರಿಗೆ ಸಾಲದ ವ್ಯವಸ್ಥೆ**

| ಅ.ನಂ | ನೇಕಾರ ಸಹಕಾರಿ ಸಂಘಗಳ ಹೆಸರು | ದಿರ್ಘಾವಧಿ ಸಾಲ | ಮಧ್ಯಮಾವಧಿ ಸಾಲ | ಅಲ್ಪಾವಧಿ ಸಾಲ | ಒಟ್ಟು ಸಾಲ ಪಡೆದಂತ ಶೇರು ದಾರರೂ | ಮಧ್ಯಸ್ಥಿಕೆಯ ಶೇಕಡಾವಾರು |
|---|---|---|---|---|---|---|
| ೧ | ಶ್ರೀ ಶಾಖಾಂಬರಿ ನೇಕಾರ ಸಹಕಾರಿ ಸಂಘ, ಸೂಳಿಭಾವಿ | ೧೮೦ | ೧ | ೨೨೮ | ೪೦೯ | ೨೩.೩೪ |
| ೨ | ಶ್ರೀ ಚಾಮುಂಡೇಶ್ವರಿ ಕೈಮಗ್ಗ ನೇ. ಸ. ಸಂಘ. ಕಮತಗಿ | ೦ | ೦ | ೩೦ | ೩೦ | ೯.೪೬ |
| ೩ | ಶ್ರೀ ಪಾರ್ವತಿ ಪರಮೇಶ್ವರ ಕೈ. ನೇ. ಸ. ಸಂಘ. ಕಮತಗಿ | ೩೨೦ | ೦ | ೦ | ೩೨೦ | ೩೧.೮೧ |
| ೪ | ಪ್ರಾಥಮಿಕ ಕೈಮಗ್ಗ. ನೇ. ಸ. ಸಂಘ. ಕಮತಗಿ | ೧೮ | ೦ | ೦ | ೧೮ | ೦.೦೧೯ |
| ೫ | ಶ್ರೀ ದಾನೇಶ್ವರಿ ಪ್ರಾಥಮಿಕ ಕೈ. ನೇ. ಸ. ಸಂಘ. ಕಮತಗಿ | ೧೨೦ | ೦ | ೨೦ | ೧೪೦ | ೦.೭ |
| ೬ | ಶ್ರೀ ಹುಚ್ಚೇಶ್ವರ ಕೈ. ನೇ. ಸ. ಸಂಘ. ಕಮತಗಿ | ೧೨೦ | ೦ | ೦ | ೧೨೦ | ೦.೦೦೨ |
| ೭ | ಶ್ರೀ ಜಯಶ್ರೀ ಕೈಮಗ್ಗ. ನೇ. ಸ. ಸಂಘ. ಅಮೀನಗಡ | ೧೦೩ | ೦ | ೩೫ | ೧೩೮ | ೨೦.೦೫ |
| ೮ | ಶ್ರೀ ಶಿವಪ್ಪಯ್ಯ ಕೈ. ನೇ. ಸ. ಸಂಘ. ಗುಳೇದಗುಡ್ಡ | ೧೦ | ೦ | ೦ | ೧೦ | ೦.೦೧೯ |
| ೯ | ಶ್ರೀ ಮೂಕೇಶ್ವರಿ ಕೈ. ನೇ. ಸ. ಸಂಘ. ಗುಳೇದಗುಡ್ಡ | ೮ | ೦ | ೫ | ೧೩ | ೦.೦೪ |
| ೧೦ | ಶ್ರೀ ಮಾರ್ಕಂಡೇಶ್ವರ ಕೈ. ನೇ. ಸ. ಸಂಘ. ಗುಳೇದಗುಡ್ಡ | ೦ | ೦ | ೧೦ | ೧೦ | ೦.೦೪.೨೩ |
| | ಒಟ್ಟು | ೮೭೯ | ೧ | ೩೨೮ | ೧೨೦೮ | ೨೦.೮೩ |
| | *ಮೂಲ : ಕ್ಷೇತ್ರಕಾರ್ಯ ಅಧ್ಯಯನದ ವರದಿ ಪ್ರಕಾರ | | | | | |

| ಕೋಷ್ಟಕ–೪.೯.<br>ನೇಕಾರರ ಸಹಕಾರಿ ಸಂಘಗಳಲ್ಲಿ ನೇಕಾರರಿಗಿರುವ (ಅಂದಾಜು) ವೇತನಗಳ ಮಾಹಿತಿ | | | |
|---|---|---|---|
| ಅ.ನಂ | ನೇಕಾರ ಸಹಕಾರಿ ಸಂಘಗಳ ಹೆಸರು | ಕನಿಷ್ಟ ವೇತನ | ಗರಿಷ್ಟ ವೇತನ |
| ೧ | ಶ್ರೀ ಶಾಖಾಂಬರಿ ನೇಕಾರ ಸಹಕಾರಿ ಸಂಘ, ಸೂಳಿಭಾವಿ | ೨೦೦೦ | ೯೦೦೦ |
| ೨ | ಶ್ರೀ ಚಾಮುಂಡೇಶ್ವರಿ ಕೈಮಗ್ಗ ನೇ, ಸ, ಸಂಘ. ಕಮತಗಿ | ೨೦೦೦ | ೧೦೦೦೦ |
| ೩ | ಶ್ರೀ ಪಾರ್ವತಿ ಪರಮೇಶ್ವರ ಕೈ, ನೇ, ಸ, ಸಂಘ, ಕಮತಗಿ | ೩೦೦೦ | ೬೫೦೦ |
| ೪ | ಪ್ರಾಥಮಿಕ ಕೈಮಗ್ಗ, ನೇ, ಸ, ಸಂಘ, ಕಮತಗಿ | ೧೮೦೦ | ೬೦೦೦ |
| ೫ | ಶ್ರೀ ದಾನೇಶ್ವರಿ ಪ್ರಾಥಮಿಕ ಕೈ, ನೇ, ಸ, ಸಂಘ, ಕಮತಗಿ | ೧೫೦೦ | ೬೦೦೦ |
| ೬ | ಶ್ರೀ ಹುಚ್ಚೇಶ್ವರ ಕೈ, ನೇ, ಸ, ಸಂಘ, ಕಮತಗಿ | ೧೮೦೦ | ೫೮೦೦ |
| ೭ | ಶ್ರೀ ಜಯಶ್ರೀ ಕೈಮಗ್ಗ, ನೇ, ಸ, ಸಂಘ, ಅಮೀನಗಡ | ೧೫೦೦ | ೬೧೦೦ |
| ೮ | ಶ್ರೀ ಶಿವಪ್ಪಯ್ಯ ಕೈ, ನೇ, ಸ, ಸಂಘ, ಗುಳೇದಗುಡ್ಡ | ೨೦೦೦ | ೫೧೦೦ |
| ೯ | ಶ್ರೀ ಮೂಕೇಶ್ವರಿ ಕೈ, ನೇ, ಸ, ಸಂಘ, ಗುಳೇದಗುಡ್ಡ | ೧೮೦೦ | ೬೧೦೦ |
| ೧೦ | ಶ್ರೀ ಮಾರ್ಕಂಡೇಶ್ವರ ಕೈ, ನೇ, ಸ, ಸಂಘ, ಗುಳೇದಗುಡ್ಡ | ೨೦೦೦ | ೬೫೦೦ |
| | *ಮೂಲ : ಕ್ಷೇತ್ರಕಾರ್ಯ ಅಧ್ಯಯನದ ವರದಿ ಪ್ರಕಾರ | | |

**ಅಡಿಟಿಪ್ಪಣಿಗಳು**

೧ ಭೈರಪ್ಪ. ಕೆ. ೨೦೦೭. 'ಕೈಗಾರಿಕಾ ಸಮಾಜಶಾಸ್ತ್ರ,' ಪು.೧೯

೨ ಭೈರಪ್ಪ. ಕೆ. ೨೦೦೭. 'ಕೈಗಾರಿಕಾ ಸಮಾಜಶಾಸ್ತ್ರ,' ಪು.೨೧

೩ ಭೈರಪ್ಪ. ಕೆ. ೨೦೦೭. 'ಕೈಗಾರಿಕಾ ಸಮಾಜಶಾಸ್ತ್ರ,' ಪು.೨೨

೪ ಭೈರಪ್ಪ. ಕೆ. ೨೦೦೭. 'ಕೈಗಾರಿಕಾ ಸಮಾಜಶಾಸ್ತ್ರ,' ಪು.೨೨

೫ ಭೈರಪ್ಪ. ಕೆ. ೨೦೦೭. 'ಕೈಗಾರಿಕಾ ಸಮಾಜಶಾಸ್ತ್ರ,' ಪು.೨೮

೬ ಭೈರಪ್ಪ. ಕೆ. ೨೦೦೭. 'ಕೈಗಾರಿಕಾ ಸಮಾಜಶಾಸ್ತ್ರ,' ಪು.೨೨

೭ ಭೈರಪ್ಪ. ಕೆ. ೨೦೦೭. 'ಕೈಗಾರಿಕಾ ಸಮಾಜಶಾಸ್ತ್ರ,' ಪು.೩೦

೮ ಭೈರಪ್ಪ. ಕೆ. ೨೦೦೬. ಸಮಗ್ರ ಗ್ರಾಮೀಣ ಸಮಾಜ ಮತ್ತು ಅಭಿವೃದ್ಧಿ, ಪು. ೨೮೮

೯ ಭೈರಪ್ಪ. ಕೆ. ೨೦೦೬. ಸಮಗ್ರ ಗ್ರಾಮೀಣ ಸಮಾಜ ಮತ್ತು ಅಭಿವೃದ್ಧಿ, ಪು. ೨೯೧

೧೦ ಭೈರಪ್ಪ. ಕೆ. ೨೦೦೬. ಸಮಗ್ರ ಗ್ರಾಮೀಣ ಸಮಾಜ ಮತ್ತು ಅಭಿವೃದ್ಧಿ, ಪು. ೨೯೧

೧೧ ಯೋಜನಾ. ಅಕ್ಟೋಬರ್–೨೦೧೬, ಅಭಿವೃದ್ಧಿ ಮಾಸ ಪತ್ರಿಕೆ, ಪು.೬

೧೨ ಭೈರಪ್ಪ. ಕೆ. ೨೦೦೬. ಸಮಗ್ರ ಗ್ರಾಮೀಣ ಸಮಾಜ ಮತ್ತು ಅಭಿವೃದ್ಧಿ, ಪು. ೨೯೨

೧೩ ಯೋಜನಾ. ಅಕ್ಟೋಬರ್–೨೦೧೬ ಅಭಿವೃದ್ಧಿ ಮಾಸ ಪತ್ರಿಕೆ, ಪು. ೬೭

೧೪ ಭೈರಪ್ಪ. ಕೆ. ೨೦೦೬. ಸಮಗ್ರ ಗ್ರಾಮೀಣ ಸಮಾಜ ಮತ್ತು ಅಭಿವೃದ್ಧಿ, ಪು. ೨೯೨

೧೫ ವಸಂತಕುಮಾರ ಬಿ. ವಿ.(ಸಂ.) ೨೦೦೫ ಸಹಕಾರ ಚಳುವಳಿ. ಪು. ೧೧

೧೬ ಭೈರಪ್ಪ. ಕೆ. ಸಮಗ್ರ ಗ್ರಾಮೀಣ ಸಮಾಜ ಮತ್ತು ಅಭಿವೃದ್ಧಿ, ೨೦೦೬. ಪು. ೨೮೦–೮೭

೧೭ ಕರ್ನಾಟಕ ಸರಕಾರ, ೧೯೯೯. ಭಾರತದ ಗ್ಯಾಜೆಟಿಯರ್, ಕರ್ನಾಟಕ ರಾಜ್ಯ, ಬಿಜಾಪುರ ಜಿಲ್ಲೆ (ಬಾಗಲಕೋಟ ಜಿಲ್ಲೆಯೂ ಸೇರಿದಂತೆ) ಗ್ಯಾಜೆಟೆಯರ್, ಪು. ೧೧೦

೧೮ ಕರ್ನಾಟಕ ಸರಕಾರ, ೧೯೯೯. ಭಾರತದ ಗ್ಯಾಜೆಟಿಯರ್, ಕರ್ನಾಟಕ ರಾಜ್ಯ ಬಿಜಾಪುರ ಜಿಲ್ಲೆ (ಬಾಗಲಕೋಟ ಜಿಲ್ಲೆಯೂ ಸೇರಿದಂತೆ) ಗ್ಯಾಜೆಟಿಯರ್, ಪು. ೧೧೦

೧೯ ಕರ್ನಾಟಕ ಸರಕಾರ, ೧೯೯೯. ಭಾರತದ ಗ್ಯಾಜೆಟಿಯರ್, ಕರ್ನಾಟಕ ರಾಜ್ಯ ಬಿಜಾಪುರ ಜಿಲ್ಲೆ (ಬಾಗಲಕೋಟ ಜಿಲ್ಲೆಯೂ ಸೇರಿದಂತೆ) ಗ್ಯಾಜೆಟಿಯರ್, ಪು. ೧೧೧

೨೦ ಜವಳಿ ಖಾತೆ ಸಹಾಯಕ ಸಚಿವರು, ೨೦೧೬ (ಭಾರತ ಸರಕಾರ) 'ಯೋಜನಾ ಅಭಿವೃದ್ಧಿ ಮಾಸ ಪತ್ರಿಕೆ' ಪು. ೬

೨೧ ಜವಳಿ ಖಾತೆ ಸಹಾಯಕ ಸಚಿವರು, ೨೦೧೬ (ಭಾರತ ಸರಕಾರ) 'ಯೋಜನಾ ಅಭಿವೃದ್ಧಿ ಮಾಸ ಪತ್ರಿಕೆ' ಪು. ೭

೨೨ ಜವಳಿ ಖಾತೆ ಸಹಾಯಕ ಸಚಿವರು, ೨೦೧೬ (ಭಾರತ ಸರಕಾರ) 'ಯೋಜನಾ ಅಭಿವೃದ್ಧಿ ಮಾಸ ಪತ್ರಿಕೆ' ಪು. ೮

೨೩ ಉಪ ನಿರ್ದೇಶಕರು, ೨೦೦೬-೦೭. 'ನೇಕಾರರ ಯೋಜನಾ ಸಂಕ್ಷಿಪ್ತ ಮಾಹಿತಿ', ಪು. ೨-೫

# ಅಧ್ಯಾಯ ನಾಲ್ಕು: ನೇಕಾರರ ಸಮಸ್ಯೆ, ದಾಖಲಾತಿ ವಿಶ್ಲೇಷಣೆ ಮತ್ತು ವಿವರಣೆ

೪.೧. ನೇಕಾರರ ಸಮಸ್ಯೆಗಳು

೪.೨. ದಾಖಲಾತಿ ವಿಶ್ಲೇಷಣೆ ಮತ್ತು ವಿವರಣೆ

## ಅಧ್ಯಾಯ ನಾಲ್ಕು:

## ನೇಕಾರರ ಸಮಸ್ಯೆ, ದಾಖಲಾತಿ ವಿಶ್ಲೇಷಣೆ ಮತ್ತು ವಿವರಣೆ

### ೪.೧ ನೇಕಾರರ ಸಮಸ್ಯೆಗಳು

ಇಂದು ನೇಕಾರರ ವೃತ್ತಿ ಜೀವನದ ಜೊತೆಯಲ್ಲಿ ಅನೇಕ ಸಮಸ್ಯೆಗಳು ಹಾಸುಹೊಕ್ಕಾಗಿವೆ. ಸಾಮಾನ್ಯವಾಗಿ ನೇಕಾರರಿಗಿರುವ ಸಮಸ್ಯೆಗಳು ಅವರ ವೈಯಕ್ತಿಕ ಹಾಗೂ ವೃತ್ತಿಜೀವನದ ಬದುಕಿನ ಮೇಲೆ ತುಂಬಾ ವ್ಯತಿರಿಕ್ತವಾದ ಪರಿಣಾಮಗಳನ್ನು ಬೀರುತ್ತವೆ. ಒಂದು ಕಡೆ ವೃತ್ತಿ ಮತ್ತೊಂದು ಕಡೆ ಆರ್ಥಿಕ ಸಂಕಷ್ಟದಿಂದ ಕೂಡಿದ ನೇಕಾರಿಕೆಯ ಬದುಕು. ಅಳೆದು ತೂಗಿದರು ಸಿಗುವ ಅಲ್ಪಸ್ವಲ್ಪ ಸಾಮಾಜಿಕ ಜೀವನದ ಏಣಿ-ಶ್ರೇಣಿಯಲ್ಲಿನ ಸ್ಥಾನಮಾನ. ಶೈಕ್ಷಣಿಕ ರಂಗದಲ್ಲಿ ಹಿಂದಿನ ತಲೆಮಾರಿನ ಜನರ ಸಾಧನೆ ಹೇಳಿಕೊಳ್ಳುವಂತಲ್ಲದಿದ್ದರೂ ಸಹ ಈಗಿನ ನೇಕಾರಿಕೆಯ ಕುಟುಂಬಗಳ ಮಕ್ಕಳ ಶಿಕ್ಷಣವು ಸುಧಾರಿಸುವಂತಿದೆ. ಹೊಸ ತಲೆಮಾರಿನ ಯುವಕ-ಯುವತಿಯರು ಸಾಂಪ್ರದಾಯಿಕ ವೃತ್ತಿಗೆ ಹಾಗೂ ಕಲೆಗೆ ಅಷ್ಟೊಂದು ಪ್ರಭಾವ ಹಾಗೂ ಅದರ ವಿಸ್ತಾರವಾದ ಜ್ಞಾನದ ಹರಡುವಿಕೆಯು ಜನರನ್ನು ಸುಶಿಕ್ಷಿತವಂತರನ್ನಾಗಿ, ಸಾಂಪ್ರದಾಯಿಕ ವೃತ್ತಿ ಬದುಕಿನತ್ತ ಆಕರ್ಷಕರಾಗುತ್ತಿಲ್ಲ. ಶಿಕ್ಷಣದಲ್ಲಿ ನೇಕಾರರ ಮಕ್ಕಳ ಪ್ರಗತಿಯಿಂದಾಗಿ ವೃತ್ತಿಯಲ್ಲಿರುವವರು ತಮ್ಮ ಮಕ್ಕಳ ಮುಂದಿನ ಉಜ್ವಲ ಭವಿಷ್ಯಕ್ಕಾಗಿ ಬೇರೆ ಊರಿಗೆ ವಲಸೆ ಹೋಗುವ ಪ್ರವೃತ್ತಿಯನ್ನು ಮೈಗೂಡಿಸಿಕೊಂಡಿದ್ದಾರೆ. ಇದು ಸಹ ನೇಕಾರಿಕೆಯ ವೃತ್ತಿಗೆ ವ್ಯತಿರಿಕ್ತವಾದ ದುಷ್ಪರಿಣಾಮವನ್ನು ಉಂಟುಮಾಡಿರುವುದರಲ್ಲಿ ಯಾವುದೇ ಸಂದೇಹವಿಲ್ಲ. ಮುಂದೆ ನೇಕಾರಿಕೆಯ ಉತ್ತರದಾಯಿತ್ವ ಯಾರು? ಎಂಬುದರ ಪ್ರಶ್ನೆ ಜ್ವಲಂತವಾಗಿ ಜನರ ಮನಸ್ಸಿನಲ್ಲಿ ಅಚ್ಚೊತ್ತಿದೆ. ಆದರೆ ಅವರಿಗೆ ತಮ್ಮ ಮಕ್ಕಳು ಈ ಸಾಂಪ್ರದಾಯಿಕ ವೃತ್ತಿಗೆ ಇಳಿಯುವುದು ಬೇಡವಾಗಿದೆ. ಯಾಕೆಂದರೆ ಇದರಿಂದ ಏನು ಸಿಗುತ್ತಿ ಎಂಬ ಭಾವನೆ ಅವರಲ್ಲಿದೆ. ಇದರಿಂದಾಗಿ ವಲಸೆಯ ಪ್ರಮಾಣ ಹೆಚ್ಚಾಗುತ್ತಿದೆ.

**ಬಡತನ**

ನೇಕಾರರ ಗೋಳು ಕೇಳೊರಿಲ್ಲ ? ಹೇಳೊರಿಲ್ಲ ? ಹಿಂದೇ, ಇಂದೂ, ಎಂದೆಂದೂ ನಿಲ್ಲದ ಬದುಕಿನ ಈ ಗೋಳು. ನೇಕಾರರು ಹಿಂದಿನಿಂದ ನೇಕಾರಿಕೆಯನ್ನು ತಮ್ಮ ವೃತ್ತಿ ಬದುಕು ಎಂದುಕೊಂಡು ಜೀವನವನ್ನು ನಿಷ್ಠೆಯಿಂದ ಸುತ್ತಿದ್ದರು. ಈ ಬಡತನದಿಂದ ಮುಕ್ತರಾಗುವುದಕ್ಕೆ ಇಂದಿಗೂ ಅವರಿಗೆ ಸಾಧ್ಯವಾಗಿಲ್ಲ ನಿಷ್ಠಾವಂತ ನೇಕಾರರು ದಿನವಿಡೀ ಕನಿಷ್ಠ ೮ ರಿಂದ ೧೦ ಗಂಟೆಗಳವರೆಗೂ ತಮ್ಮ ಜೀವನವನ್ನು ಕುಣಿ ಮಗ್ಗದಲ್ಲಿ ಸವೆಸಿದರೂ ಅವರ ಈ ಬದುಕು ಹಸನಾಗುತ್ತಿಲ್ಲ ಜೀವನಕ್ಕೆ ಹಸಿವಿನ ಹಂಬಲವನ್ನು ಇಡೇರಿಸಿಕೊಳ್ಳದ ಕನಿಷ್ಠ ಆದಾಯವನ್ನು ಪಡೆಯದೇ ಜೀವಿಸುವ ಎಷ್ಟೋ ಜೀವಗಳು ಈ ನೇಕಾರರ ಬಣದಲ್ಲಿ ಕಂಡುಬರುತ್ತದೆ. ತುಂಬು ಕುಟುಂಬದ ಜೀವನ ಕಳೆದ ನೇಕಾರರೂ, ಇಂದು ಒಂದೊಂದು ಮನೆಯಲ್ಲಿ ಮಕ್ಕಳು ಇಲ್ಲದೆ ಬವಣಿಸುತ್ತಿವೆ, ಆ ಕುಟುಂಬದಯ ಜನರು ನಗರಗಳಲ್ಲಿ ವಲಸೆ ಹೋಗಿ ದುಡಿಯುವಂತ ಕರಾಳ ದಿನ ನೇಕಾರ ವೃತ್ತಿಗೆ

ಅಂಟಿಕೊಂಡಿದೆ ನೇಕಾರ ಇಷ್ಟಪಟ್ಟು ನೇಕಾರಿಕೆ ಮಾಡಿ ಜೀವನವನ್ನು ಮಾಡುವುದೆಂದರೆ ಸರಿಯಾದ ಬೆಲೆಯಲ್ಲಿ ಹಾಗೂ ಸಮಯಕ್ಕೆ ನೂಲು ನೀಡುವುದಿಲ್ಲ. ಸರಿಯಾದ ಸಮಯಕ್ಕೆ ಕೂಲಿಯೂ ಕೈ ಸೇರುವುದಿಲ್ಲ. ಜೀವನವನ್ನು ಸಾಗಿಸುವುದಕ್ಕೆ ಸಾಲದ ನೆರವು ಪಡೆಯಲಾಗುತ್ತದೆ. ಅನೇಕ ನೇಕಾರರೂ ಸಾಲ ತೀರಿಸದೆ ವೃಣಭಾರಕ್ಕೆ ತುತ್ತಾಗುತ್ತಿದ್ದಾರೆ. ಈ ಬಡತನದಿಂದ ನೇಕಾರರು ಮಾಲೀಕರ ಜೀತದಲ್ಲಿ ಇಲ್ಲವೆ ಗುಲಾಮಗಿರಿಯ ರೂಪದಲ್ಲಿ ಜೀವನ ಸಾಗಿಸುತ್ತಿದ್ದಾರೆ. ಆದರೆ ಮಾಲೀಕತ್ವದ ನೇಕಾರಿಕೆಗಿಂತಲೂ ಸಹಕಾರಿ ನೇಕಾರಿಕೆ ಬಹಳ ಉಪಯೋಗಕಾರಿ. ಕಡಿಮೆ ಕೂಲಿ ನೀಡಿದರೂ ಕೂಡಾ ನಿರಂತರ ನೇಕಾರಿಕೆ ಸಿಗುತ್ತದೆ. ಎಂಬ ಆಶಾಭಾವನೆ ಕೆಲವರಲ್ಲಿ ಮೂಡಿಬಂದಿದೆ.

**ವಲಸೆ ಜೀವನ**

ನೇಕಾರರು ನಿರಂತರ ಬದುಕು ಸಾಗಿಸುವುದಕ್ಕೆ ಅನುಕೂಲ ಮಾಡಿಕೊಡುವ ನೇಕಾರಿಕೆ ವೃತ್ತಿ ಇಂದು ಎಲ್ಲಿಯೂ ಕಂಡುಬರುತ್ತಿಲ್ಲ ಮತ್ತು ನೇಕಾರರ ಉತ್ಪನ್ನಗಳನ್ನು ಮಾರಾಟ ಮಾಡುವ ವ್ಯವಸ್ಥೆ ವ್ಯವಸ್ಥಿತವಾಗಿ ನಡೆಯುವುದಿಲ್ಲ. ಮಾಲೀಕತ್ವದ ವ್ಯಾಪಾರವು ಹೆಚ್ಚು ನಡೆಯುವುದರಿಂದ. ನೇಯುವ ನೇಕಾರರಿಗೆ ಸಂಬಳ ಕಡಿಮೆ ಸಿಗುತ್ತಿದೆ. ಈ ಸಾಂಪ್ರದಾಯಿಕ ಉತ್ಪನ್ನಗಳ ಬೇಡಿಕೆಗಳು ದಿನದಿಂದ ದಿನಕ್ಕೆ ಕಡಿಮೆಯಾಗುತ್ತಾ ಸಾಗುತ್ತಿವೆ. ಇಂದು ನೇಕಾರರು ಮಾತ್ರ ವಲಸೆ ಹೋಗಿ ದುಡಿಯುವಂತ ಸ್ಥಿತಿ ಒದಗಿದೆ. ಇಂದು ನೇಕಾರರ ಜೊತೆಗೆ ಅಲ್ಲದೆ ಮಾಲೀಕರು ಸಣ್ಣ ನಗರಗಳಿಗೆ ಹೋಗಿ ವ್ಯಾಪಾರ ಅಥವಾ ಅಂಗಡಿ ಹಾಕಿಕೊಂಡು ಜೀವನ ನಡೆಸುತ್ತಿರುವುದು ಕಂಡುಬರುತ್ತದೆ. ಇಲ್ಲಿ ಸಾಂಪ್ರದಾಯಿಕ ಉಡುಪಿಗೆ, ಸರಿಯಾದ ಬೆಲೆ ನಿಖರವಾಗಿರದೆ ಇರುವುದು, ಕಚ್ಚಾ ನೂಲಿನ ದರ ಹೆಚ್ಚಾಗಿರುವುದರಿಂದ ನೇಕಾರಿಕೆಯಲ್ಲಿ ಕಡಿಮೆ ಪ್ರಮಾಣದಲ್ಲಿ ಉತ್ಪಾದನೆ ಮಾಡುವಂತ ಸ್ಥಿತಿ ನೇಕಾರರಿಗೆ ಒದಗಿಬಂದಿದೆ. ಆದ್ದರಂದ ನೇಕಾರರು ಹಾಗೂ ಮಾಲೀಕರು ವಲಸೆ ಹೋಗಿ ಜೀವನ ನಿರ್ವಹಿಸುವಂತ ವಾತಾವರಣ ನಿರ್ಮಾಣವಾಗಿದೆ.

**ಒಗ್ಗಟಿಲ್ಲದ ಸಾಮಾಜಿಕ ಜೀವನ**

ನೇಕಾರರು ಸಹಕಾರಿ ಸಂಘಗಳಲ್ಲಿ ಸದಸ್ಯತ್ವ ಪಡೆದಿದ್ದರು ಅವರು ನೇಕಾರಿಕೆ ವೃತ್ತಿಗೆ ಮಾಲೀಕರನ್ನು ಅವಲಂಭಿಸಿರುವುದು ಕಂಡುಬರುತ್ತದೆ. ನೇಕಾರರಲ್ಲಿ ಒಗ್ಗಟ್ಟು ಸ್ವಲ್ಪ ಪ್ರಮಾಣದಲ್ಲಿ ಕಡಿಮೆಯಿದೆ. ಈ ಒಗ್ಗಟ್ಟು ಸಮುದಾಯಿಕವಾಗಿರುತ್ತದೆ ಆದರೆ ವೃತ್ತಿಪರ ಒಗ್ಗಟ್ಟು ಇಲ್ಲಿ ಕಂಡುಬರುವುದಿಲ್ಲ. ನೇಕಾರ ಸಹಕಾರಿ ಸಂಘಗಳಲ್ಲಿ ಒಳ್ಳೆಯ ಸಂಘಟನೆಯ ಸಂಘಗಳು ನೇಕಾರರಿಗೆ ಸಮತೋಲನದ ಉದ್ಯೋಗವನ್ನು ನೀಡುತ್ತಿರುವ ಪ್ರಮಾಣ ಅದಕ್ಕೆ ಕಾರಣ. ಆದರೆ ಆರ್ಥಿಕ ಸಮಸ್ಯೆಯಿಂದ ಕೂಡಿರುವ ನೇಕಾರ ಸಂಘಗಳು ತಮ್ಮ ನೇಕಾರರಿಗೆ ನಿರಂತರ ಉದ್ಯೋಗವನ್ನು ನೀಡುವಲ್ಲಿ ವಿಫಲವಾಗುತ್ತಿವೆ. ಆದ್ದರಿಂದ ನೇಕಾರರು ಮಾಲೀಕರ ವರ್ಗದ ಜೊತೆಗೆ ನೇಕಾರಿಕೆ ಮಾಡಲು ಸಂಪರ್ಕಿಸಬೇಕಾಗಿದೆ. ಈ ಸಮುದಾಯಗಳು ತಮ್ಮ ಸಮಸ್ಯೆಗಳ ಪರಿಹರಿಸುವಲ್ಲಿ ಹಲವಾರು ಸಂಘ ಸಂಸ್ಥೆಗಳನ್ನು ಕಟ್ಟಿಕೊಂಡಿವೆ. ಆದ್ದರಿಂದ ಒಂದು ವೃತ್ತಿಯ ನಿರಂತರಕ್ಕೆ ಮಾಲೀಕರ ಶೋಷಣೆಗೆ ನೇಕಾರರು ಒಳಗಾಗಿದ್ದಾರೆ. ಸಮುದಾಯಗಳ ಸಂಘಟನೆಯಲ್ಲಿ ನೇಕಾರಿಕೆಯನ್ನು ಮರೆತು

ಸಮಾಜದ ಹಿತಕ್ಕಾಗಿ ವೃತ್ತಿ ಒಗ್ಗಟ್ಟನ್ನು ಕಳೆದುಕೊಳ್ಳುತ್ತಿದ್ದಾರೆ. ಈ ನೇಕಾರಿಕೆಯ ಸಮುದಾಯಗಳಲ್ಲಿ ವೃತ್ತಿ ಒಗ್ಗಟ್ಟು ಕೂಡಿಕೊಂಡರೆ ಮುಂದೊಂದು ದಿನ ನೇಕಾರರೂ ತಮ್ಮ ಉತ್ತಮ ಸ್ಥಿತಿಗೆ ಹಾಗೂ ಘತಕಾಲದ ನೇಕಾರರ ವೈಭವ ಮರುಕಳಿಸಬಹುದು.

**ಸಾಮಾಜಿಕ ಸಮಸ್ಯೆಗಳನ್ನು ಎದುರಿಸುತ್ತಿರುವ ನೇಕಾರರು**

ನೇಕಾರಿಕೆ ವೃತ್ತಿಯನ್ನು ಯಾವುದೇ ಸಮುದಾಯದವರು ಅಳವಡಿಸಿಕೊಂಡಿದ್ದರು ಅವರಿಗೆ ಈ ಎಲ್ಲ ಸಮಸ್ಯೆಗಳನ್ನು ಅನುಭವಿಸುತ್ತಿರುವುದು ಕಂಡುಬರುತ್ತದೆ. ಸಾಮಾಜಿಕವಾದ ಪ್ರಮುಖ ಸಮಸ್ಯೆಗಳೆಂದರೆ. ನೇಕಾರರಿಗೆ ಅಲ್ಪ ಮಾನ್ಯತೆ ಇರುವುದು ಕಂಡುಬರುತ್ತಿದೆ. ನೇಕಾರರು ಸಾಮಾಜಿಕ ನಿಂದನೆಗೆ ಒಳಗಾಗುತ್ತಿದ್ದಾರೆ. ಮಾಲೀಕರ ಹಾಗೂ ನೇಕಾರರ ನಡುವೇ ಒಂದು ಅವಿನಾಭಾವ ಸಂಬಂಧ ಹೊಂದಿದ್ದರೂ. ಅದು ಕಂಡುಬರುತ್ತಿಲ್ಲ. ಸಮಾಜದಲ್ಲಿ ನೇಕಾರಿಕೆ ವೃತ್ತಿ ಮಾಡುತ್ತಿರುವವರನ್ನು ನೋಡುವ ದೃಷ್ಟಿಕೋನ ಬದಲಾಗಿದೆ. ಮೊದಲು ಮಗ್ಗಗಳನ್ನು ನೋಡಿ ಹೆಣ್ಣು ಗಂಡು ವಿಚಾರಗಳು ನಡೆಯುತ್ತಿದ್ದವು. ಇಂದು ಮಗ್ಗ ಇದ್ದಾವೆ ಎಂದರೆ? ಆ ಮನೆಗೆ ಹೆಣ್ಣನ್ನು ಕೊಡದಿರುವ ಪ್ರಸಂಗಗಳು ನೆಡದಿವೆ. ಅನಕ್ಷರತೆಯ ಕೊರತೆಯಿಂದ ಸಮಾಜದಲ್ಲಿ ಅವಕಾಶಗಳಿಂದ ವಂಚಿತರಾಗುತ್ತಿದ್ದಾರೆ. ಅನೈತಿಕತೆ, ದುರಾಬ್ಯಾಸಗಳು, ಅರಿವಿನಕೊರತೆ, ಕೌಟುಂಬಿಕ ಕಲಹಗಳು, ನೆರೆಹೊರೆ ಸಂಬಂಧದಲ್ಲಿ ವಿವಾಹಗಳು ಮುಂತಾದ ಸಮಸ್ಯೆಗಳಿಂದ ನೇಕಾರ ಸಮುದಾಯಗಳು ಇಂದು ನೇಕಾರಿಕೆಯನ್ನು ಬಿಟ್ಟು ವಲಸೆ ಹೋಗಿ ಇತರೆ ಉದ್ಯೋಗಳನ್ನು ಅನುಸರಿಸಿ ಜೀವನ ಸಾಗಿಸುತ್ತಿದ್ದಾರೆ. ಸ್ವಂತ ಬೀಡಿ, ಚಹಾದ ಅಂಗಡಿಗಳನ್ನು ಇತರೆ ಸಣ್ಣಪುಟ್ಟ ವ್ಯಾಪಾರ ಮಾಡಿಕೊಂಡು ಜೀವನ ನಡೆಸುತ್ತಿದ್ದಾರೆ. ಇಂತಹ ಸಮಸ್ಯೆಗಳಿಗೆ ನೇಕಾರರು ವೃತ್ತಿ ಬದುಕಿಗಾಗಿ ಹೊರಾಟ ಮಾಡಬೇಕಾಗಿದೆ.

**ಆರ್ಥಿಕ ಸಮಸ್ಯೆಗಳ ಸುಳಿಯಲ್ಲಿ ನೇಕಾರರು**

ಈ ವೃತ್ತಿಯ ಬದುಕು ಇರುವುದು, ಬಂಡವಾಳದ ಹಾದಿಯಲ್ಲಿ. ನೇಕಾರ ಸಹಕಾರಿ ಸಂಘಗಳ ನೇಕಾರರಿಗೂ ಹಲವಾರು ಆರ್ಥಿಕ ಸಮಸ್ಯೆಗಳಿರುವುದು ಕಂಡುಬರುತ್ತಿದೆ. ಅವುಗಳಲ್ಲಿ ಬಂಡವಾಳದ ಕೊರತೆ, ಕಚ್ಚಾ ಮಾಲು ಕೊರತೆ ಬೆಲೆ ಏರಿಕೆ, ಮಾರಾಟದ ಸಮಸ್ಯೆ, ಹಾಗೂ ವಿನ್ಯಾಸಗಳ ಬದಲಾವಣೆ, ಸಾಲದ ವ್ಯವಸ್ಥೆಯ ಸಮಸ್ಯೆ, ಉತ್ಪಾದನಾ ವಸ್ತುಗಳ ಬೆಲೆ ಏರಿಕೆ ಹಾಗೂ ದಿಡೀರ ಇಳಿಕೆ ಮತ್ತು ನಿರಂತರ ಇಳಿಕೆಯು ನೇಕಾರ ಹಾಗೂ ಸಹಕಾರಿ ಸಂಘಗಳ ಮೇಲೆ ಪರಿಣಾಮ ಬೀರುತ್ತಿದೆ. ಅಲ್ಲದೆ ನೇಕಾರರಿಗೆ ಕಡಿಮೆ ಕೂಲಿ, ಬಾಕಿರಹಿತ ನೇಕಾರಿಕೆ ಮಾಡುವುದು, ದುಷ್ಚಟಗಳು ಮುಂತಾದವುಗಳ ಸಮಸ್ಯೆಗಳನ್ನು ಎದುರಿಸುತ್ತಾರೆ. ನೇಕಾರರ ಉತ್ಪನ್ನಗಳಿಗೆ ಪ್ರಚಾರದ ಕೊರತೆ ಎದ್ದು ಕಾಣುತ್ತದೆ. ಆರ್ಥಿಕ ಸಮಸ್ಯೆಗಳನ್ನು ನೇಕಾರರು ಸಮುದಾಯದ ಜನರು ಹಿಂದಿನಿಂದಲೂ ಇಂದಿನವರೆಗೂ ಅನುಭವಿಸುತ್ತಾ ಬಂದಿದ್ದಾರೆ.

ಸರ್ಕಾರದ ಬಂಡವಾಳ ಹೂಡಿಕೆ ಕಡಿಮೆಯಾಗುತ್ತಿರುವುದು ಮತ್ತು ಗ್ರಾಹಕರು ದೂರ ಸರಿಯುವಿಕೆ ಹೆಚ್ಚಾಗುತ್ತಿರುವುದು ಇದರ ಸುವ್ಯಸ್ತೆಗೆ ಪ್ರಮುಖ ಕಾರಣ. ಈ ಕ್ಷೇತ್ರದ ಎಲ್ಲ ಚಟುವಟಿಕೆಗಳು ವ್ಯಾಪಾರಿ ಉದ್ಯಮಿಗಳಿಂದ ಮತ್ತು ನೇಕಾರರಿಂದ ನಡೆಸಲ್ಪಡುತ್ತಿವೆ.

ವ್ಯಾಪಾರದ ಕೊರತೆಯಿಂದ ನೇಕಾರರು ಉಪವಾಸ ವಿದ್ದು ಸತ್ತಿರುವ ಉದಾಹರಣೆಗಳಿವೆ. ರೇಷ್ಮೆ ಬೆಳೆಗಾರರು ಹಾಗೂ ನೇಕಾರರು ಸಾಲದ ಹೊರೆಯಿಂದ ತಪ್ಪಿಸಿ ಕೊಳ್ಳಲಾಗದೆ ಆತ್ಮಹತ್ಯೆ ಮಾಡಿಕೊಂಡದ್ದಕ್ಕೆ

.

## ಆರೋಗ್ಯ ಸಂಬಂಧಿ ಸಮಸ್ಯೆಗಳಲ್ಲಿ ನೇಕಾರರು

ಈ ನೇಕಾರಿಕೆಗಳಲ್ಲಿ ವಿವಿಧ ಗುಂಪುಗಳಾಗಿ ವೃತ್ತಿಯನ್ನು ನಿರ್ವಹಿಸುವುದರಿಂದ ನೇಕಾರರು ನೇಯ್ಗೆ ನೇಯುವುದು, ಉಂಕಿ ಸುತ್ತುವದು, ಪಾಗಡಿ ಹೋಡುವುದು, ರಾಸಾಯಣಿಕ ಬಣ್ಣಗಳಿಂದ ಕೂಡಿರುವ ಏಳೆಗಳನ್ನು ಎಲ್ಲ ರೀತಿಯ ಅಂಗಗಳಾದ ಕಿವಿ, ಕಣ್ಣು, ಕೈ ಕಾಲುಗಳ ಮೂಲಕ ಕೆಲಸವನ್ನು ಮಾಡುವುದರಿಂದ ಹಲವಾರು ಆರೋಗ್ಯ ಸಂಬಂಧಿ ರೋಗಗಳು ನೇಕಾರರಿಗೆ ಆವರಿಸುತ್ತಿರುವುದು ಕಂಡುಬರುತ್ತಿವೆ. ಅವುಗಳಲ್ಲಿ ನೇಕಾರರಿಗೆ ಸಾಮಾನ್ಯವಾಗಿ ಬೆನ್ನಿನ ಸ್ನಾಯು ನೋವು, ಕೀಲು ನೋವು ಮತ್ತು ಕಿಬ್ಬೊಟ್ಟೆ ನೋವು ಸಾಮಾನ್ಯವಾಗಿ ಕಂಡು ಬರುತ್ತದೆ. ಕಣ್ಣಿನ ಸಮಸ್ಯೆ, ಮೈ ಕೈ ಗಳನೋವು, ಟಿ.ಬಿ., ಆನೆಕಾಲು ರೋಗ ಹಾಗೂ ಕಣ್ಣಿಗೆ ಕಾಣುವ ಪರಿಗಳಲ್ಲಿನ ನೋವುಗಳು ಕಂಡುಬರುತ್ತವೆ. ಬಣ್ಣದ ಕೆಲಸಗಾರರಿಗೆ ಚರ್ಮ ಜಡ್ಡುಗಟ್ಟುವಿಕೆ, ಚರ್ಮದ ಕಲೆಗಳು, ತುಂಡಾಗುವುದು, ಸುಟ್ಟು ಹೋಗುವುದು, ಬಿರುಕು ಮತ್ತು ಚರ್ಮದ ಇತರೆ ಸಮಸ್ಯೆಗಳಿಂದ ಬಳಲುತ್ತಿದ್ದಾರೆ. ಹರ್ನಿಯಾ , ಕಡಿಮೆ ಅಥವಾ ಹೆಚ್ಚಿನ ರಕ್ತ ದೊತ್ತಡ, ಹಸಿವು ಮತ್ತು ನಿದ್ರಾಹೀನತೆ, ಶಕ್ತಿಹೀನತೆ, ಹೊಟ್ಟೆ ಕೆಡುವುದು, ಜಠರ ವ್ಯಾಧಿ, (ಗ್ಯಾಸ್ಟ್ರಿಕ್) ವಾಂತಿಯಲ್ಲದೆ ತೀರಾ ಪರಿಶ್ರಮದ ಪರಿಸರ ಹಾಗೂ ಸಮಯಕ್ಕೆ ಸರಿಯಾಗಿ ಆಹಾರ ಸೇವಿಸದ ಕಾರಣ ಹಲವು ದೈಹಿಕ ೧೮ ಸಮಸ್ಯೆಗಳು ಕಾಣಿಸಿಕೊಳ್ಳುತ್ತವೆ. ಬೇನ್ನು ನೋವು, ಕ್ಯಾನ್ಸರ್, ಹ್ರದ್ರೋಗ ಮತ್ತು ಮೂತ್ರ ಪಿಂಡ ಸಮಸ್ಯೆಗಳು ಹಾಗೂ ಒಳ ಬಾಂಧವ್ಯದಲ್ಲಿ ವಿವಾಹವು ಹೆಚ್ಚಾಗಿರುವುದರಿಂದ ಹುಟ್ಟುವ ಮಕ್ಕಳಲ್ಲಿ ಪೌಷ್ಟಿಕತೆಯ ಕೊರತೆ ಹಾಗೂ ಅಂಗವಿಕಲತೆ ಮುಂತಾದ ಆರೋಗ್ಯ ಸಂಬಂಧಿ ಸಮಸ್ಯೆಗಳು ಕೈಮಗ್ಗ ನೇಕಾರರಲ್ಲಿ ಕಂಡುಬರುತ್ತವೆ.

**ಶೈಕ್ಷಣಿಕ ಸಮಸ್ಯೆಗಳು:**

ಶಿಕ್ಷಣವು ಒಂದು ಪ್ರಮುಖ ಘಟ್ಟ, ಶಿಕ್ಷಣವು ಇಗ ಸಾರ್ವತಿಕವಾಗಿದೆ. ಬಡತನ ನಿವಾರಣೆಗೆ ಶಿಕ್ಷಣ ಒಂದು ಮುಖ್ಯ ಮಾರ್ಗವಾಗಿದ್ದು, ಇದು ಜೀವನದ ನಾಡಿಯಾಗಿದೆ. ಶಿಕ್ಷಣವೇ ಶಕ್ತಿ ಎಂದು ತಿಳಿದ ನೇಕಾರರೂ ತಮ್ಮ ಮಕ್ಕಳಿಗೆ ಇಂದು ಒಳ್ಳೆಯ ಶಿಕ್ಷಣವನ್ನು ನೀಡುತ್ತಿದ್ದಾರೆ. ಪ್ರಾಥಮಿಕ, ಪ್ರೌಢಶಿಕ್ಷಣವನ್ನು ನೇಕಾರರು ತಮ್ಮ ಮಕ್ಕಳಿಗೆ ನೀಡುತ್ತಿದ್ದಾರೆ. ಕಾಲೇಜು ಶಿಕ್ಷಣವನ್ನು ನೋಡಿದರೆ ಕಡಿಮೆ ಪ್ರಮಾಣದಲ್ಲಿರುವುದು ಕಂಡುಬರುತ್ತದೆ. ಮಹಿಳೆಯರಿಗೂ ಪುರುಷರಷ್ಟೇ ಸಮನಾದ ಶಿಕ್ಷಣ ನೀಡುತ್ತದ್ದಾರೆ. ಸರಕಾರ ಸೌಲಭ್ಯಗಳಿಂದ ನೇಕಾರರ ಮಕ್ಕಳು ಕನಿಷ್ಠ ಮಟ್ಟದ ಶಿಕ್ಷಣ ಪಡೆಯುತ್ತಿರುವುದು ಕಂಡುಬಂದಿದೆ. ಉನ್ನತ ಶಿಕ್ಷಣ ಕೊಡಿಸುವಂತಹ ಆರ್ಥಿಕ ಸ್ಥಿತಿವಂತರೂ ನೇಕಾರರಲ್ಲಿ ಬಹಳ ಕಡಿಮೆ. ಹೀಗಾಗಿ ಉನ್ನತ ಶಿಕ್ಷಣದ ಕೊರತೆ ಇವರಲ್ಲಿ ಎದ್ದುಕಾಣುತ್ತದೆ.

## ೪.೨. ದಾಖಲಾತಿ ವಿಶ್ಲೇಷಣೆ ಮತ್ತು ವಿವರಣೆ

# ನೇಕಾರರ ಸ್ಥಿತಿಗತಿ

| ಕೋಷ್ಟಕ ನಂ–೫.೩೧<br>ಪ್ರತಿಕ್ರಿಯಿಸಿದವರ ಸಂಖ್ಯೆ ಹಾಗೂ ಅವರ ವಯಸ್ಸು | | | |
|---|---|---|---|
| ಅ.ನಂ | ಪ್ರತಿಕ್ರಿಯಿಸಿದವರ ವಯಸ್ಸು | ಪ್ರತಿಕ್ರಿಯಿಸಿದವರ ಸಂಖ್ಯೆ | % |
| ೧ | ೩೦ಕ್ಕಿಂತಲೂ ಕಡಿಮೆ | ೦೮ | ೦೮ |
| ೨ | ೩೦–೪೫ | ೪೪ | ೪೪ |
| ೩ | ೪೬–೬೦ | ೪೪ | ೪೪ |
| ೪ | ೬೦ ಮೇಲ್ಪಟ್ಟು | ೦೪ | ೦೪ |
| | ಒಟ್ಟು | ೧೦೦ | ೧೦೦ |

ಈ ಮೇಲಿನ ಕೋಷ್ಟಕವು(ನಂ–೧) ನೇಕಾರರ ಕುಟುಂಬಗಳಲ್ಲಿನ ಪ್ರತಿಕ್ರಿಯಿಸಿದವರ ಸಂಖ್ಯೆ ಹಾಗೂ ಅವರ ವಯಸ್ಸು ತಿಳಿಸುತ್ತದೆ. ಈ ನೇಕಾರರ ಕುಟುಂಬಗಳ ಸಮೀಕ್ಷೆಯಲ್ಲಿ ಪ್ರತಿಕ್ರಿಯಿಸಿದವರಲ್ಲಿ ೩೦ಕ್ಕಿಂತಲೂ ಕಡಿಮೆ ವಯಸ್ಸಿನವರ ಸಂಖ್ಯೆ ೮(೮%)ರಷ್ಟಿದೆ. ಸಮೀಕ್ಷೆಯಲ್ಲಿ ಪ್ರತಿಕ್ರಿಯಿಸಿದವರಲ್ಲಿ ೩೦–೪೫ ವಯಸ್ಸಿನವರ ಸಂಖ್ಯೆ ೪೪(೪೪%)ರಷ್ಟಿದೆ. ಸಮೀಕ್ಷೆಯಲ್ಲಿ ಪ್ರತಿಕ್ರಿಯಿಸಿದವರಲ್ಲಿ ೪೬–೬೦ ವಯಸ್ಸಿನವರ ಸಂಖ್ಯೆ ೪೪(೪೪%)ರಷ್ಟಿದೆ. ಸಮೀಕ್ಷೆಯಲ್ಲಿ ಪ್ರತಿಕ್ರಿಯಿಸಿದವರಲ್ಲಿ ೬೦ಕ್ಕೂ ಮೇಲ್ಪಟ್ಟ ವಯಸ್ಸಿನವರ ಸಂಖ್ಯೆ ೪(೪%)ರಷ್ಟಿದೆ. ಒಟ್ಟಾರೆ ಸಮೀಕ್ಷೆಯಲ್ಲಿ ಪ್ರತಿಕ್ರಿಯಿಸಿದವರ ಶೇ ೮೮ರಷ್ಟು ಮಧ್ಯಮ ವಯಸ್ಸಿನ ಜನರು ಹೆಚ್ಚಾಗಿ ಕಂಡುಬರುತ್ತಾರೆ.

| ಕೋಷ್ಟಕ ನಂ–೨<br>ನೇಕಾರ ಕುಟುಂಬಗಳ ಜನಸಂಖ್ಯೆ | | | |
|---|---|---|---|
| ಅ.ನಂ | ಲಿಂಗ | ಜನಸಂಖ್ಯೆ | % |
| ೧ | ಪುರುಷರು | ೨೯೯ | ೫೩.೬೮ |
| ೨ | ಮಹಿಳೆಯರು | ೨೫೮ | ೪೬.೩೨ |
| | ಒಟ್ಟು ಜನಸಂಖ್ಯೆ | ೫೫೭ | ೧೦೦ |

ಈ ಮೇಲಿನ ಕೋಷ್ಟಕವು(ನಂ–೨) ನೇಕಾರರ ಕುಟುಂಬಗಳಲ್ಲಿನ ಜನಸಂಖ್ಯೆಯನ್ನು ಸೂಚಿಸುತ್ತದೆ. ಈ ಅಧ್ಯಯನದಲ್ಲಿ ಒಟ್ಟಾರೆ ಕುಟುಂಬಗಳ ಜನಸಂಖ್ಯೆಯನ್ನು ವರ್ಗೀಕರಿಸಿದಾಗ ಪುರುಷರ ಸಂಖ್ಯೆಯು ೨೯೯(ಶೇ. ೫೩.೬೮ %) ರಷ್ಟಿದೆ. ಅಷ್ಟೇ ಸಮಾನವಾಗಿ, ಸ್ವಲ್ಪ ಕಡಿಮೆ ಅಂತರದಲ್ಲಿ ಅಂದರೆ ೨೫೮(ಶೇ ೪೬.೩೨)

ಮಹಿಳೆಯರು ಇದ್ದಾರೆ. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ಲಿಂಗ ಅಸಮಾನತೆಯು ಸ್ವಲ್ಪವೇ ಪ್ರಮಾಣದಲ್ಲಿರುವುದು ಸ್ಪಷ್ಟವಾಗುತ್ತದೆ.

**ಕೋಷ್ಟಕ ನಂ–೩**
**ನೇಕಾರ ಕುಟುಂಬಗಳ ಸದಸ್ಯರ ವಯೋಮಿತಿಯ ಮಾಹಿತಿ**

| ಅ.ನಂ | ವಯಸ್ಸು | ಜನಸಂಖ್ಯೆ | % | ಪುರುಷರು | % | ಮಹಿಳೆಯರು | % |
|---|---|---|---|---|---|---|---|
| ೧ | ೧ ರಿಂದ ೪ | ೩೦ | ೦೫.೩೮ | ೧೯ | ೦೩.೪೧ | ೧೧ | ೦೧.೯೭ |
| ೨ | ೫ ರಿಂದ ೧೩ | ೭೧ | ೧೨.೭೪ | ೩೮ | ೦೬.೮೨ | ೩೨ | ೦೫.೭೪ |
| ೩ | ೧೪ ರಿಂದ ೨೦ | ೭೮ | ೧೪.೦೦ | ೪೫ | ೦೮.೦೭ | ೩೪ | ೦೬.೧೦ |
| ೪ | ೨೧ ರಿಂದ ೪೦ | ೧೮೯ | ೩೩.೯೪ | ೯೯ | ೧೭.೭೭ | ೯೦ | ೧೬.೧೫ |
| ೫ | ೪೧ ರಿಂದ ೬೦ | ೧೩೦ | ೨೩.೩೨ | ೬೯ | ೧೨.೩೮ | ೬೧ | ೧೧.೦೦ |
| ೬ | ೬೧ ರಿಂದ ಮೇಲ್ಪಟ್ಟು | ೫೯ | ೧೦.೬೨ | ೨೯ | ೦೫.೨೦ | ೩೦ | ೦೫.೩೯ |
| | ಒಟ್ಟು | ೫೫೭ | ೧೦೦ | ೨೯೯ | ೫೩.೬೫ | ೨೫೮ | ೪೬.೩೫ |

ಈ ಮೇಲಿನ ಕೋಷ್ಟಕವು(ನಂ–೩) ನೇಕಾರರ ಕುಟುಂಬಗಳಲ್ಲಿನ ಸದಸ್ಯರ ವಯೋಮಿತಿಯನ್ನು ತಿಳಿಸುತ್ತದೆ. ಒಟ್ಟು ಈ ಅಧ್ಯಯನದಲ್ಲಿ ಒಟ್ಟಾರೆ ಕುಟುಂಬಗಳ ಸದಸ್ಯರ ವಯೋಮಿತಿಯು ಜನಸಂಖ್ಯೆ ನೋಡಿದಾಗ ೦ ರಿಂದ ೪ ವಯಸ್ಸಿನ ಮಕ್ಕಳು ೩೦(೦೫.೩೮%)ರಷ್ಟಿದೆ. ೫ ರಿಂದ ೧೩ ವಯೋಮಿತಿಯ ಜನಸಂಖ್ಯೆ ನೋಡಿದಾಗ ೭೧(೧೨.೭೪%) ರಷ್ಟಿದೆ. ೧೪ ರಿಂದ ೨೦ ವಯೋಮಿತಿಯ ಜನಸಂಖ್ಯೆ ನೋಡಿದಾಗ ೭೮(೧೪.೦೦%)ರಷ್ಟಿದೆ. ೨೧ ರಿಂದ ೪೦ ವಯೋಮಿತಿಯ ಜನಸಂಖ್ಯೆ ನೋಡಿದಾಗ ೧೮೯(೩೩.೯೪)ರಷ್ಟಿದೆ. ೪೧ ರಿಂದ ೬೦ ವಯೋಮಿತಿಯ ಜನಸಂಖ್ಯೆ ನೋಡಿದಾಗ ೧೩೦(೨೩.೩೨%)ರಷ್ಟಿದೆ. ೬೧ರಿಂದ ಮೇಲ್ಪಟ್ಟು ವಯೋಮಿತಿಯ ಜನಸಂಖ್ಯೆ ನೋಡಿದಾಗ ೫೯(೧೦.೬೨%)ರಷ್ಟಿದೆ. ಇಲ್ಲಿ ಮುಖ್ಯವಾದ ಅಂಶವೆಂದರೆ, ಮೂರನೆಯ ಒಂದು ಭಾಗದಷ್ಟು ಅಂದರೆ ಶೇ ೩೩.೯೪ ರಷ್ಟು ಜನರು ೨೦ ರಿಂದ ೪೦ ವಯಸ್ಸಿನವರಾಗಿದ್ದು, ಅವರೆಲ್ಲರೂ ನೇಕಾರಿಕೆಯಲ್ಲಿ ಸಕ್ರೀಯರಾಗಿದ್ದಾರೆ.

**ಕೋಷ್ಟಕ ನಂ–೪**
**ನೇಕಾರ ಕುಟುಂಬಗಳ ವೈವಾಹಿಕ ಸ್ಥಿತಿಗತಿ**

| ಅ.ನಂ | ವೈವಾಹಿಕ ಸ್ಥಿತಿಗತಿ | ಜನಸಂಖ್ಯೆ | % |
|---|---|---|---|
| ೧ | ಮದುವೆ ಆದವರು | ೩೧೬ | ೫೬.೭೪ |
| ೨ | ಇನ್ನೂ ಆಗದೆ ಇರುವವರು | ೨೪೧ | ೪೩.೨೬ |
| | | | |
| | | | |
| | ಒಟ್ಟು ಜನಸಂಖ್ಯೆ | ೫೫೭ | ೧೦೦ |

ಈ ಮೇಲಿನ ಕೋಷ್ಟಕವು(ನಂ-೪) ನೇಕಾರರ ಕುಟುಂಬಗಳಲ್ಲಿನ ಸದಸ್ಯರ ವೈವಾಹಿಕ ಸ್ಥಿತಿಗತಿಗಳ ಬಗ್ಗೆ ತಿಳಿಸುತ್ತದೆ. ಒಟ್ಟು ಪ್ರತಿಕ್ರಿಯಿಸಿದವರ ಕುಟುಂಬಗಳಲ್ಲಿ ಹೆಚ್ಚಾಗಿ ೩೧೬(೫೬.೭೬%)ರಷ್ಟು ಜನರು ಮದುವೆಯಾದವರಾಗಿದ್ದಾರೆ. ಇನ್ನೂಳಿದ ೨೪(೪೩.೨೬%)ರಷ್ಟು ಜನರು ವೈವಾಹಿಕ ಜೀವನಕ್ಕೆ ಕಾಲಿಡದವರಾಗಿದ್ದಾರೆ. ಇಲ್ಲಿ ವೈವಾಹಿಕ ಜೀವನವು ವೈಯಕ್ತಿಕ ಜೀವನದ, ನೇಕಾರರ ಕುಟುಂಬ ಹಾಗೂ ನೇಕಾರಿಕೆಯ ವೃತ್ತಿ ಬದುಕಿನ ಮೇಲೆ ಪರಿಣಾಮ ಬೀರುತ್ತದೆ.

**ಕೋಷ್ಟಕ-೫**

**ನೇಕಾರರ ಕುಟುಂಬಗಳ ಶೈಕ್ಷಣಿಕ ಜೀವನದ ಮಾಹಿತಿ**

| ಅ.ನಂ | ಶಿಕ್ಷಣ | ಜನಸಂಖ್ಯೆ | % |
|---|---|---|---|
| ೧ | ಯಾವುದೇ ಶಿಕ್ಷಣ ಪಡೆಯದವರು | ೧೨೬ | ೨೨.೬೨ |
| ೨ | ೧ ರಿಂದ ೫ನೇ ತರಗತಿ | ೧೩೨ | ೨೩.೭೦ |
| ೩ | ೬ ರಿಂದ ೧೦ನೇ ತರಗತಿ | ೧೯೧ | ೩೪.೩೦ |
| ೪ | ಪಿ.ಯು.ಸಿ. | ೩೭ | ೦೬.೬೪ |
| ೫ | ಪದವಿ | ೩೧ | ೦೫.೫೬ |
| ೬ | ಸ್ನಾತಕೋತ್ತರ ಪದವಿ | ೦೭ | ೦೧.೨೬ |
| ೭ | ತಾಂತ್ರಿಕ ಶಿಕ್ಷಣ (ಡಿಪ್ಲೋಮಾ, ಇಚಿಜನಿಯರಿಂಗ್ ಮತ್ತು ಐ.ಟಿ.ಐ) | ೨೫ | ೦೪.೫೦ |
| ೮ | ಇತರೆ ಶಿಕ್ಷಣ (ನರ್ಸಿಂಗ್ ಮತ್ತು ವೈದ್ಯಕೀಯ ಕ್ಷೇತ್ರ) | ೦೮ | ೦೧.೪೨ |
| | ಒಟ್ಟು | ೫೫೭ | ೧೦೦ |

ಈ ಮೇಲಿನ ಕೋಷ್ಟಕವು(ನಂ-೫) ನೇಕಾರರ ಕುಟುಂಬಗಳಲ್ಲಿನ ಸದಸ್ಯರ ಶೈಕ್ಷಣಿಕ ಜೀವನದ ಚಿತ್ರಣವನ್ನು ತೆರೆದಿಡುತ್ತದೆ. ಇಲ್ಲಿ ಯಾವುದೇ ಶಿಕ್ಷಣವನ್ನು ಪೂರೈಸಿದ ನೇಕಾರ ಸದಸ್ಯರು ೧೨೬(೨೨.೬೨)ರಷ್ಟಿದೆ. ೧ ರಿಂದ ೫ನೇ ತರಗತಿಯನ್ನು ಪೂರೈಸಿದ ನೇಕಾರ ಸದಸ್ಯರು ೧೩೨(೨೩.೭೦%)ರಷ್ಟಿದೆ. ೬ ರಿಂದ ೧೦ನೇ ತರಗತಿ ಪೂರೈಸಿರುವ ನೇಕಾರ ಸದಸ್ಯರು ೧೯೧(೩೪.೩೦%)ರಷ್ಟಿದೆ. ಪಿ.ಯು.ಸಿ. ಪಡೆದವರ ನೇಕಾರ ಸದಸ್ಯರು ೩೭(೦೬.೬೪%)ರಷ್ಟಿದೆ. ಪದವಿ ಪಡೆದವರ ನೇಕಾರ ಸದಸ್ಯರು ೩೧(೦೫.೫೬%)ರಷ್ಟಿದೆ. ಸ್ನಾತಕೋತ್ತರ ಪದವಿ ಪಡೆದವರ ನೇಕಾರ ಸದಸ್ಯರು ೦೭(೦೧.೨೬%)ರಷ್ಟಿದು. ತಾಂತ್ರಿಕ ಶಿಕ್ಷಣ ಪಡೆದವರ ನೇಕಾರ ಸದಸ್ಯರು ೨೫(೦೪.೫೦%)ರಷ್ಟಿದೆ. ಇತರೆ ಶಿಕ್ಷಣ ಪಡೆದವರ ನೇಕಾರ ಸದಸ್ಯರು ೦೮(**೦೧.೪೨**)ರಷ್ಟಿದೆ. ಈ ನೇಕಾರರಲ್ಲಿ ೪೩೧ ರಷ್ಟು ಜನರು (೭೭.೩೭%) ಶೈಕ್ಷಣಿಕ ಜೀವನ ಮಟ್ಟವನ್ನು ಹೊಂದಿದ್ದಾರೆ.

| ಕೋಷ್ಟಕ-೬<br>ನೇಕಾರಿಕೆಯ ಕುಟುಂಬಗಳ ಹಾಗೂ ಸದಸ್ಯರ ಉದ್ಯೋಗದ ಮಾಹಿತಿ | | | |
|---|---|---|---|
| ಅ.ನಂ | ಉದ್ಯೋಗ | ಜನಸಂಖ್ಯೆ | % |
| ೧ | ನೇಕಾರಿಕೆ | ೨೯೬ | ೫೩.೧೪ |
| ೨ | ವ್ಯಾಪಾರ | ೦೨ | ೦೦.೩೫ |
| ೩ | ಕೂಲಿ | ೨೦ | ೦೩.೬೦ |
| ೪ | ವಲಸೆ/ಕೂಲಿ | ೧೭ | ೦೩.೦೫ |
| ೫ | ಸರಕಾರಿ | ೦೩ | ೦೦.೫೩ |
| ೬ | ಶಿಕ್ಷಣ ಪಡೆಯುತ್ತಿದಾರೆ | ೧೫೧ | ೨೭.೧೧ |
| ೭ | ಇತರೆ | ೧೯ | ೦೩.೪೨ |
| ೮ | ೦-೧೦ ವರ್ಷದ ಮಕ್ಕಳು | ೩೧ | ೦೫.೫೦ |
| ೯ | ವಯೋವೃದ್ದರು<br>(ಕೆಲಸ ಮಾಡಲಾಗದವರು) | ೧೮ | ೦೩.೩೦ |
| | ಒಟ್ಟು | ೫೫೭ | ೧೦೦ |

ಈ ಮೇಲಿನ ಕೋಷ್ಟಕವು(ನಂ-೬) ನೇಕಾರರ ಕುಟುಂಬಗಳಲ್ಲಿನ ಸದಸ್ಯರ ಉದ್ಯೋಗದ ಮಾಹಿತಿ ತೆರೆದಿಡುತ್ತದೆ. ಇಲ್ಲಿ ನೇಕಾರಿಕೆಯನ್ನು ಮಾಡುವಲ್ಲಿ ನಿರತರಾಗಿರುವ ನೇಕಾರಿಕೆಯ ಜನರು ೨೯೬ (೫೫.೧೪%)ರಷ್ಟಿದೆ. ನೇಕಾರರ ಕುಟುಂಬದಲ್ಲಿ ವ್ಯಾಪಾರವನ್ನು ಮಾಡುತ್ತಿರುವ ಜನರು ೦೨ (೦೦.೩೫%)ರಷ್ಟಿದೆ. ನೇಕಾರರ ಕುಟುಂಬದಲ್ಲಿ ಸ್ಥಳೀಯವಾಗಿ ಕೂಲಿ ಕೆಲಸದ ಜನರು ೨೦ (೦೩.೬೦%)ರಷ್ಟಿದೆ. ನೇಕಾರರ ಕುಟುಂಬದಲ್ಲಿ ವಲಸೆ ಹೋಗಿ ಕೂಲಿ ಮಾಡುತ್ತಿರುವ ಜನರು ೦೭ (೦೩.೦೫%)ರಷ್ಟಿದೆ. ನೇಕಾರರ ಕುಟುಂಬದಲ್ಲಿ ಸರಕಾರಿ ಸೇವೆಯಲ್ಲಿ ಜನರು ೦೩ (೦೦.೫೩)ರಷ್ಟಿದೆ. ನೇಕಾರರ ಕುಟುಂಬದಲ್ಲಿ ಶಿಕ್ಷಣವನ್ನು ಪಡೆದುಕೊಳ್ಳುತ್ತಿರುವ ಜನರ ೧೫೧ (೨೭.೧೧%)ರಷ್ಟಿದೆ. ನೇಕಾರರ ಕುಟುಂಬಗಳಲ್ಲಿ ಇತರೆ ದುಡಿಮೆಯಲ್ಲಿ ನಿರತರಾದ ಜನ ೧೯ (೩೧.೩೦%)ರಷ್ಟಿದೆ. ೦-೧೦ ವರ್ಷದ ಮಕ್ಕಳು ನೇಕಾರರ ಕುಟುಂಬಗಳಲ್ಲಿ ೩೧ (೦೫.೫೦%)ಕಂಡುಬರುತ್ತಾರೆ. ಅಲ್ಲದೆ ನೇಕಾರರ ಕುಟುಂಬದಲ್ಲಿ ವಯೋವೃದ್ದರು ಹಿರಿಯರು ಜನರು ೧೮ (೦೩.೩೦)ರಷ್ಟಿದೆ. ಈ ಒಟ್ಟು ಸರಾಸರಿ ಪರಿಶೀಲಿಸಿದಾಗ ನೇಕಾರಿಕೆಯಲ್ಲಿ ತೊಡಗಿಕೊಂಡವರ ಜನರು ೨೯೬ (೫೩.೧೪)ರಷ್ಟಿದೆ. ಈ ಜನರ ಸರಾಸರಿ ಒಂದು ಕುಟುಂಬದಲ್ಲಿ ೨ ರಿಂದ ೩ ಜನರು ಈ ಕೈಮಗ್ಗವನ್ನು ನೇಯುವುದು ಇವರ ಜೀವನದ ಬದುಕಾಗಿದೆ.

| ಕೋಷ್ಟಕ-೭ ನೇಕಾರಿಕೆಯಲ್ಲಿ ತೊಡಗಿರುವ ಸಮುದಾಯಗಳು | | | |
|---|---|---|---|
| ಅ.ನಂ | ಸಮುದಾಯಗಳು | ಕುಟುಂಬಗಳು/ಪ್ರತಿಕ್ರಿಯಿಸಿದವರು | % |
| ೧ | ಹಿಂದು ದೇವಾಂಗ | ೩೪ | ೩೪ |
| ೨ | ಹಿಂದು ಹಟಗಾರ | ೨೩ | ೨೩ |
| ೩ | ಹಿಂದು ಕುರುಹಿನಶೆಟ್ಟಿ | ೨೭ | ೨೭ |
| ೪ | ಹಿಂದು ಪಟ್ಟಸಾಲಿ | ೦೪ | ೦೪ |
| ೫ | ಹಿಂದು ಪದ್ಮಶಾಲಿ | ೦೯ | ೦೯ |
| ೬ | ಹಿಂದು ಮ್ಯಾದರ | ೦೨ | ೦೨ |
| ೭ | ಪರಿಶಿಷ್ಟ ಪಂಗಡ | ೦೧ | ೦೧ |
| | ಒಟ್ಟು | ೧೦೦ | ೧೦೦ |




ಈ ಮೇಲಿನ ಕೋಷ್ಟಕವು(ನಂ-೭) ನೇಕಾರಿಕೆಯಲ್ಲಿ ತೊಡಗಿರುವ ಕುಟುಂಬಗಳ ಸಮುದಾಯಗಳು. ಇಲ್ಲಿ ನೇಕಾರಿಕೆಯಲ್ಲಿ ತೊಡಗಿಸಿಕೊಂಡಿರುವ ಹಿಂದು ದೇವಾಂಗದ ಸಮುದಾಯದ ಜನರ ಕುಟುಂಬಗಳು ೩೪(೩೪%)ರಷ್ಟಿದೆ. ನೇಕಾರಿಕೆಯಲ್ಲಿ ತೊಡಗಿಸಿಕೊಂಡಿರುವ ಹಿಂದೂ ಹಟಗಾರ ಸಮುದಾಯದ ಕುಟುಂಬಗಳು ೨೩(೨೩%)ರಷ್ಟಿದೆ. ಹಿಂದೂ ಕುರುಹಿನಶೆಟ್ಟಿ ಸಮುದಾಯದ ಕುಟುಂಬಗಳು ೨೭(೨೭%)ರಷ್ಟಿದೆ. ಹಿಂದೂ ಪಟ್ಟಸಾಲಿ ಸಮುದಾಯದ ಜನರ ಕುಟುಂಬಗಳು ೦೪(೦೪%)ರಷ್ಟಿದೆ. ಹಿಂದೂ ಪದ್ಮಶಾಲಿ ಸಮುದಾಯದ ಜನರ ಕುಟುಂಬಗಳು ೦೯(೦೯%)ರಷ್ಟಿದೆ. ಹಿಂದೂ ಮ್ಯಾದರ ೦೨(೦೨%)ರಷ್ಟಿದೆ. ಹಾಗೂ ಪರಿಶಿಷ್ಟ ಪಂಗಡದ ೦೧(೦೧%)ರಷ್ಟಿದೆ. ಇಲ್ಲಿ ಪ್ರಮುಖವಾಗಿ ದೇವಾಂಗ ಸಮುದಾಯವು ೩೪(೩೪%)ರಷ್ಟಿದೆ. ಹೆಚ್ಚಿನ ಪ್ರಮಾಣದ ನೇಕಾರಿಕೆಯನ್ನು ಮಾಡುತ್ತಿರುವುದಾಗಿದೆ. ಒಟ್ಟಾಗಿ ಸರಾಸರಿ ನೋಡಿದಾಗ ೯೭(೯೭%)ರಷ್ಟು ಕುಟುಂಬಗಳು

ಪಾರಂಪರಿಕ ನೇಕಾರಿಕೆಯ ವೃತ್ತಿಯನ್ನು ತಮ್ಮ ಬದುಕಿನೊಂದಿಗೆ ಉಳಿಸಿಕೊಂಡು ಬಂದಿರುವ ನೇಕಾರ ಸಮುದಾಯಗಳನ್ನು ನೋಡುತ್ತೇವೆ.

**ಕೋಷ್ಟಕ-೮**
**ನೇಕಾರರ ದಿನದ ಆದಾಯದ ವಿವರ**

| ಅ.ನಂ | ದಿನದಗೂಲಿ ವಿಧ | ಪ್ರತಿಕ್ರಿಯಿಸಿದವರು | % |
|---|---|---|---|
| ೧ | ೧೦೦-೨೦೦ | ೬೮ | ೬೮ |
| ೨ | ೨೦೧-೪೦೦ | ೨೦ | ೨೦ |
| ೩ | ೪೦೧-೬೦೦ | ೧೨ | ೧೨ |
| | ಒಟ್ಟು | ೧೦೦ | ೧೦೦ |

ಈ ಮೇಲಿನ ಕೋಷ್ಟಕವು(ನಂ-೮) ನೇಕಾರರ ದಿನದ ಆದಾಯದ ವಿವರವನ್ನು ನೀಡುತ್ತದೆ. ಇಲ್ಲಿ ನೇಕಾರ ವೃತ್ತಿಯಲ್ಲಿ ತೊಡಗಿರುವ ನೇಕಾರರ ದಿನದ ಆದಾಯ(ದಿನಗೂಲಿ)ವನ್ನು ಪರೀಶಿಲಿಸಿದಾಗ ೧೦೦ ರಿಂದ ೨೦೦ರ ವರೆಗೆ ದಿನಗೂಲಿಯನ್ನು ಪಡೆಯುವ ನೇಕಾರರು ೬೮(೬೮%)ರಷ್ಟಿದೆ. ೨೦೧ ರಿಂದ ೪೦೦ರ ವರೆಗೆ ದಿನಗೂಲಿಯನ್ನು ಪಡೆಯುವ ನೇಕಾರರು ೨೦(೨೦%)ರಷ್ಟಿದೆ. ೪೦೧ ರಿಂದ ೬೦೦ರ ವರೆಗೆ ದಿನಗೂಲಿಯನ್ನು ಪಡೆಯುವ ನೇಕಾರರು ೧೨ (೧೨%)ರಷ್ಟಿದೆ. ಇಲ್ಲಿ ಒಟ್ಟಾಗಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ನೇಕಾರರು ತಮ್ಮ ಆದಾಯವು ಒಟ್ಟು ಕುಟುಂಬದ ಸದಸ್ಯರ ಸಹಕಾರದಿಂದ ಕೂಡಿರುತ್ತದೆ. ಇಲ್ಲಿ ಅವಿಭಕ್ತ ಕುಟುಂಬಗಳಿದ್ದು ಆ ಕುಟುಂಬದಲ್ಲಿ ಕೈಮಗ್ಗಗಳು ಹೆಚ್ಚಿರುವುದರಿಂದ ಆದಾಯವು ಹೆಚ್ಚು ಕಂಡುಬರುತ್ತದೆ. ಆದರೆ ಒಟ್ಟಾಗಿ ನೇಕಾರ ವೃತ್ತಿಯಿಂದ ಕೇವಲ ೧೦೦ ರಿಂದ ೨೦೦ರೂಪಾಯಿಗಳಷ್ಟು ಮಾತ್ರ ೬೮(೬೮%)ರಷ್ಟು ಜನರು ಹೊಂದಿದ್ದು ಇಲ್ಲಿ ಕಡಿಮೆ ಆದಾಯದ ಪ್ರಮಾಣವನ್ನು ಹೊಂದಿರುವ ಕುಟುಂಬಗಳು ಹೆಚ್ಚು ಕಂಡುಬರುತ್ತವೆ.

**ಕೋಷ್ಟಕ-೯**
**ನೇಕಾರರು ದಿನದ ಕೆಲಸಮಾಡುವ ಅವಧಿ**

| ಅ.ನಂ | ದಿನದಲ್ಲಿ ದುಡಿಯುವ ಸಮಯ | ಪ್ರತಿಕ್ರಿಯಿಸಿದವರು | % |
|---|---|---|---|
| ೧ | ೫ ರಿಂದ ೭ | ೧೭ | ೧೭ |
| ೨ | ೮ ರಿಂದ ೧೦ | ೭೬ | ೭೬ |
| ೩ | ೧೦ ಕ್ಕೂ ಹೆಚ್ಚು | ೦೭ | ೦೭ |
| | | | |

ಈ ಮೇಲಿನ ಕೋಷ್ಟಕವು(ನಂ-೯) ನೇಕಾರರ ದಿನದ ಒಟ್ಟು ಕೆಲಸದ ಅವಧಿಯನ್ನು ವಿವರಿಸುತ್ತದೆ. ಪ್ರತಿಕ್ರಿಯಿಸಿರುವ ನೇಕಾರರಲ್ಲಿ ದಿನದಲ್ಲಿ ೫ ರಿಂದ ೭ ಗಂಟೆಗಳಕಾಲ ದುಡಿಯುವವರು ೧೭(೧೭%)ರಷ್ಟಿದೆ. ಪ್ರತಿಕ್ರಿಯಿಸಿರುವ ನೇಕಾರರಲ್ಲಿ ದಿನದಲ್ಲಿ ೮ ರಿಂದ ೧೦ ಗಂಟೆಗಳಕಾಲ ದುಡಿಯುವವರು ೭೬(೭೬%)ರಷ್ಟಿದೆ.

ಪ್ರತಿಕ್ರಿಯಿಸಿರುವ ನೇಕಾರರಲ್ಲಿ ದಿನದಲ್ಲಿ ೧೦ ಗಂಟೆಗಳಕ್ಕಿಂತಲು ಹೆಚ್ಚುಕಾಲ ದುಡಿಯುವವರು ೭(೭%)ರಷ್ಟಿದೆ. ಇಲ್ಲಿ ಮುಖ್ಯವಾಗಿ ಗಮನಿಸಿದಾಗ ನೇಕಾರರು ಒಂದು ಮಗ್ಗದಲ್ಲಿ ಕನಿಷ್ಟ ೮ ರಿಂದ ೧೦ ಗಂಟೆಗಳಕಾಲ ದುಡಿಯುವವರು ೭೬(೭೬%)ರಷ್ಟು ಕಂಡುಬಂದಿದೆ. ಇದರಿಂದ ಸ್ಪಷ್ಟತೆಯನ್ನು ಪರೀಶಿಲಿಸಿದಾಗ ನೇಕಾರಿಕೆಯು ಹೆಚ್ಚು ಗಂಟೆಗಳ ಕಾಲ ದುಡಿಯುವ ಶ್ರಮದಾಯಕ ಕೆಲಸವಾಗಿದೆ.

**ಕೋಷ್ಟಕ–೧೦**

**ನೇಕಾರ ಕುಟುಂಬಗಳ ಸದಸ್ಯರ ಮನೆಗಳ ವಿಧ**

| ಅ.ನಂ | ವಿಧಗಳು | ಕುಟುಂಬಗಳು | % |
|---|---|---|---|
| ೧ | ಗುಡಿಸಲು | ೦೨ | ೦೨ |
| ೨ | ಆರ್.ಸಿ.ಸಿ.ಮನೆ | ೦೮ | ೦೮ |
| ೩ | ಜಂತಿ ಮನೆ/ ತಗಡಿನ ಮನೆ | ೯೦ | ೯೦ |
| | ಒಟ್ಟು ಮನೆಗಳು | ೧೦೦ | ೧೦೦ |

ಈ ಮೇಲಿನ ಕೋಷ್ಟಕವು(ನಂ–೯) ನೇಕಾರರ ಕುಟುಂಬಗಳ ಸದಸ್ಯರ ಮನೆಯ ವಿಧಗಳ ವಿವರಣೆಯನ್ನು ನೀಡುತ್ತದೆ. ಪ್ರತಿಕ್ರಿಯಿಸಿರುವ ನೇಕಾರರ ಕುಟುಂಬದ ಸದಸ್ಯರು ವಾಸಿಸುರುವಂತ ಮನೆಗಳ ವಿಧಗಳನ್ನು ನೋಡಿದಾಗ, ನೇಕಾರರ ಕುಟುಂಬದ ಸದಸ್ಯರು ಗುಡಿಸಲು ಮನೆಗಳಲ್ಲಿ ವಾಸಿಸುವ ಕುಟುಂಬಗಳು ೨(೨%)ರಷ್ಟಿದೆ. ನೇಕಾರರ ಕುಟುಂಬದ ಸದಸ್ಯರು ಆರ್.ಸಿ.ಸಿ. ಮನೆಗಳಲ್ಲಿ ವಾಸಿಸುವ ಕುಟುಂಬಗಳು ೮(೮%)ರಷ್ಟಿದೆ. ಹಾಗೂ ನೇಕಾರರ ಕುಟುಂಬದ ಸದಸ್ಯರು ಜಂತಿ(ಮೇಲಮುದ್ದೆ) ಅಥವಾ ತಗಡಿನ ಮನೆಗಳಲ್ಲಿ ವಾಸಿಸುವ ಕುಟುಂಬಗಳು ೯೦(೯೦%)ರಷ್ಟಿದೆ. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶಗಳೆಂದರೆ ನೇಕಾರರ ಕುಟುಂಬಗಳಲ್ಲಿ ಜಂತಿ ಹಾಗು ಗುಡಿಸಲು ಮನೆಯಲ್ಲಿ ವಾಸಿಸುವ ಶೇ ೯೦ರಷ್ಟು ಕುಟುಂಬಗಳನ್ನು ಕಾಣುತ್ತೆವೆ. ಭೌಗೋಳಿಕ ಲಕ್ಷಣ ಹಾಗೂ ಪರಿಸರದ ಪ್ರಭಾವದಿಂದ ಮನೆಗಳು ಕೆಳ ಮಟ್ಟದ ವಿಧಗಳಲ್ಲಿ ಕಂಡುಬರುತ್ತವೆ. ಈ ನೇಕಾರರ ಮನೆಗಳು ನೇಕಾರರ ಬಡತನವನ್ನು ತೋರಿಸಿಕೊಡುತ್ತದೆ.



| ಕೋಷ್ಟಕ–೧೧<br>ನೇಕಾರಿಕೆ ಕುಟುಂಬಗಳ ಪಡಿತರ ಚೀಟಿಗಳ ಮಾಹಿತಿ | | | |
|---|---|---|---|
| ಅ.ನಂ | ಪಡಿತರ ಚೀಟಿಗಳ ವಿಧ | ಕುಟುಂಬಗಳು | % |
| ೧ | ಎ.ಪಿ.ಎಲ್. | ೦೨ | ೦೨ |
| ೨ | ಬಿ.ಪಿ.ಎಲ್ | ೮೮ | ೮೮ |
| ೩ | ಅಂತ್ಯೋದಯ | ೦೮ | ೦೮ |
| ೪ | ಪಡಿತರ ಚಿಟಿ ಹೊಂದದೆಯಿರುವ ಕುಟುಂಬಗಳು | ೦೨ | ೦೨ |
| | ಒಟ್ಟು | ೧೦೦ | ೧೦೦ |

ಈ ಮೇಲಿನ ಕೋಷ್ಟಕವು(ನಂ–೧೧) ನೇಕಾರರ ಕುಟುಂಬಗಳ ಪಡಿತರ ಚೀಟಿಗಳ ಮಾಹಿತಿಯನ್ನು ಪ್ರಸ್ತುತ ಪಡಿಸುತ್ತದೆ. ನೇಕಾರರ ಕುಟುಂಬಗಳಲ್ಲಿ ಎ.ಪಿ.ಎಲ್. ಪಡಿತರ ಚೀಟಿಯನ್ನು ಹೊಂದಿರವ ಕುಟುಂಬಗಳು ೦೨(೦೨%)ರಷ್ಟಿದೆ. ಬಿ.ಪಿ.ಎಲ್. ಪಡಿತರ ಚೀಟಿಯನ್ನು ಪಡೆದಿರುವ ಕುಟುಂಬಗಳು ೮೮(೮೮%)ರಷ್ಟಿದೆ. ಅಂತ್ಯೋದಯ ಪಡಿತರ ಚೀಟಿಯನ್ನು ಪಡೆದಿರುವ ಕುಟುಂಬಗಳು ೦೮(೦೮%)ರಷ್ಟಿದೆ. ಯಾವುದೇ ಪಡಿತರ ಚೀಟಿಯನ್ನು ಹೊಂದದಿರುವ ಕುಟುಂಬಗಳು ೦೨(೦೨%)ರಷ್ಟು ಕಂಡುಬರುತ್ತವೆ. ಒಟ್ಟಾರೆ ಈ ನೇಕಾರರಲ್ಲಿ ಶೇ ೮೮ರಷ್ಟು ಬಡತನ ರೇಖೆಗಳಿಗಿಂತ ಕಡಿಮೆ ಇರುವ ಕುಟುಂಬಗಳು ಹೆಚ್ಚಾಗಿ ಕಂಡುಬರುತ್ತವೆ.

| ಕೋಷ್ಟಕ–೧೨<br>ನೇಕಾರ ಕುಟುಂಬಗಳ ಮೂಲಭೂತ ಸೌಲಭ್ಯಗಳು | | | | | | | |
|---|---|---|---|---|---|---|---|
| ಅ.ನಂ | ಸೌಲಭ್ಯಗಳು | ಕುಟುಂಬಗಳು | | | | ಒಟ್ಟು | % |
| | | ಇದೆ | % | ಇಲ್ಲ | % | | |
| ೧ | ನಲ್ಲಿ(ನಳ) | ೫೮ | ೫೮ | ೪೨ | ೪೨ | ೧೦೦ | ೧೦೦ |
| ೨ | ಶೌಚಾಲಯ | ೪೬ | ೪೬ | ೫೪ | ೫೪ | ೧೦೦ | ೧೦೦ |
| ೩ | ವ್ಯವಸ್ಥಿತ ಸ್ನಾನಗೃಹ | ೩೩ | ೩೩ | ೬೭ | ೬೭ | ೧೦೦ | ೧೦೦ |
| ೪ | ಗ್ಯಾಸ್(ಎಲ್.ಪಿ.ಜಿ) | ೭೪ | ೭೪ | ೨೬ | ೨೬ | ೧೦೦ | ೧೦೦ |
| ೫ | ಸೈಕಲ್ | ೨೧ | ೨೧ | ೭೯ | ೭೯ | ೧೦೦ | ೧೦೦ |
| ೬ | ರೇಡಿಯೊ/ಟೇಪ್‌ರಿಕಾರ್ಡ | ೦೪ | ೦೪ | ೯೬ | ೯೬ | ೧೦೦ | ೧೦೦ |
| ೭ | ಟಿವ್ಹಿ | ೮೨ | ೮೨ | ೧೮ | ೧೮ | ೧೦೦ | ೧೦೦ |
| ೮ | ದೂರಸಂಪರ್ಕ(ಲ್ಯಾಂಡ್ ಲೈನ್) | ೦೧ | ೦೧ | ೯೯ | ೯೯ | ೧೦೦ | ೧೦೦ |
| ೯ | ಮೊಬೈಲ್ | ೯೭ | ೯೭ | ೦೩ | ೦೩ | ೧೦೦ | ೧೦೦ |
| | | | | | | | |

ಈ ಮೇಲಿನ ಕೋಷ್ಟಕವು(ನಂ–೧೨) ನೇಕಾರರ ಕುಟುಂಬಗಳ ಮೂಲಭೂತ ಸೌಲಭ್ಯಗಳ ಮಾಹಿತಿಯನ್ನು ಪ್ರಸ್ತುತ ಪಡಿಸುತ್ತದೆ. ನೇಕಾರರ ಕುಟುಂಬಗಳಲ್ಲಿ ನಲ್ಲಿ(ನಳ) ಪಡೆದವರು ೫೮(೫೮%)ರಷ್ಟಿದೆ.

ಶೌಚಾಲಯವನ್ನು ಹೊಂದಿರುವರು ೪೬(೪೬%)ರಷ್ಟಿದೆ. ವ್ಯವಸ್ಥಿತ ಸ್ನಾನಗೃಹವನ್ನು ೩೩(೩೩%)ರಷ್ಟಿದೆ. ಅಡುಗೆ ಅನೀಲ(ಗ್ಯಾಸ್ ಎಲ್.ಪಿ.ಜಿ.) ಹೊಂದಿರುವವರು ೭೪(೭೪%)ರಷ್ಟಿದೆ. ಸೈಕಲ್ ಹೊಂದಿರುವರು ೨೧(೨೧%)ರಷ್ಟಿದೆ. ರೇಡಿಯೋ/ಟೇಪ್ ರಿಕಾರ್ಡ ಹೊಂದಿರುವರು ೦೪(೦೪%)ರಷ್ಟಿದೆ. ಟಿ.ವಿ. ಹೊಂದಿರುವರು ೮೨(೮೨%)ರಷ್ಟಿದೆ. ದೂರಸಂಪರ್ಕ ಹೊಂದಿರುವರು ೦೧(೦೧%)ರಷ್ಟಿದೆ. ಮೊಬೈಲ್ ಹೊಂದಿರುವರು ೯೭(೯೭%)ರಷ್ಟಿದೆ. ಇಲ್ಲಿ ನೇಕಾರರ ಕುಟುಂಬಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಗಮನಿಸಿದಾಗ ಶೇ ೪೬ರಷ್ಟು ಸ್ವಚ್ಚತೆಯೆಡೆಗೆ ತಿಳಿದುಕೊಂಡಿದ್ದಾರೆ. ಶೇ ೭೪ ರಷ್ಟು ನೇಕಾರ ಕುಟುಂಬಗಳು ಅಡುಗೆಯ ಅನೀಲವನ್ನು ಬಳಸುತ್ತಿದ್ದಾರೆ.

**ಕೋಷ್ಟಕ–೧೩**
**ನೇಕಾರ ಕುಟುಂಬಗಳ ಸದಸ್ಯರು ಪಡೆದಿರುವ ಸರಕಾರಿ ಸೇವಾ ಸೌಲಭ್ಯಗಳು**

| ಅ.ನಂ | ಸೇವಾ ಸೌಲಭ್ಯಗಳು | ಪಡೆದುಕೊಂಡ ಸದಸ್ಯರ ಸಂಖ್ಯೆ |
|---|---|---|
| ೧ | ಮತದಾನ ಚೀಟಿ | ೩೭೮ |
| ೨ | ವಿಧವಾ ವೇತನ | ೧೦ |
| ೩ | ಅಂಗವಿಕಲ ವೇತನ | ೦೬ |
| ೪ | ವೃದ್ದಾಪ್ಯ ವೇತನ | ೩೩ |
| ೫ | ಆಧಾರ ಚೀಟಿ(ಕಾರ್ಡು) | ೫೫೭ |

ಈ ಮೇಲಿನ ಕೋಷ್ಟಕವು(ನಂ–೧೩) ನೇಕಾರರ ಕುಟುಂಬಗಳ ಸರಕಾರಿ ಸೇವಾ ಸೌಲಭ್ಯಗಳ ಮಾಹಿತಿಯನ್ನು ಪ್ರಸ್ತುತ ಪಡಿಸುತ್ತದೆ. ಇಲ್ಲಿ ನೇಕಾರ ಕುಟುಂಬಗಳ ಸದಸ್ಯರು ಪಡೆದಿರುವ ಸರಕಾರಿ ಸೇವಾ ಸೌಲಭ್ಯಗಳಲ್ಲಿ ಸದಸ್ಯರಲ್ಲಿ ಮತದಾನ ಸೌಲಭ್ಯವನ್ನು ಪಡೆದವರು ೩೭೮ ಜನರು ಹೊಂದಿದ್ದಾರೆ. ಸದಸ್ಯರಲ್ಲಿ ವಿಧವಾ ವೇತನದ ಸೌಲಭ್ಯವನ್ನು ಹೊಂದಿದವರು ೧೦ ಜನರು ಕಂಡುಬರುತ್ತಾರೆ. ಸದಸ್ಯರಲ್ಲಿ ಅಂಗವಿಕಲ ವೇತನದ ಸೌಲಭ್ಯವನ್ನು ಹೊಂದಿದವರು ೦೬ ಜನರು ಕಂಡುಬರುತ್ತಾರೆ. ನೇಕಾರ ಕುಟುಂಬಗಳಲ್ಲಿಯ ಸದಸ್ಯರಲ್ಲಿ ವೃದ್ದಾಪ್ಯ ವೇತನದ ಸೌಲಭ್ಯವನ್ನು ಹೊಂದಿದವರು ೩೩ ಜನರು ಕಂಡುಬರುತ್ತಾರೆ. ಶೇ ೧೦೦ರಷ್ಟು ಜನ ಅಂದರೆ ೫೫೭ ಜನರಿಗೂ ಆಧಾರ ಕಾರ್ಡುಗಳ ಸೌಲಭ್ಯವನ್ನು ನೇಕಾರರ ಕುಟುಂಬಗಳು ಪಡೆದುಕೊಂಡಿವೆ.

**ಕೋಷ್ಟಕ–೧೪**
**ಶಿಷ್ಯವೇತನ ಪಡೆದ ನೇಕಾರ ಕುಟುಂಬಗಳ ಸದಸ್ಯರ ಮಕ್ಕಳ ಮಾಹಿತಿ**

| ಅ.ನಂ | ಶಿಷ್ಯವೇತನದ ವಿಧಗಳು | ಫಲಾನುಭವಿಗಳು | % |
|---|---|---|---|
| ೧ | ಸರಕಾರಿ ಕ್ಷೇತ್ರದಲ್ಲಿ | ೪೨ | ೪೬.೧೫ |
| ೨ | ಸಹಕಾರಿ ಸಂಘಗಳಲ್ಲಿ | ೨೬ | ೨೮.೫೭ |
| ೩ | ಯಾವುದೇ ಶಿಷ್ಯವೇತನ | ೨೩ | ೨೫.೨೮ |
| | ಒಟ್ಟು | ೯೧ | ೧೦೦ |

ಈ ಮೇಲಿನ ಕೋಷ್ಟಕವು(ನಂ-೧೪) ಶಿಷ್ಯವೇತನ ಪಡೆದ ನೇಕಾರ ಕುಟುಂಬಗಳ ಸದಸ್ಯರ ಮಕ್ಕಳ ಶೈಕ್ಷಣಿಕ ಕ್ಷೇತ್ರದಲ್ಲಿ ಶಿಷ್ಯವೇತನದ ಸೌಲಭ್ಯವನ್ನು ಪಡೆಯುತ್ತಿರುವ ಕುರಿತು ಮಾಹಿತಿಯನ್ನು ನೀಡುತ್ತದೆ. ನೇಕಾರರ ಕುಟುಂಬಗಳಲ್ಲಿ ಸರಕಾರಿ ಕ್ಷೇತ್ರದಲ್ಲಿ ಶಿಷ್ಯವೇತನ ಪಡೆದುಕೊಂಡಿರುವ ಮಕ್ಕಳ ಸಂಖ್ಯೆ ೪೨(೪೬.೧೫%)ರಷ್ಟಿದೆ. ನೇಕಾರ ಸಹಕಾರಿ ಸಂಘಗಳಲ್ಲಿ ಶಿಷ್ಯವೇತನ ಪಡೆದುಕೊಂಡಿರುವ ಮಕ್ಕಳ ಸಂಖ್ಯೆ ೨೬(೨೮.೫೭%)ರಷ್ಟಿದೆ. ಯಾವುದೇ ಶಿಷ್ಯವೇತನ ಪಡೆದುಕೊಳ್ಳದ ಮಕ್ಕಳ ಸಂಖ್ಯೆ ೨೩(೨೫.೨೮%)ರಷ್ಟಿದೆ.

| ಕೋಷ್ಟಕ-೧೫<br>ಭೂಹಿಡುವಳಿ ಹೊಂದಿದ ನೇಕಾರರ ಕುಟುಂಬಗಳು | | | | |
|---|---|---|---|---|
| ಅ.ನಂ | ಭೂಹಿಡುವಳಿಗಳ ಮಾಹಿತಿ | ಒಣ ಬೇಸಾಯ | ನೀರಾವರಿ | % |
| ೧ | ಇದೆ | ೦೬ | ೦೦ | ೦೬ |
| ೨ | ಇಲ್ಲ | ೯೪ | ೦೦ | ೯೪ |
| | ಒಟ್ಟು | ೧೦೦ | ೦೦ | ೧೦೦ |

ಈ ಮೇಲಿನ ಕೋಷ್ಟಕವು(ನಂ-೧೫) ಭೂಹಿಡುವಳಿ ಹೊಂದಿದ ನೇಕಾರ ಕುಟುಂಬಗಳ ಕುರಿತು ವಿವರಿಸುತ್ತದೆ. ಇದು ಭೂ ಹಿಡುವಳಿ ಹೊಂದಿರುವ ನೇಕಾರ ಕುಟುಂಬಗಳ ಸಂಖ್ಯೆ ೦೬(೦೬%)ರಷ್ಟಿದೆ. ಭೂಹಿಡುವಳಿ ಹೊಂದಿರುವ ಕುಟುಂಬಗಳು ಒಣ ಬೇಸಾದ ಭೂಮಿಯನ್ನು ಹೊಂದಿವೆ. ಭೂ ಹಿಡುವಳಿ ಹೊಂದದೆ ಇರುವ ನೇಕಾರ ಕುಟುಂಬಗಳ ಸಂಖ್ಯೆ ೯೪(೯೪%)ರಷ್ಟಿದೆ. ಈ ನೇಕಾರ ಕುಟುಂಬಗಳ ಭೂಹಿಡುವಳಿಯ ಪ್ರಮಾಣವನ್ನು ನೋಡಿದಾಗ ನೇಕಾರರ ಕುಟುಂಬಗಳಲ್ಲಿ ಶೇ ೯೪ ರಷ್ಟು ಭೂಮಿಯನ್ನು ಹೊಂದದೆ ಇರುವುದು ಗೋಚರಿಸುತ್ತದೆ. ನೇಕಾರ ಕುಟುಂಬಗಳು ಭೂ ಆಸ್ತಿಯನ್ನು ಕಡಿಮೆ ಹೊಂದಿದ್ದಾರೆ ಎಂಬುವುದು ಸ್ಪಸ್ಟವಾಗುತ್ತದೆ.

| ಕೋಷ್ಟಕ-೧೬<br>ನೇಯ್ಗೆ ಹೊಂದಿದ ನೇಕಾರರ ಕುಟುಂಬಗಳು | | | |
|---|---|---|---|
| ಅ.ನಂ | ನೇಯ್ಗೆಗಳ ಸಂಖ್ಯೆ | ಕುಟುಂಬಗಳು | % |
| ೧ | ಒಂದು | ೩೮ | ೩೮ |
| ೨ | ಎರಡು | ೪೬ | ೪೬ |
| ೩ | ಮೂರು ಹಾಗೂ ಹೆಚ್ಚು | ೧೬ | ೧೬ |
| | ಒಟ್ಟು | ೧೦೦ | ೧೦೦ |

ಈ ಮೇಲಿನ ಕೋಷ್ಟಕವು(ನಂ-೧೬) ನೇಕಾರರ ಕುಟುಂಬಗಳಲ್ಲಿಯ ಪ್ರತಿಯೊಂದು ಕುಟುಂಬದಲ್ಲಿರುವ ನೇಯ್ಗೆಗಳ ಅಂಕಿಸಂಖ್ಯೆಗಳನ್ನು ವಿವರಿಸುತ್ತದೆ. ನೇಕಾರರ ಕುಟುಂಬಗಳಲ್ಲಿ ನೇಕಾರಿಕೆಯಲ್ಲಿ

ಅಳವಡಿಸಿಕೊಂಡಿರುವ ಮಗ್ಗಗಳು ಸಂಖ್ಯೆ ಕನಿಷ್ಟ ಒಂದು ಮಗ್ಗವನ್ನು ಅಳವಡಿಸಿಕೊಂಡಿರುವ ಕುಟುಂಬಗಳ ಸಂಖ್ಯೆ ೩೮(೩೮%)ರಷ್ಟಿದೆ. ಕನಿಷ್ಟ ಎರಡು ಮಗ್ಗವನ್ನು ಅಳವಡಿಸಿಕೊಂಡಿರುವ ಕುಟುಂಬಗಳ ಸಂಖ್ಯೆ ೪೬(೪೬%)ರಷ್ಟಿದೆ. ಕನಿಷ್ಟ ಮೂರು ಹಾಗೂ ಹೆಚ್ಚು ಮಗ್ಗಗಳನ್ನು ಅಳವಡಿಸಿಕೊಂಡಿರುವ ಕುಟುಂಬಗಳ ಸಂಖ್ಯೆ ೧೬(೧೬%)ರಷ್ಟಿದೆ. ಒಟ್ಟಿನಲ್ಲಿ ಈ ನೇಕಾರರ ಕುಟುಂಬಗಳಲ್ಲಿ ಗರಿಷ್ಟ ಶೇ ೪೬ರಷ್ಟು ಮನೆಗಳಲ್ಲಿ ಎರಡು ಮಗ್ಗಗಳನ್ನು ಉಪಯೋಗಿಸುದು ಕಂಡುಬರುತ್ತದೆ.

**ಕೋಷ್ಟಕ-೧೭**
**ನೇಕಾರರ ಕುಟುಂಬಗಳು ಹೊಂದಿರುವ ಸಾಲಗಳು**

| ಅ.ನಂ | ಸಾಲದ ವಿಧ | ಪ್ರತಿಕ್ರಿಯಿಸಿದವರು | | % | % | ಒಟ್ಟು |
|---|---|---|---|---|---|---|
| | | ಇದೆ | ಇಲ್ಲ | | | |
| ೧ | ಬ್ಯಾಂಕು ಸಾಲ (ಸಹಕಾರಿ) | ೫೦ | ೫೦ | ೫೦ | ೫೦ | ೧೦೦ |
| ೨ | ಸಹಕಾರಿ ಸಂಘ | ೮೮ | ೧೨ | ೮೮ | ೧೨ | ೧೦೦ |
| ೩ | ಬಡ್ಡಿ ಸಾಲ | ೩೪ | ೬೬ | ೩೪ | ೬೬ | ೧೦೦ |
| ೪ | ಪಿತ್ರಾರ್ಜಿತ ಸಾಲ | ೦೬ | ೯೪ | ೦೬ | ೯೪ | ೧೦೦ |
| ೫ | ಕೈಗಡ ಸಾಲ | ೯೩ | ೦೭ | ೯೩ | ೦೭ | ೧೦೦ |
| ೬ | ಅಡವಿಟ್ಟ ಸಾಲ | ೧೮ | ೮೨ | ೧೮ | ೮೨ | ೧೦೦ |

ಈ ಮೇಲಿನ ಕೋಷ್ಟಕವು(ನಂ-೧೭) ನೇಕಾರರ ಕುಟುಂಬಗಳು ಹೊಂದಿರುವ ಸಾಲಗಳ ವಿಧಗಳನ್ನು ಹಾಗೂ ನೇಕಾರರಲ್ಲಿ ಎಷ್ಟು ಪ್ರಮಾಣದ ಸಾಲವನ್ನು ಪಡೆದಿದ್ದಾರೆ ಎಂಬುದರ ವಿವರಣೆಯನ್ನು ಹೊಂದಿದೆ. ನೇಕಾರ ಕುಟುಂಬಗಳಲ್ಲಿ ರಾಷ್ಟ್ರೀಕೃತ ಬ್ಯಾಂಕ ಹಾಗೂ ಸಹಕಾರಿ ಬ್ಯಾಂಕುಗಳಿಂದ ಸಾಲ ಪಡೆದಿರುವ ಕುಟುಂಬಗಳ ಸಂಖ್ಯೆ ೫೦(೫೦%)ರಷ್ಟಿದೆ. ನೇಕಾರ ಸಹಕಾರಿ ಸಂಘಗಳಲ್ಲಿ ಸಾಲ ಪಡೆದಿರುವ ಕುಟುಂಬಗಳ ಸಂಖ್ಯೆ ೮೮(೮೮%)ರಷ್ಟಿದೆ. ಇತರೆ ಬಡ್ಡಿ ಸಾಲವನ್ನು ಪಡೆದಿರುವ ಕುಟುಂಬಗಳ ಸಂಖ್ಯೆ ೩೪(೩೪%)ರಷ್ಟಿದೆ. ನೇಕಾರರ ಕುಟುಂಬಗಳಲ್ಲಿ ಪಿತ್ರಾರ್ಜಿತ ಸಾಲವನ್ನು ಇನ್ನೂ ಮುಟ್ಟದೆ ಇರುವಂತ ಕುಟುಂಬಗಳ ಸಂಖ್ಯೆ ೦೬(೦೬%)ರಷ್ಟಿದೆ. ಕೈಗಡ ಸಾಲವನ್ನು ಪಡೆದಿರುವ ಕುಟುಂಬಗಳ ಸಂಖ್ಯೆ ೯೩(೯೩%)ರಷ್ಟಿದೆ. ನೇಕಾರರ ಕುಟುಂಬಗಳಲ್ಲಿ ತುರ್ತು ಸಂದರ್ಭದಲ್ಲಿ ಬೆಲೆಬಾಳುವ ವಸ್ತುವನ್ನು ಅಡವಿಟ್ಟು ಸಾಲ ಮಾಡಿರುವಂತ ಕುಟುಂಬಗಳ ಸಂಖ್ಯೆ ೧೮(೧೮%)ರಷ್ಟಿದೆ. ಒಟ್ಟು ಈ ನೇಕಾರರ ಕುಟುಂಬದಲ್ಲಿ ಶೇ ೯೮ರಷ್ಟು ಯಾವುದಾದರೊಂದು ಸಾಲದ ಸುಳಿಯಲ್ಲಿ ಸಿಲುಕಿಕೊಂಡಿರುವುದು ಕಂಡುಬರುತ್ತದೆ.

| ಕೋಷ್ಟಕ-೧೮<br>ನೇಕಾರರ ಕುಟುಂಬಗಳು ಹೊಂದಿರುವ ಸಾಲಗಳ ಉದ್ದೇಶಗಳು | | | | | | |
|---|---|---|---|---|---|---|
| ಅ.ನಂ | ಸಾಲದ ಉದ್ದೇಶಗಳು | ಪ್ರತಿಕ್ರಿಯಿಸಿದವರು | | % | % | ಒಟ್ಟು |
| | | ಇದೆ | ಇಲ್ಲ | | | |
| ೧ | ಮನೆ ನಿರ್ಮಾಣ | ३೧ | ೬೯ | ३೧ | ೬೯ | ೧೦೦ |
| ೨ | ಮಗ್ಗಗಳ ಆಧುನಿಕರಣ | ೫೦ | ೫೦ | ೫೦ | ೫೦ | ೧೦೦ |
| ೩ | ಕಚ್ಚಾವಸ್ತುಗಳ ಕರಿದಿ | ೩೪ | ೬೬ | ೩೪ | ೬೬ | ೧೦೦ |
| ೪ | ಮದುವೆ/ಇತರೆ ಸಮಾರಂಭಗಳ ಸಾಲ | ೦೬ | ೯೪ | ೦೬ | ೯೪ | ೧೦೦ |
| ೫ | ಇತರೆ | ೧೦ | ೯೦ | ೧೦ | ೯೦ | ೧೦೦ |
| ೬ | ಆರೋಗ್ಯ ಸುಧಾರಣೆ | ೮೦ | ೨೦ | ೯೩ | ೦೭ | ೧೦೦ |

ಈ ಮೇಲಿನ ಕೋಷ್ಟಕವು(ನಂ-೧೮) ನೇಕಾರರ ಕುಟುಂಬಗಳು ಹೊಂದಿರುವ ಸಾಲಗಳಿಗೆ ಉದ್ದೇಶಗಳನ್ನು ವಿವರಿಸುತ್ತದೆ. ನೇಕಾರರ ಮನೆ ನಿರ್ಮಾಣದ ಉದ್ದೇಶಕ್ಕಾಗಿ ಸಾಲ ಪಡೆದಿರುವ ಕುಟುಂಬಗಳು ೩೧(೩೧%)ರಷ್ಟಿದೆ. ನೇಕಾರರ ಮಗ್ಗಗಳ ಆಧುನೀಕರಣ ಹಾಗೂ ಮಗ್ಗಗಳ ಸಣ್ಣ ಕೆಲಸಗಳ ಉದ್ದೇಶಕ್ಕಾಗಿ ಸಾಲ ಪಡೆದಿರುವ ಕುಟುಂಬಗಳ೫೦(೫೦%)ರಷ್ಟಿದೆ. ನೇಕಾರಿಕೆಯ ಕಚ್ಚಾ ವಸ್ತುಗಳ ಖರೀದಿ ಉದ್ದೇಶಕ್ಕಾಗಿ ಸಾಲ ಪಡೆದಿರುವ ಕುಟುಂಬಗಳು ೩೪(೩೪%)ರಷ್ಟಿದೆ. ಮದುವೆ ಹಾಗೂ ಇತರೆ ಸಮಾರಂಭಗಳ ಉದ್ದೇಶಕ್ಕಾಗಿ ಸಾಲ ಪಡೆದಿರುವ ನೇಕಾರ ಕುಟುಂಬಗಳು ೦೬(೦೬%)ರಷ್ಟಿದೆ. ನೇಕಾರರ ಇತರೆ ವಯಕ್ತಿಕ ಉದ್ದೇಶಕ್ಕಾಗಿ ಸಾಲ ಪಡೆದಿರುವ ಕುಟುಂಬಗಳು ೧೦(೧೦%)ರಷ್ಟಿದೆ. ಆರೋಗ್ಯ ಸುಧಾರಣೆಯ ಉದ್ದೇಶಕ್ಕಾಗಿ ಸಾಲ ಪಡೆದಿರುವ ಕುಟುಂಬಗಳು ೮೦(೮೦%)ರಷ್ಟಿದೆ. ಇಲ್ಲಿ ಒಟ್ಟು ನೇಕಾರರಲ್ಲಿ ಒಂದಿಲ್ಲೊಂದು ಸಾಲದಲ್ಲಿರುವುದು ಕಂಡುಬಂದಿದೆ. ಈ ನೇಕಾರರ ಸಾಲಗಳಿಗೆ ಪ್ರಮುಖ ಕಾರಣಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಶೇ ೮೪ರಷ್ಟು ಕುಟುಂಬಗಳು ನೇಕಾರಿಕೆ ವೃತ್ತಿಗೆ ಹೆಚ್ಚು ಸಾಲವನ್ನು ಪಡೆದಿರುವುದು ಕಂಡುಬರುತ್ತದೆ. ಹಾಗೂ ಶೇ ೮೦ರಷ್ಟು ನೇಕಾರ ಕುಟುಂಬಗಳು ಆರೋಗ್ಯ ಸಂಬಂಧಿಸಿದಂತೆ ಸಾಲ ಮಾಡಿರುವುದು ಕಂಡುಬಂದಿದೆ.

| ಕೋಷ್ಟಕ-೧೯<br>ನೇಕಾರರ ಕುಟುಂಬಗಳಲ್ಲಿ ಸರಕಾರಿ ಸೌಲಭ್ಯ ಪಡೆದಿರುವ ಫಲಾನುಭವಿಗಳು | | | | | | |
|---|---|---|---|---|---|---|
| ಅ.ನಂ | ಸರಕಾರಿ ಸೌಲಭ್ಯಗಳು | ಪ್ರತಿಕ್ರಿಯಿಸಿದವರು | | % | % | ಒಟ್ಟು |
| | | ಇದೆ | ಇಲ್ಲ | | | |
| ೧ | ಎಂ.ಜಿ.ಬಿ.ಬಿ.ವಾಯ್. | ೧೦೦ | ೦೦ | ೧೦೦ | ೦೦ | ೧೦೦ |
| ೨ | ವಸತಿ | ೨೩ | ೭೭ | ೨೩ | ೭೭ | ೧೦೦ |
| ೩ | ಆರೋಗ್ಯ | ೩೪ | ೬೬ | ೩೪ | ೬೬ | ೧೦೦ |
| ೪ | ನೇಕಾರ ಕಲ್ಯಾಣ ಯೋಜನೆಗಳು | ೨೮ | ೭೨ | ೨೮ | ೭೨ | ೧೦೦ |
| ೫ | ಮುದ್ರಾ ಯೋಜನೆ | ೧೧ | ೮೯ | ೧೧ | ೮೯ | ೧೦೦ |

ಈ ಮೇಲಿನ ಕೋಷ್ಟಕವು(ನಂ-೧೯) ನೇಕಾರರ ಕುಟುಂಬಗಳಲ್ಲಿ ಸರಕಾರಿ ಸೌಲಭ್ಯ ಪಡೆದಿರುವ ಫಲಾನುಭವಿಗಳ ಬಗ್ಗೆ ವಿವರಣೆಯನ್ನು ನೀಡುತ್ತದೆ. ನೇಕಾರ ಕುಟುಂಬಗಳಲ್ಲಿ ಮಹಾತ್ಮಾ ಗಾಂಧಿ ಬುನಕರ್ ಭೀಮಮಾ ಯೋಜನೆಯ, ಜೀವನ ವಿಮಾ ಯೋಜನೆಯನ್ನು ನೇಕಾರ ಕುಟುಂಬಗಳ ಫಲಾನುಭವಿಗಳ ಸಂಖ್ಯೆ

೧೦೦(೧೦೦%)ರಷ್ಟಿದೆ. ನೇಕಾರರಿಗೆ ಮೀಸಲಿರುವ ವಸತಿ ಯೋಜನೆಯ ಫಲಾನುಭವಿಗಳ ಸಂಖ್ಯೆ ೨೩(೨೩%)ರಷ್ಟಿವೆ. ಆರೋಗ್ಯ ಸೇವೆಯನ್ನು ಸದುಪಯೋಗ ಮಾಡಿಕೊಂಡಿರುವ ನೇಕಾರ ಕುಟುಂಬಗಳ ಫಲಾನುಭವಿಗಳ ಸಂಖ್ಯೆ ೩೪(೩೪%)ರಷ್ಟಿದೆ. ನೇಕಾರರಕಲ್ಯಾಣ ಯೋಜನೆಗಳ ಅಡಿಯಲ್ಲಿ ನೇಕಾರರ ಕುಟುಂಬಗಳ ಫಲಾನುಭವಿ ಸಂಖ್ಯೆ ೨೮(೨೮%)ರಷ್ಟಿದೆ. ಹಾಗೂ ಸಣ್ಣ ಹಾಗೂ ಗುಡಿಕೈಗಾರಿಕೆಗಳಿಗೆ ನೀಡುವ ಕಿರು ಸಾಲದ ಯೋಜನೆಯಡಿಯಲ್ಲಿ ಮುದ್ರಾಯೋಜನೆಯ ಫಲಾನುಭವಿಗಳ ಸಂಖ್ಯೆ ೨೮(೨೮%)ರಷ್ಟಿದೆ. ಇಲ್ಲಿ ಸರಕಾರಿ ಯೋಜನೆಗಳನ್ನು ಸಂಘಗಳ ಮುಖೇನ ಸದಸ್ಯತ್ವದಿಂದ ಸಂಘಟಿತ ವಲಯದಲ್ಲಿದ್ದರು ಸರಕಾರಿ ಯೋಜನೆಗಳ ಸದುಪಯೋಗ ಮಾಡಿಕೊಳ್ಳುವಲ್ಲಿ ನೇಕಾರರು ವಿಫಲರಾಗಿರುವುದು ಕಂಡುಬರುತ್ತದೆ. ಆದರೆ ಈ ಯೋಜನೆಗಳು ಯಾರಿಗೆ ತಲುಪುವುದು ಇಲ್ಲಿ ಮುಖ್ಯವಾಗಿರುತ್ತದೆ.

**ಕೋಷ್ಟಕ–೨೦**
**ನೇಕಾರರ ಕುಟುಂಬಗಳಲ್ಲಿ ಉತ್ಪಾದಿಸುವ ಬಟ್ಟೆಗಳ ವಿಧ**

| ಅ.ನಂ | ಉತ್ಪಾದಿಸುವ ಬಟ್ಟೆಯ ಮಾದರಿಗಳು | ಪ್ರತಿಕ್ರಿಯಿಸಿದವರು | |
|---|---|---|---|
| | | ತಯಾರಿಸುತ್ತಾರೆ | % |
| ೧ | ಇಳಕಲ್ಲ ಮಾದರಿ ಸೀರೆ | ೫೯ | ೫೯ |
| ೨ | ಗುಳೇದಗುಡ್ಡ ಖಣ (ಕುಪ್ಪಸ) | ೧೫ | ೧೫ |
| ೩ | ಪಟಗಾ | ೦೫ | ೦೫ |
| ೪ | ಚಾಲುಕ್ಯ ಸೀಲ್ಕ (ಕಾಂಚಿವರಂ, ಧರ್ಮಾಂವರಂ ಮಾದರಿ) | ೧೭ | ೧೭ |
| ೫ | ಕಾಟನ್ ಸೀರೆ/ಬಟ್ಟೆ | ೦೨ | ೦೨ |
| ೬ | ಖಾದಿ ಬಟ್ಟೆ | ೦೨ | ೦೨ |
| | **ಒಟ್ಟು** | ೧೦೦ | ೧೦೦ |

ಈ ಮೇಲಿನ ಕೋಷ್ಟಕವು(ನಂ–೨೦) ನೇಕಾರರ ಕುಟುಂಬಗಳಲ್ಲಿ ನೇಕಾರರು ಉತ್ಪಾದಿಸುವ ಬಟ್ಟೆಗಳ ವಿಧಗಳನ್ನು ವಿವರಿಸುತ್ತದೆ. ನೇಕಾರರ ಕುಟುಂಬಗಳಲ್ಲಿ ನೇಕಾರಿಕೆಯಿಂದ ಉತ್ಪಾದಿಸುವ ಬಟ್ಟೆಗಳ ವಿಧಗಳಲ್ಲಿ ಇಳಕಲ್ ಮಾದರಿಯ ಸೀರೆಯನ್ನು ಉತ್ಪಾದಿಸುವ ಕುಟುಂಬಗಳ ಸಂಖ್ಯೆ ೫೯(೫೯%)ರಷ್ಟಿದೆ. ಗುಳೇದಗುಡ್ಡ ಖಣಗಳನ್ನು ಉತ್ಪಾದಿಸುವ ಕುಟುಂಬಗಳ ಸಂಖ್ಯೆ ೧೫(೧೫%)ರಷ್ಟಿದೆ. ಹಿರಿಯರು ಶಿರಕ್ಕೆ ಹಾಕಿಕೊಳ್ಳುವ ಪಟಗಾ ಉತ್ಪಾದಿಸುವ ನೇಕಾರ ಕುಟುಂಬಗಳ ಸಂಖ್ಯೆ ೫(೫%)ರಷ್ಟಿದೆ. ಆಧುನಿಕ ಮಾದರಿಯ ಬಹು ಬೇಡಿಕೆಯ ಚಾಲುಕ್ಯ ಸೀಲ್ಕ್ ಸೀರೆಯನ್ನು ನೇಯುವಂತ ಕುಟುಂಬಗಳ ಸಂಖ್ಯೆ ೧೭(೧೭%)ರಷ್ಟಿದೆ. ಕಾಟನ್ ಸೀರೆ ಹಾಗೂ ಕಾಟನ್ ಬಟ್ಟೆಯನ್ನು ಉತ್ಪಾದಿಸುವ ನೇಕಾರರ ಕುಟುಂಬಗಳ ಸಂಖ್ಯೆ ೦೨(೦೨%)ರಷ್ಟಿದೆ. ಹಾಗೂ ನೇಕಾರರ ಕುಟುಂಬಗಳಲ್ಲಿ ನೇಕಾರರು ಉತ್ಪಾದಿಸುವ ಖಾದಿ ಬಟ್ಟೆಗಳನ್ನು ತಯಾರಿಸುವ ಕುಟುಂಬಗಳ ಸಂಖ್ಯೆ ೦೨(೦೨%)ರಷ್ಟಿದೆ. ಈ ಒಟ್ಟಾರಿ ಬಾಗಲಕೋಟ ನೇಕಾರರು ಹೆಚ್ಚಾಗಿ ಶೇ ೫೯ರಷ್ಟು ಇಳಕಲ್ಲ ಮಾದರಿಯ ರೇಷ್ಮೆ ಹಾಗು ಚಮಕಾ ಸೀರೆಗಳನ್ನು ಉತ್ಪಾದಿಸುತ್ತಾರೆ. ಒಟ್ಟಾರೆ ಈ ಭಾಗದ ಕೈಮಗ್ಗ ನೇಕಾರರು ಶೇ ೭೩ರಷ್ಟು

ನೇಕಾರಿಕೆ ಕುಟುಂಬಗಳು ಇನ್ನೂ ಸಾಂಪ್ರದಾಯಿಕ ಉತ್ಪನ್ನಗಳಾದ ಇಳಕಲ್ಲ ಮಾದರಿಯ ಸೀರೆ ಹಾಗೂ ಗುಳೇದಗುಡ್ಡದ ಖಣ(ಕುಪ್ಪಸ)ಗಳನ್ನು ಉತ್ಪಾದಿಸುತ್ತಿರುವುದು ಕಂಡುಬರುತ್ತದೆ. ಆದ್ದರಿಂದ ಈ ಭಾಗದ ನೇಕಾರರಿಗೆ ದಿನದ ವೇತನದಲ್ಲಿ ನೇಕಾರರು ತಮ್ಮ ಬದುನ್ನು. ಕಟ್ಟಿಕೊಂಡಿದ್ದಾರೆ.

| ಕೋಷ್ಟಕ-೨೧<br>ನೇಕಾರರ ಕುಟುಂಬಗಳಲ್ಲಿ ತಿಂಗಳಲ್ಲಿನ ಖರ್ಚು | | |
|---|---|---|
| **ನೇಕಾರರ ಕುಟುಂಬಗಳಲ್ಲಿನ ತಿಂಗಳ ಖರ್ಚು** | ಪ್ರತಿಕ್ರಿಯಿಸಿದವರು | % |
| ೧೫೦೦ಕ್ಕಿಂತಲೂ ಕಡಿಮೆ | ೫ | ೫ |
| ೧೫೦೦-೩೦೦೦ | ೪೪ | ೪೪ |
| ೩೦೦೧-೪೫೦೦ | ೩೨ | ೩೨ |
| ೪೫೦೧-೬೦೦೦ | ೧೩ | ೧೩ |
| ೬೦೦೦ ಕ್ಕಿಂತಲೂ ಹೆಚ್ಚು | ೬ | ೬ |
| ಒಟ್ಟು | ೧೦೦ | ೧೦೦ |

ಈ ಮೇಲಿನ ಕೋಷ್ಟಕವು(ನಂ-೨೧) ನೇಕಾರರ ಕುಟುಂಬಗಳಲ್ಲಿ ನೇಕಾರರು ಮಾಸಿಕ ಮನೆಯ ದಿನನಿತ್ಯದ ಸಾಮಾನ್ಯ ಖರ್ಚುಗಳ ವಿವರವನ್ನು ತಿಳಿಸುತ್ತದೆ. ಈ ನೇಕಾರ ಕುಟುಂಬಗಳಲ್ಲಿ ನೇಕಾರರು ೧೫೦೦ರೂ. ಕ್ಕಿಂತಲೂ ಕಡಿಮೆಯ ಖರ್ಚು ಹೊಂದಿರುವ ಕುಟುಂಬಗಳ ಸಂಖ್ಯೆ ೫(೫%)ರಷ್ಟಿದೆ. ನೇಕಾರರು ೧೫೦೦-೩೦೦೦ ರೂ. ಖರ್ಚು ಹೊಂದಿರುವ ಕುಟುಂಬಗಳ ಸಂಖ್ಯೆ ೪೪(೪೪%)ರಷ್ಟಿದೆ. ನೇಕಾರರು ೩೦೦೦-೪೫೦೦ ರೂ. ಖರ್ಚು ಹೊಂದಿರುವ ಕುಟುಂಬಗಳ ಸಂಖ್ಯೆ ೩೨(೩೨%)ರಷ್ಟಿದೆ. ೪೫೦೦-೬೦೦೦ ರೂ. ಖರ್ಚು ಹೊಂದಿರುವ ಕುಟುಂಬಗಳ ಸಂಖ್ಯೆ ೫(೫%)ರಷ್ಟಿದೆ. ಹಾಗೂ ನೇಕಾರರು ೬೦೦೦ ರೂ. ಕ್ಕಿಂತಲೂ ಹೆಚ್ಚು ಖರ್ಚು ಹೊಂದಿರುವ ಕುಟುಂಬಗಳ ಸಂಖ್ಯೆ ೫(೫%)ರಷ್ಟಿದೆ. ಒಟ್ಟಾರೆ ನೇಕಾರರ ಕುಟುಂಬಗಳ ಖರ್ಚುಪತ್ರಗಳನ್ನು ನೋಡಿದಾದ ಇವರೂ ಹೆಚ್ಚಾಗಿ ಹಾಸಿಗೆ 'ಇದ್ದಷ್ಟು ಕಾಲುಚಾಚಬೇಕು' ಎಂಬ ಗಾದೆ ಮಾತಿನಂತೆ ನಡೆಯುತ್ತದೆದ್ದಾರೆ ಎಂದು ತಿಳಿಯುತ್ತದೆ. ನೇಕಾರ ಕುಟುಂಬಗಳು ಶೇ ೬೬ ರಷ್ಟು ಮದ್ಯಮ ಖರ್ಚುದಾರರು. ಆದ್ದರಿಂದ ಇವರ ಜೀವನ ಸಾಮಾನ್ಯವಾಗಿರುತ್ತವೆ.

| ಕೋಷ್ಟಕ–೨೨<br>ನೇಕಾರರ ಕುಟುಂಬಗಳಲ್ಲಿನ ಮಾಸಿಕ ಖರ್ಚು ಮಾಡುವ ವಿಧಗಳು(ವಸ್ತಗಳು) | | | | | | | | |
|---|---|---|---|---|---|---|---|---|
| ನೇಕಾರರ ಪ್ರತಿಯೊಂದು ಕುಟುಂಬಗಳಲ್ಲಿಯ ಕನಿಷ್ಟ ಮತ್ತು ಗರಿಷ್ಟ ಖರ್ಚುಗಳ ವಿವರ | | | | | | | | |
| ಅ.ನಂ | ಮಾಸಿಕ ಖರ್ಚಿನ ಮಾದರಿಗಳು (ವಸ್ತುಗಳು) | ಮಾಸಿಕ ಖರ್ಚುಗಳ ರೂಪಾಯಿ ಹಾಗೂ ಪ್ರತಿಕ್ರಿಯಿಸಿದವರು | | | | ಒಟ್ಟು ಪ್ರತಿಶತ | | |
| | | ಕನಿಷ್ಟ ರೂಪಾಯಿಗಳು | ಸದಸ್ಯರು | ಕನಿಷ್ಟ ರೂಪಾಯಿಗಳು | ಸದಸ್ಯರು | % | % | ಒಟ್ಟು |
| ೧ | ಆಹಾರ | ೧೫೦೦ | ೬೮ | ೧೮೦೦ | ೩೨ | ೬೮ | ೩೨ | ೧೦೦ |
| ೨ | ಬಟ್ಟೆ | ೨೦೦ | ೮೦ | ೩೦೦ | ೨೦ | ೮೦ | ೨೦ | ೧೦೦ |
| ೩ | ಮನೆ ಬಾಡಗಿ | ೬೦೦ | ೦ | ೧೦೦೦ | ೧೬ | ೦ | ೧೬ | ೧೬ |
| ೪ | ವಿದ್ಯುತ್ | ೬೦ | ೩೨ | ೧೨೦ | ೬೮ | ೩೨ | ೬೮ | ೧೦೦ |
| ೫ | ಶಿಕ್ಷಣ | ೨೦೦ | ೭೩ | ೩೦೦ | ೨೭ | ೭೩ | ೨೭ | ೧೦೦ |
| ೬ | ಔಷದಿಗಳ ಖರ್ಚು | ೨೦೦ | ೯೧ | ೩೦೦ | ೯ | ೯೧ | ೯ | ೧೦೦ |
| ೭ | ಧಾರ್ಮಿಕ ಆಚರಣೆಗಳಿಗೆ ಖರ್ಚು | ೧೫೦ | ೮೮ | ೨೫೦ | ೧೨ | ೮೮ | ೧೨ | ೧೦೦ |
| ೮ | ಸಂಚಾರಿ ಖರ್ಚು(ಟ್ರಾವಲಿಂಗ್) | ೧೦೦ | ೯೫ | ೨೦೦ | ೫ | ೯೫ | ೫ | ೧೦೦ |
| ೯ | ಮನರಂಜನಾ ಖರ್ಚು | ೧೫೦ | ೯೮ | ೧೮೦ | ೨ | ೯೮ | ೨ | ೧೦೦ |
| ೧೦ | ಇತರೆ ಖರ್ಚು | ೨೦೦ | ೮೯ | ೩೦೦ | ೧೧ | ೮೯ | ೧೧ | ೧೦೦ |
| ೧೦ | | ೩೩೬೦ | | ೪೭೫೦ | | | | |

| ನೇಕಾರರಿಗೆ ಸಂಬಂಧಿಸಿದ ಪ್ರಮುಖ ವಿಷಯಗಳ ವಿಶ್ಲೇಷಣೆ | |
|---|---|
| ೧ | ಸಮೀಕ್ಷೆಯಲ್ಲಿ ಒಟ್ಟಾರೆ ಪ್ರತಿಕ್ರಿಯೆ ನೀಡಿದ ೧೦೦ ನೇಕಾರರ ಕುಟುಂಬಗಳಲ್ಲಿ ಪ್ರತಿಕ್ರಿಯಿಸಿದವರ ಶೇ ೮೮ರಷ್ಟು ಮಧ್ಯಮ ವಯಸ್ಸಿನ ಜನರು ಹೆಚ್ಚಾಗಿ ಕಂಡುಬಂದಿದ್ದಾರೆ. |
| ೨ | ನೇಕಾರರ ಕುಟುಂಬಗಳಲ್ಲಿನ ಒಟ್ಟು ಜನಸಂಖ್ಯೆಯಲ್ಲಿ ಪುರುಷರ ಸಂಖ್ಯೆಯು ೨೯೯(ಶೇ. ೫೩.೬೮ %) ರಷ್ಟಿದೆ. ಅಷ್ಟೇ ಸಮಾನವಾಗಿ, ಸ್ವಲ್ಪ ಕಡಿಮೆ ಅಂತರದಲ್ಲಿ ಅಂದರೆ ೨೫೮(ಶೇ ೪೬.೩೨) ಮಹಿಳೆಯರು ಇದ್ದಾರೆ. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ಲಿಂಗ ಅಸಮಾನತೆಯು ಸ್ವಲ್ಪವೆ ಪ್ರಮಾಣದಲ್ಲಿರುವುದು ಸ್ಪಷ್ಟವಾಗುತ್ತದೆ. |
| ೩ | ಮುಖ್ಯವಾದ ಅಂಶವೆಂದರೆ, ಮೂರನೆಯ ಒಂದು ಭಾಗದಷ್ಟು ಅಂದರೆ ಶೇ ೩೩.೯೪ ರಷ್ಟು ಜನರು ೨೦ ರಿಂದ ೪೦ ವಯಸ್ಸಿನವರಾಗಿದ್ದು, ಅವರೆಲ್ಲರೂ ನೇಕಾರಿಕೆಯಲ್ಲಿ ಸಕ್ರೀಯರಾಗಿದ್ದಾರೆ. |
| ೪ | ಪ್ರತಿಕ್ರಿಯಿಸಿದವರ ಕುಟುಂಬಗಳಲ್ಲಿ ಹೆಚ್ಚಾಗಿ ೩೧೬(೫೬.೭೬%)ರಷ್ಟು ಜನರು ಮದುವೆರಾಗಿದ್ದಾರೆ. ಇನ್ನೂಳಿದ ೨೪(೪೩.೨೬%)ರಷ್ಟು ಜನರು ವೈವಾಹಿಕ ಜೀವನಕ್ಕೆ ಕಾಲಿಡದವರಾಗಿದ್ದಾರೆ. ಇಲ್ಲಿ ವೈವಾಹಿಕ ಜೀವನವು ವೈಯಕ್ತಿಕ ಜೀವನದ, ನೇಕಾರರ ಕುಟುಂಬ ಹಾಗೂ ನೇಕಾರಿಕೆಯ ವೃತ್ತಿ ಬದುಕಿನ ಮೇಲೆ ಪರಿಣಾಮ ಬೀರುತ್ತದೆ. |
| ೫ | ನೇಕಾರರಲ್ಲಿ ೪೩೧ ರಷ್ಟು ಜನರು (೭೭.೩೭%) ಶೈಕ್ಷಣಿಕ ಜೀವನ ಮಟ್ಟವನ್ನು ಹೊಂದಿದ್ದಾರೆ. |
| ೬ | ಸರಾಸರಿ ಒಂದು ಕುಟುಂಬದಲ್ಲಿ ೨ ರಿಂದ ೩ ಜನರು ಈ ಕೈಮಗ್ಗವನ್ನು ನೇಯುವುದು ಇವರ ಜೀವನದ ಬದುಕಾಗಿದೆ. |
| ೭ | ಸರಾಸರಿ ನೋಡಿದಾಗ ೯೭(೯೭%)ರಷ್ಟು ಕುಟುಂಬಗಳು ಪಾರಂಪರಿಕ ನೇಕಾರಿಕೆಯ ವೃತ್ತಿಯನ್ನು ತಮ್ಮ ಬದುಕಿನೊಂದಿಗೆ ಉಳಿಸಿಕೊಂಡು ಬಂದಿರುವ ನೇಕಾರ ಸಮುದಾಯಗಳನ್ನು ನೋಡುತ್ತೇವೆ. |
| ೮ | ಒಟ್ಟಾಗಿ ನೇಕಾರಿಕೆಯ ವೃತ್ತಿಯಿಂದ ಕೇವಲ ೧೦೦ ರಿಂದ ೨೦೦ರೂಪಾಯಿಗಳಷ್ಟು ಮಾತ್ರ ೬೮(೬೮%)ರಷ್ಟು ಜನರು ಹೊಂದಿದ್ದು ಇಲ್ಲಿ ಕಡಿಮೆ ಆದಾಯದ ಪ್ರಮಾಣವನ್ನು ಹೊಂದಿರುವ ಕುಟುಂಬಗಳು ಹೆಚ್ಚು ಕಂಡುಬರುತ್ತವೆ. |
| ೯ | ನೇಕಾರರು ಒಂದು ಮಗ್ಗದಲ್ಲಿ ಕನಿಷ್ಠ ೮ ರಿಂದ ೧೦ ಗಂಟೆಗಳಕಾಲ ದುಡಿಯುವವರು ೭೬(೭೬%)ರಷ್ಟು ಕಂಡುಬಂದಿದೆ. ಇದರಿಂದ ಸ್ಪಷ್ಟತೆಯನ್ನು ಪರೀಶಿಲಿಸಿದಾಗ ನೇಕಾರಿಕೆಯು ಹೆಚ್ಚುಗಂಟೆಗಳ ಕಾಲ ದುಡಿಯುವ ಶ್ರಮದಾಯಕ ಕೆಲಸವಾಗಿದೆ. |
| ೧೦ | ಭೌಗೋಳಿಕ ಲಕ್ಷಣ ಹಾಗೂ ಪರಿಸರದ ಪ್ರಭಾವದಿಂದ ಮನೆಗಳು ಕೆಳ ಮಟ್ಟದ ವಿಧಗಳಲ್ಲಿ ಕಂಡುಬರುತ್ತವೆ. ಈ ನೇಕಾರರ ಮನೆಗಳು ನೇಕಾರರ ಬಡತನವನ್ನು ತೋರಿಸಿಕೊಡುತ್ತದೆ. |
| ೧೧ | ನೇಕಾರರಲ್ಲಿ ಶೇ ೮೮ರಷ್ಟು ಬಡತನ ರೇಖೆಗಳಿಗಿಂತ ಕಡಿಮೆ ಇರುವ ಕುಟುಂಬಗಳು ಹೆಚ್ಚಾಗಿ ಕಂಡುಬರುತ್ತವೆ. |
| ೧೨ | ನೇಕಾರರ ಕುಟುಂಬಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಗಮನಿಸಿದಾಗ ಶೇ ೪೬ರಷ್ಟು ಸ್ವಚ್ಚತೆಯೆಡೆಗೆ ತಿಳಿದುಕೊಂಡಿದ್ದಾರೆ. ಶೇ ೭೪ ರಷ್ಟು ನೇಕಾರ ಕುಟುಂಬಗಳು ಅಡುಗೆಯ ಅನೀಲ ಬಳಸುತ್ತಿದ್ದಾರೆ. |
| ೧೩ | ಶೇ ೧೦೦ರಷ್ಟು ಜನ ಅಂದರೆ ೫೫೭ ಜನರಿಗೂ ಆಧಾರ ಕಾರ್ಡುಗಳ ಸೌಲಭ್ಯವನ್ನು ನೇಕಾರರ ಕುಟುಂಬಗಳು ಪಡೆದುಕೊಂಡಿವೆ. |
| ೧೪ | ನೇಕಾರರ ಕುಟುಂಬಗಳಲ್ಲಿ ಸರಕಾರಿ ಕ್ಷೇತ್ರದಲ್ಲಿ ಶಿಷ್ಯವೇತನ ಪಡೆದುಕೊಂಡಿರುವ ಮಕ್ಕಳ ಸಂಖ್ಯೆ ೪೨(೪೬.೧೫%)ರಷ್ಟಿದೆ. ನೇಕಾರರ ಕುಟುಂಬಗಳಲ್ಲಿ ನೇಕಾರ ಸಹಕಾರಿ ಸಂಘಗಳಲ್ಲಿ ಶಿಷ್ಯವೇತನ ಪಡೆದುಕೊಂಡಿರುವ ಮಕ್ಕಳ ಸಂಖ್ಯೆ ೨೬(೨೮.೫೭%)ರಷ್ಟಿದೆ. ನೇಕಾರರ ಕುಟುಂಬಗಳಲ್ಲಿ ಯಾವುದೇ ಶಿಷ್ಯವೇತನ ಪಡೆದುಕೊಳ್ಳದ ಮಕ್ಕಳ ಸಂಖ್ಯೆ ೨೩(೨೫.೨೮%)ರಷ್ಟಿದೆ. |
| ೧೫ | ನೇಕಾರ ಕುಟುಂಬಗಳ ಭೂಹಿಡುವಳಿಯ ಪ್ರಮಾಣವನ್ನು ನೋಡಿದಾಗ ನೇಕಾರರ ಕುಟುಂಬಗಳಲ್ಲಿ |

| | |
|---|---|
| | ಶೇ ೯೪ ರಷ್ಟು ಭೂಮಿಯನ್ನು ಹೊಂದದೆ ಇರುವುದು ಗೋಚರಿಸುತ್ತದೆ. ನೇಕಾರ ಕುಟುಂಬಗಳು ಭೂ ಆಸ್ತಿಯನ್ನು ಕಡಿಮೆ ಹೊಂದಿದ್ದಾರೆ ಎಂಬುವುದು ಸ್ಪಷ್ಟವಾಗುತ್ತದೆ. |
| ೧೬ | ನೇಕಾರರ ಕುಟುಂಬಗಳಲ್ಲಿ ಗರಿಷ್ಟ ಶೇ ೪೬ರಷ್ಟು ಮನೆಗಳಲ್ಲಿ ಎರಡು ಮಗ್ಗಗಳನ್ನು ಉಪಯೋಗಿಸುವರು. |
| ೧೭ | ಒಟ್ಟು ನೇಕಾರರ ಕುಟುಂಬದಲ್ಲಿ ಶೇ ೯೮ರಷ್ಟು ಯಾವುದಾದರೊಂದು ಸಾಲದ ಸುಳಿಯಲ್ಲಿ ಸಿಲುಕಿಕೊಂಡಿರುವುದು ಕಂಡುಬರುತ್ತದೆ. |
| ೧೮ | ನೇಕಾರರ ಸಾಲಗಳಿಗೆ ಪ್ರಮುಖ ಕಾರಣಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಶೇ ೮೪ರಷ್ಟು ಕುಟುಂಬಗಳು ನೇಕಾರಿಕೆ ವೃತ್ತಿಗೆ ಹೆಚ್ಚು ಸಾಲವನ್ನು ಪಡೆದಿರುವುದು ಕಂಡುಬರುತ್ತದೆ. ಹಾಗೂ ಶೇ ೮೦ರಷ್ಟು ನೇಕಾರ ಕುಟುಂಬಗಳು ಆರೋಗ್ಯ ಸಂಬಂಧಿಸಿದಂತೆ ಸಾಲವನ್ನು ಮಾಡಿರುವುದು ಕಂಡುಬಂದಿದೆ. |
| ೧೯ | ಸರಕಾರಿ ಯೋಜನೆಗಳನ್ನು ನೇಕಾರ ಸಹಕಾರಿ ಸಂಘಗಳ ಮುಖೇನ ಸದಸ್ಯತ್ವದಿಂದ ಸಂಘಟಿತ ವಲಯದಲ್ಲಿದ್ದರು ಸರಕಾರಿ ಯೋಜನೆಗಳ ಸದುಪಯೋಗ ಮಾಡಿಕೊಳ್ಳುವಲ್ಲಿ ನೇಕಾರರು ವಿಫಲರಾಗಿರುವುದು ಕಂಡುಬರುತ್ತದೆ. ಆದರೆ ಈ ಯೋಜನೆಗಳು ಯಾರಿಗೆ ತಲುಪುವುದು ಇಲ್ಲಿ ಮುಖ್ಯವಾಗಿರುತ್ತದೆ. |
| ೨೦ | ಈ ಭಾಗದ ಕೈಮಗ್ಗ ನೇಕಾರರು ಶೇ ೭೩ರಷ್ಟು ನೇಕಾರಿಕೆ ಕುಟುಂಬಗಳು ಇನ್ನೂ ಸಾಂಪ್ರದಾಯಿಕ ಉತ್ಪನ್ನಗಳಾದ ಇಳಕಲ್ಲ ಮಾದರಿಯ ಸೀರೆ ಹಾಗೂ ಗುಳೇದಗುಡ್ಡದ ಖಣ(ಕುಪ್ಪಸ)ಗಳನ್ನು ಉತ್ಪಾದಿಸುತ್ತಿರುವುದು ಕಂಡುಬರುತ್ತದೆ. ಆದ್ದರಿಂದ ಈ ಭಾಗದ ನೇಕಾರರಿಗೆ ದಿನದ ವೇತನದಲ್ಲಿ ನೇಕಾರರು ತಮ್ಮ ಬದುಕನ್ನು ಕಟ್ಟಿಕೊಂಡಿದ್ದಾರೆ. |
| ೨೧ | ಒಟ್ಟಾರೆ ನೇಕಾರರ ಕುಟುಂಬಗಳ ಖರ್ಚು ನೋಡಿದಾದ ಇವರೂ ಹೆಚ್ಚಾಗಿ ಹಾಸಿಗೆ 'ಇದ್ದಷ್ಟು ಕಾಲುಚಾಚಬೇಕು' ಎಂಬ ಗಾದೆ ಮಾತಿನಂತೆ ನಡೆಯುತ್ತದ್ದಾರೆ ಎಂದು ತಿಳಿಯುತ್ತದೆ. ನೇಕಾರ ಕುಟುಂಬಗಳು ಶೇ ೬೬ ರಷ್ಟು ಮಧ್ಯಮ ಖರ್ಚುದಾರರು. ಆದ್ದರಿಂದ ಇವರ ಜೀವನ ಸಾಮಾನ್ಯವಾಗಿರುತ್ತವೆ. |
| | |

# ಅಧ್ಯಾಯ ಐದು:

# ಸಮಾರೋಪ

ಭಾರತದಲ್ಲಿ ಗೃಹ ಹಾಗೂ ಗುಡಿ ಕೈಗಾರಿಕೆಗಳು ಇಗಾಗಲೇ ಎಷ್ಟೋ ಹೆಸರಿಲ್ಲದೆ ನಾಶವಾಗಿ ಹೊಗಿವೆ. ಆದರೆ ಈ ನೇಕಾರಿಕೆಯು ತನ್ನ ಪಾರಂಪರಿಕ ಉತ್ಪನ್ನಗಳಿಂದ ಇನ್ನೂ ಜೀವಂತವಾಗಿದೆ. ದೇಶದಲ್ಲಿ ಕೈಮಗ್ಗ ಉತ್ಪನ್ನಗಳಿಗೆ ಬೇಡಿಕೆಗಳು ಹೆಚ್ಚುತ್ತಿವೆ. ಸರಕಾರಗಳು ಹಾಗೂ ಸಹಕಾರಿ ಸಂಘಗಳು ಈ ಗುಡಿ ಕೈಗಾರಿಕೆ ಕೈಮಗ್ಗದ ಉತ್ಪನ್ನಗಳನ್ನು ಉಳಿಸಲು ದೃಢನಿರ್ಧಾರ ಮಾಡಬೇಕಾಗಿದೆ. ಇದರಿಂದ ಸರಕಾರವು ಸಹಕಾರಿ ಸಂಘಗಳಿಗೆ ಹೆಚ್ಚಿನ ಭಲ ನೀಡಬೇಕಾಗಿದೆ. ನೇಕಾರರಿಗೆ ಹೆಚ್ಚಿನ ಆದಾಯವು ಒದಗುವಂತೆ ಮಾಡುವ ಕಾರ್ಯವಾಗಬೇಕಾಗಿದೆ. ಕೈಮಗ್ಗಗಳ ಉತ್ಪನ್ನಗಳನ್ನು ಉಳಿಸಿ ಬೆಳಸಿ ಮುಂದಿನ ಪೀಳಿಗೆಗೆ ನೀಡಬೇಕಾಗಿದೆ. ಇಲ್ಲವಾದರೆ ಎಲ್ಲ ಕುಲಸುಬುಗಳ ಹಾಗೆಯೇ ವಸ್ತುಸಂಗ್ರಹಾಲಯದಲ್ಲಿ ಕೂಡಿಟ್ಟು ದೇಶೀಯ ಪರಂಪರೆಯನ್ನು, ದೇಶಿಯತೆಯನ್ನು ಪ್ರಚಾರಮಾಡಬೇಕಾಗುತ್ತದೆ.

ಸಹಕಾರಿ ಚಳುವಳಿಯ ಹಾದಿಯಲ್ಲಿ ದೇಶಿಯತೆಯನ್ನು ಅರಿತು ಬೆರೆತುಕೊಂಡು ನೇಕಾರರ ಬದುಕಿಗೆ ಆಶಾದೀಪ ವಾಗುವ ಕಾರ್ಯವನ್ನು ನೇಕಾರ ಸಹಕಾರಿ ಸಂಘಗಳು ಇನ್ನು ಹೆಚ್ಚಿನ ಕೆಲಸ ಮಾಡಬೇಕಾಗಿವೆ. ಭಾರತ ಸರಕಾರವು ಎಲ್ಲ ಸಮಸ್ಯೆಗಳ ಬಗೆಗೂ ಸಹಕಾರಿ ದೃಷ್ಟಿಕೋನ ಇರಿಸಿಕೊಂಡಿದೆ. ಆದರೆ ಸಹಕಾರಿ ಕ್ಷೇತ್ರ ಹಾಗೂ ಸರಕಾರಿ ಕ್ಷೇತ್ರವು ಕನಿಷ್ಠ ಮಟ್ಟದ ನೇಕಾರರನ್ನು ಮೇಲೆತ್ತುವ ಕಾರ್ಯಮಾಡಬೇಕಾಗಿದೆ. ಆ ಕಾರ್ಯವನ್ನು ಮಾಡಿದಾಗ ಭಾರತ ಸರಕಾರದ ದೃಷ್ಟಿಕೋನವನ್ನು ಈಡೇರಿಸಲೂ ಸಾಧ್ಯವಾಗುತ್ತದೆ. ಪಾರಂಪರಿಕ ಕಲೆಯ ಬಿಂಭವಾದ ಈ ಭಾಗದ ಉತ್ಪನ್ನಗಳು ದೇಶದ ಮೂಲೆ ಮೂಲೆಯಲ್ಲಿ ಪ್ರಚಾರವಾಗಬೇಕಾಗಿದೆ ಹಾಗೂ ಮಾರುಕಟ್ಟೆಯು ಎಲ್ಲ ಕಡೆ ಹರಡುವಂತ ವ್ಯವಸ್ಥೆ ಈ ನೇಕಾರಿಕೆಯ ಉತ್ಪನ್ನಕ್ಕೆ ಬೇಕಾಗಿದೆ. ನೈಸರ್ಗಿಕವಾಗಿ ದೇಹಕ್ಕೆ ಉತ್ತಮತೆಯನ್ನು ನೀಡುವ ಈ ಬಟ್ಟೆಗಳು ಆರೋಗ್ಯವಂತ ದೇಹಕ್ಕೆ ಸಹಕಾರಿಯಾಗುತ್ತವೆ ಹಾಗೂ ಆರೋಗ್ಯವನ್ನು ಕಾಪಾಡಿಕೊಳ್ಳುತ್ತವೆ. ನೇಕಾರರ ಬದುಕು ಆರ್ಥಿಕವಾಗಿ, ಸಾಮಾಜಿಕವಾಗಿ ಉತ್ತಮ ಮಟ್ಟವನ್ನು ತಲುಪಬೇಕಾಗಿದೆ. ಉತ್ತಮ ಮಟ್ಟವನ್ನು ತಲುಪಲು ಸಹಕಾರಿ ಸಂಘಗಳು ಹಾಗೂ ಸರಕಾರಗಳು ಕೂಡಿಕೊಂಡು ಕೆಲಸಮಾಡಬೇಕಾಗಿದೆ. ಇಲ್ಲಿ 'ಸಹಕಾರ ವಲಂ ನೇಕಾರ ಸುಖಂ' ವಾಖ್ಯೆಯು ನೇಕಾರರ ಜೀವನದಲ್ಲಿ ಮರುಕಳಿಸುವಂತ ಕಾಲ ಬರಬೇಕಾಗಿದೆ. ಅದಕ್ಕೆ ಸಹಕಾರಿ ಸಂಘಗಳು ಹೆಚ್ಚು ಪರಿಶ್ರಮವನ್ನು ಹಾಕಬೇಕಾಗಿದೆ. ನೇಕಾರ ಸಹಕಾರ ಸಂಘಗಳ ಉತ್ತಮ ನಿರ್ವಹಣೆಯು ನೇಕಾರರ ಅಭಿವೃದ್ಧಿಗೆ ಸಹಾಯಕ ಕಾರ್ಯ ಮಾಡಬೇಕಾಗಿದೆ.

ಭಾರತದ ಜವಳಿ ಸಚಿವಾಲಯವು ಯೋಜನೆಗಳನ್ನು ಕೆಲಸಗಾರರ ಜೀವ ವಿಮೆ, ಆರೋಗ್ಯ ಹಾಗೂ ಮಾರಾಟಕ್ಕೆ ಬೇಕಾದ ನೆರವು ನೀಡುತ್ತಿದೆ. ಕೈಮಗ್ಗಗಳನ್ನು ಅಭಿವೃದ್ಧಿ ಪಡಿಸುವ ಜವಾಬ್ದಾರಿಯನ್ನು ಹೊತ್ತಿದೆ. ಕೈಮಗ್ಗ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವ ಸ್ವಯಂ ಸೇವಾ ಹಾಗೂ ಖಾಸಗಿ ಸಂಸ್ಥೆಗಳನ್ನು ಪ್ರೋತ್ಸಾಹಿಸುವುದು

ಅತ್ಯಗತ್ಯವಾಗಿದೆ. ಜೊತೆಗೆ ಸಾರ್ವಜನಿಕ ಖಾಸಗಿ ಸಹಭಾಗಿತ್ವವನ್ನು ಜೊತೆಯಲ್ಲಿ ಅಭಿವೃದ್ಧಿಗೊಳಿಸುವ ಮಾದರಿಯನ್ನು ರೂಪಿಸಿದೆ. ಕೈಮಗ್ಗ ಉತ್ಪಾದನೆಯು ಕುಟುಂಬ ವರ್ಗದವರಿಗೆ ಪೂರಕ ಚಟುವಟಿಕೆಯಾಗಿದ್ದು ಅವರಿಗೆ ಬದಲಿ ಉದ್ಯೋಗ ಕಲ್ಪಿಸುವುದು ಅತ್ಯಗತ್ಯ. ಈ ಕುಟುಂಬಗಳಿಗೆ ವಿದ್ಯಾಭ್ಯಾಸ, ಆರೋಗ್ಯ ವ್ಯವಸ್ಥೆ, ಆರ್ಥಿಕ ಸಹಾಯಗಳ ಮೂಲಕ ವಿಶೇಷ ಆದ್ಯತೆ ನೀಡಬೇಕಾಗಿದೆ. ಆರ್ಥಿಕ ಅಭಿವೃದ್ಧಿಯ ಸೌಲಭ್ಯಗಳು ಈ ಕುಟುಂಬಗಳನ್ನು ತಲುಪುತ್ತಿಲ್ಲ. ಇದು ಕೇವಲ ಸರ್ಕಾರದ ಹೊಣೆಗಾರಿಕೆ ಮಾತ್ರವಲ್ಲದೆ, ಸಹಕಾರಿ ಸಂಘಗಳು, ಖಾಸಗಿ ಸಂಸ್ಥೆಗಳು ಮತ್ತು ಸ್ವಯಂ ಸೇವಾ ಸಂಸ್ಥೆಗಳು ಕೂಡ ಇವರ ಏಳಿಗೆಗಾಗಿ ಸಹಾಯ ಹಸ್ತವನ್ನು ನೀಡಬೇಕಾಗಿದೆ.

## ೫.೨. ಅಧ್ಯಯನದ ಮೂಲಕ ಕಂಡುಕೊಂಡ ಫಲಿತಗಳು

- ಸಹಕಾರಿ ಸಂಘದಲ್ಲಿರುವ ನೇಕಾರರನ್ನು ಒಗ್ಗೂಡಿಸಲು ಹಾಗೂ ಕೆಲಸಕಾರ್ಯಗಳಿಗೆ ಒತ್ತು ನೀಡಲು ಸಂಘಗಳಿಗೆ ಪ್ರಾಯಾಸದ ಕೆಲಸವಾಗಿವೆ. ಅದಕ್ಕೆ ಮುಖ್ಯ ಕಾರಣ ಕಡಿಮೆ ಆದಾಯ.
- ಹೆಚ್ಚುತ್ತಿರುವ ಮಾರುಕಟ್ಟೆ ಅಂತರವು ಭೌತಿಕವಾಗಿ ಈ ಕ್ಷೇತ್ರದ ಮೇಲೆ ಕೆಟ್ಟ ಪರಿಣಾಮವನ್ನು ಬೀರಿದರು ಸಹ, ತನ್ನ ಕ್ರಮರಹಿತ ಚರಿತ್ರೆಯಲ್ಲಿ ದೂರದ ರಫ್ತು ಮಾರುಕಟ್ಟೆಯಿಂದ ಅವಕಾಶಗಳನ್ನು ಯಶಸ್ವಿಯಾಗಿ ಗಿಟ್ಟಿಸಿದ ಕ್ಷೇತ್ರ ಇದೊಂದೇ ಎನ್ನುವುದು ಕೂಡಾ ವಾಸ್ತವ ಸಂಗತಿಯಾಗಿದೆ.
- ನೇಕಾರರು ನೇಕಾರಿಕೆಯನ್ನು ಮಾಲೀಕರ ಅಧೀನದಲ್ಲಿ ದುಡಿಯುತ್ತಿದ್ದುದು ಹೆಚ್ಚಾಗಿ ಕಂಡುಬರುತ್ತದೆ. ಏಕೆಂದರೆ ಸಹಕಾರಿ ಸಂಘಗಳಲ್ಲಿ ಬಾಕಿ, ಸಾಲ ಹಾಗೂ ಕೂಲಿ ಸರಿಯಾಗಿ ಹಾಗೂ ಸರಿಯಾದ ಸಮಯದಲ್ಲಿ ನೇಕಾರನಿಗೆ ದೊರಕದಿರುವ ಕಾರಣ. (ಕೆಲವು ಸಹಕಾರಿ ಸಂಘಗಳನ್ನು ಹೊರತುಪಡಿಸಿ)
- ನೇಕಾರರು ಸಹಕಾರಿ ಕ್ಷೇತ್ರ, ಖಾಸಗಿ ಕ್ಷೇತ್ರ(ಬಂಡವಾಳಶಾಹಿ/ಮಾಲೀಕತ್ವದಲ್ಲಿ) ಹಾಗೂ ಸರಕಾರಿ ನಿಗಮ ಮಂಡಳಿ ನಿರ್ವಹಿಸುವ ಕ್ಷೇತ್ರದಲ್ಲಿ ನೇಕಾರಿಕೆಯನ್ನು ಅವಲಂಭಿಸಿದ್ದು ಮೇಲ್ನೋಟಕ್ಕೆ ಹಚ್ಚಿನ ಜನರು ಸಹಕಾರಿ ಸಂಘದಲ್ಲಿ ಇರುವುದನ್ನು ಕಾಣುತೀವೆ. ಈ ಅಧ್ಯಯದ ಮೂಲಕ ನೋಡಿದಾಗ ಹೆಚ್ಚಾಗಿ ನೇಕಾರರು ಖಾಸಗಿ(ಮಾಲೀಕರ) ಅಧೀನದಲ್ಲಿ ನೇಕಾರಿಕೆ ಮಾಡುವುದು ಗೋಚರಿಸುತ್ತದೆ.
- ಮುಖ್ಯವಾಗಿ ಸಹಕಾರಿ ಸಂಘಗಳು ಹಾಗೂ ಖಾಸಗಿ ವಲಯದಲ್ಲಿ ನೇಯುವ ನೇಕಾರರು ಸಾಂಪ್ರದಾಯಕ ಉಡುಪುಗಳಾದ ಇಳಕಲ್ಲ ಸೀರೆ ಹಾಗೂ ಗುಳೇದಗುಡ್ಡ ಖಣವನ್ನು ಉತ್ಪಾದಿಸುವುದು ಕಂಡುಬರುತ್ತದೆ.
- ನೇಕಾರರ ಅಭಿಪ್ರಾಯದಂತೆ ಇಂದಿಗೂ ಇಳಕಲ್ಲ ಸೀರಗೂ ಹಾಗೂ ಗುಳೇದಗುಡ್ಡ ಖಣಗಳಿಗೆ ಬೇಡಿಕೆ ಹೆಚ್ಚಿರುವುದನ್ನು ತಿಳಿಸುತ್ತಾರೆ. ಆದರೆ ನೇಕಾರರಿಗೆ ಕೂಲಿ ಮಾತ್ರ ಬಹಳ ಕಡಿಮೆಯಿದೆ.

- ಸಹಕಾರಿ ಸಂಘದ ಕಾರ್ಯನಿರ್ವಾಹಕರು ಹೇಳಿರುವಂತೆ ಬಹುರಾಷ್ಟ್ರೀಯ ಕಂಪನಿಗಳಿಂದ ೧ ತಿಂಗಳಿಗೆ ೬೦೦೦೦ ಸೀರೆಗಳ ಆಡರ್‌ಗಳು ನಮ್ಮ ಸೀರೆಗಳಿಗೆ ಬಂದಿತ್ತು ಆದರೆ ಎಲ್ಲಾ ಸಹಕಾರಿ ಸಂಘಗಳ ಸಭೆ ಸೇರಿ ಉತ್ಪಾದನಾ ಸಾಮರ್ಥ್ಯವನ್ನು ಪರೀಕ್ಷಿಸಿ ನೋಡಿದಾಗ ಕೆಲವೇ ದಿನಗಳಲ್ಲಿ ಉತ್ಪಾದನೆ ಸಾಧ್ಯವಾಗದು ಎಂದು ಅದನ್ನು ಸ್ಥಗಿತಗೋಳಿಸಲಾಯಿತು. ಇದರಿಂದ ನೇಕಾರಿಕೆಯ ಪ್ರಮಾಣ ಕಡಿಮೆಯಾಗಿದೆ ಎಂದು ತಿಳಿಯುತ್ತದೆ.
- ಗುಳೇದಗುಡ್ಡ ಖಣ ಹಾಗೂ ಇಳಕಲ್ಲ ಸೀರೆಗಳು ಇಂದಿಗೂ ಜನಪ್ರೀಯವಾಗಿ ಉಳಿಯಲು ಕಾರಣಗಳನ್ನು ಹುಡುಕಲು ಕಠಿಣವಾಗುವುದು. ಆದರೂ ನೇಕಾರರ ಅಭಿಪ್ರಾಯದಂತೆ ಸಾಂಪ್ರದಾಯಕ, ಕಲೆ, ಕೈಮಗ್ಗದಿಂದ ನೇಯ್ದ ಬಟ್ಟೆ ಎಂದು ಕಂಡುಬರುವುದು.
- ಮಹಾರಾಷ್ಟ್ರ ಹಾಗೂ ಉತ್ತರ ಕರ್ನಾಟಕದ ಭಾಗದ ಜನರು ಇಳಕಲ್ಲ ಸೀರೆ ಹಾಗೂ ಗುಳೇದಗುಡ್ಡದ ಖಣಗಳಿಗೆ ಮುಖ್ಯ ಮಾರುಕಟ್ಟೆ ಕಲ್ಪಿಸಿ ಕೊಟ್ಟಿದ್ದಾರೆ. ಈ ಉತ್ತರ ಕರ್ನಾಡಕದ ಮಹಿಳೆರಿಗೆ ಮೂಗುತಿ, ಕುಂಕುಮ, ಬಳೆ ಮುಂತಾದವುಗಳು ಮುತ್ತೈದಯ ಸಂಕೇತವಾದಂತೆ ಇಂದು ಈ ಸೀರೆ ಹಾಗೂ ಖಣಗಳು ಪಾರಂಪರಿಕವಾಗಿ ತೊಡುತ್ತಾ ಬಂದಿದ್ದಾರೆ ಎಂಬುವುದು ಕಂಡುಬರುತ್ತದೆ.
- ಸಾಂಪ್ರದಾಯಿಕ ಹಾಗೂ ಧಾರ್ಮಿಕವಾಗಿ ನಡೆಯುವ ಮದುವೆ ಸಮಾರಂಭಗಳಲ್ಲಿ ಇಳಕಲ್ಲ ಸೀರೆ ಹಾಗೂ ಗುಳೇದಗುಡ್ಡ ಖಣಗಳನ್ನು ಬಳಸುತ್ತಾರೆ.
- ನೇಕಾರಿಕೆಯಲ್ಲಿ ತೊಡಗಿರುವ ನೇಕಾರರಿಗೆ, ಮಾಲೀಕರಿಗೆ ಹಾಗೂ ಸಹಕಾರಿ ಸಂಘಗಳಿಗೆ ಪ್ರಮುಖವಾಗಿ ಎದರುಸುತ್ತಿರುವ ಸಮಸ್ಯೆಗಳು ಉದ್ಯಮಿಗೆ ಬೇಕಾಗುವ ಕಚ್ಚಾ ವಸ್ತುಗಳು. ಕಚ್ಚಾವಸ್ತುಗಳ ಪೂರೈಕೆಯಲ್ಲಿ ಏರುಪೇರುಗಳು ಕಂಡುಬರುತ್ತದೆ. ಹಾಗೂ ಸರಕಾರದ ನೀತಿ–ಧೋರಣೆಗಳಿಂದ ಕಚ್ಚಾ ವಸ್ತುಗಳ ಬೆಲೆಯಲ್ಲಿ ಹಾಗು ನೇಕಾರಿಕೆಯ ಪರಿಸ್ಥಿತಿ ಗಂಭೀರವಾಗಿರುವುದು.
- ನೇಕಾರಿಕೆಯು ಹಲವು ವಯೋಮಾನದವರಿಗೂ ಕೆಲಸವನ್ನು ನೀಡಿದೆ. ಮಕ್ಕಳಿಗೆ, ಯುವಕರಿಗೆ, ಮಧ್ಯಮ ವಯಸ್ಕರರಿಗೆ, ವೃದ್ದರಿಗೆ ಮತ್ತು ಮಹಿಳೆಯರು ಈ ನೇಕಾರಿಕೆಯಲ್ಲಿ ಸಂಪೂರ್ಣ ತೊಡಗಿಕೊಂಡ ಉದಾಹರಣೆಗಳಿವೆ.
- ವಿದ್ಯುತ್ ಮಗ್ಗಗಳಿಂದ ಕೈಮಗ್ಗಗಳಿಗೆ ಎಲ್ಲ ರೀತಿಯಲ್ಲಿ ಪೈಪೋಟಿ ನಡೆದಿದೆ.

## ೫.೨. ಸಲಹೆಗಳು ಅಥವಾ ಪರಿಹಾರೋಪಾಯಗಳು

- ನೇಕಾರರ ಉತ್ಪನ್ನಗಳನ್ನು ಕ್ರಮಬದ್ದವಾಗಿ ಮಾರಾಟ ಮಾಡಲು ನಮ್ಮ ನೆರೆಯ ರಾಜ್ಯಗಳಾದ ಮಹಾರಾಷ್ಟ್ರ, ತಮಿಳುನಾಡು, ಆಂಧ್ರ ಪ್ರದೇಶ ಈಗಿನ ಸೀಮಾಂಧ್ರ, ಹಾಗೂ ಗುಜರಾತ್ ರಾಜ್ಯಗಳಲ್ಲಿ

'ಕಪಡಾ ಪಾರ್ಕೆಟ್'ಗಳು ನೇಕಾರರ ಉತ್ಪನ್ನಗಳನ್ನು ಕೊಂಡುಕೊಳ್ಳುವ ಕೇಂದ್ರಗಳನ್ನು ಸ್ಥಾಪಿಸಿದ್ದಾರೆ. ಈ ರೀತಿ ಮಾರಾಟದ ವ್ಯವಸ್ಥೆಯನ್ನು ನಮ್ಮ ನೇಕಾರರ ಪ್ರಮುಖ ನಗರಗಳಲ್ಲಿ ನಡೆಯಬೇಕಿದೆ.

- ರೈತರ ಮಾರುಕಟ್ಟೆ ಎಪಿಎಂಸಿ ಮಾದರಿಯಲ್ಲಿಯೇ, ನೇಕಾರ ಉತ್ಪನ್ನಗಳ ಮಾರಾಟ ವ್ಯವಸ್ಥೆ ಮಾಡಬೇಕು, ರಾಜ್ಯದಿಂದ ರಾಜ್ಯಕ್ಕೆ ಹಾಗೂ ವಿದೇಶಗಳಿಗೆ ಮಾರಾಟ ಮಾಡುವಂತ ವ್ಯವಸ್ಥೆಯಾಗಬೇಕು.
- ಕೈಮಗ್ಗಕ್ಕೆ ನಿಜವಾದ ಬೇಡಿಕೆಯನ್ನು ಸ್ಥಾಪಿಸಲು ಅಥವಾ ಅದರ ಬೇಡಿಕೆಯ ಕೊರತೆಯನ್ನು ನೀಗಿಸಲು ಕೈ ಮಗ್ಗ ಮತ್ತು ವಿದ್ಯುತ್‌ಚಾಲಿತ ಮಗ್ಗದ ನಡುವೆ ವ್ಯತ್ಯಾಸ ಕಂಡುಕೊಳ್ಳಬೇಕಾದ ಅಗತ್ಯವಿದೆ. ಈಗ ಇರುವ ಬೇಡಿಕೆಯ ಗೊತ್ತು ಪಡಿಸುವಿಕೆಯು ಈ ಕ್ಷೇತ್ರದ ಯಥೋಚಿತ ಬಂಡವಾಳ ಹೂಡಿಕೆಯನ್ನು ನಿರ್ಧರಿಸುವುದರಲ್ಲಿ ನೆರವಾಗುತ್ತದೆ.
- ನೇಕಾರರ ಆದಾಯವನ್ನು ಹೆಚ್ಚಿಸಲು ಮೂಲ ನೂಲಿನ ಬೆಲೆ ಕಡಿಮೆ ಮಾಡಬೇಕು ಹಾಗೂ ಸಿದ್ಧಪಡಿಸಿದ ವಸ್ತುಗಳ ಬೆಲೆ ನಿಖರವಾಗಿರಬೇಕು.
- ಸಾಂಪ್ರದಾಯಕ ಉತ್ಪನ್ನಗಳಿಗೆ ಉಡುಪುಗಳಿಗೆ ಸರಕಾರದಿಂದ ಉನ್ನತ ಪ್ರಚಾರ ಮಾಡುವುದು ಮತ್ತು ಜನಾಕರ್ಷಣೆಗಾಗಿ ಇಂದಿನ ಸಮೂಹ ಮಾಧ್ಯಮಗಳನ್ನು ಸರಿಯಾಗಿ ಬಳಸಿಕೊಳ್ಳಲು ಸರಕಾರವು ಕ್ರಮಕೈಗೊಳ್ಳಬೇಕು.
- ವಿದೇಶಿಗಳಲ್ಲಿ ನಮ್ಮ ದೇಶದ ಸಾಂಪ್ರದಾಯಕ ಬಟ್ಟೆಗಳಿಗೆ ಬೇಡಿಕೆಗಳು ಇಂದು ಹೆಚ್ಚುತ್ತಿವೆ. ಕೈಮಗ್ಗದ ಹಾಗೂ ಕರಕುಶಲತೆಯಿಂದ ತಯಾರಿಸಿದ ವಸ್ತುಗಳಿಗೆ ಬೇಡಿಕೆ ಹೆಚ್ಚುತ್ತಿದೆ. ಆದ್ದರಿಂದ ದೇಶದಲ್ಲಿರುವ ಸಹಕಾರಿ ಸಂಘಗಳು ವಿದೇಶಿಗಳ ಸಂಪರ್ಕಕ್ಕೆ ನೇಕಾರರ ಸರಕಾರಿ ನಿಗಮಮಂಡಳಿಗಳು ಮಧ್ಯವಹಿಸಿ ನಮ್ಮ ಉತ್ಪನ್ನಗಳಿಗೆ ಒಳ್ಳೆ ಬೆಲೆ ಬರುವಂತೆ ನೋಡಿಕೊಳ್ಳಬೇಕಾಗಿದೆ.
- ನೇಕಾರರು: ಸಹಕಾರಿ ಸಂಘದಲ್ಲಿ ಸದಸ್ಯತ್ವ ಪಡೆದ ನೇಕಾರರಿಗೂ ಹಾಗೂ ಸದಸ್ಯತ್ವ ಇಲ್ಲದಿರುವ ನೇಕಾರಿಕೆ ಮಾಡುವ ಎಲ್ಲ ನೇಕಾರರಿಗೂ ಆಧಾರ ರೀತಿಯಲ್ಲಿ ಹಾಗೂ ಆಧಾರ ಕಾರ್ಡಗಳಿಗೆ ಲಿಂಕ್ ರೀತಿಯಲ್ಲಿ ಗುರುತಿನ ಚೀಟಿಗಳನ್ನು ನೀಡಬೇಕಾಗಿದೆ. ಇದರಿಂದ ಸರಕಾರಿ ಸೌಲಭ್ಯಗಳನ್ನು ಸರಿಯಾಗಿ ಬಡ ನೇಕಾರರಿಗೆ ಹಂಚಲು ಸಹಾಯವಾಗುತ್ತದೆ.
- "ಸಮೂಹ ನೇಕಾರಿಕೆ ಮನೆ" ಎಂಬ ಯೋಜನೆಯನ್ನು ಸರಕಾರ ಮಾಡಬೇಕಾಗಿದೆ. ಸಮೂಹ ನೇಕಾರಿಕೆ ಎಂದರೆ ೪ ರಿಂದ ೫ ಜನರು ಕೂಡಿಕೊಂಡು ಒಂದು ತಗಡಿನ ಅಥವಾ ಕಾಂಕ್ರೇಟ್‌ನ ಮನೆಯಲ್ಲಿ ನೇಕಾರಿಕೆ ಮಾಡುವುದು. ಈ ಯೋಜನೆಯು ಏಕೆ ಈ ಪ್ರದೇಶದಲ್ಲಿ ಅವಶ್ಯಕ ಎಂದರೆ, ನೇಕಾರಿಕೆಯಲ್ಲಿ ತೊಡಗಿರುವ ನೇಕಾರರು ಸ್ವಂತ ಮನೆ ಇದ್ದರು ಅದರಲ್ಲಿ ಅಣ್ಣ ತಮ್ಮಂದಿರ ಪಾಲು ಆಗುತ್ತವೆ. ಅಲ್ಲಿ ನೇಕಾರಿಕೆಯು ನಸಿಸಿ ಹೋಗುತ್ತಿದೆ. ಹಾಗೂ ಆಸಕ್ತಿ ಇರುವ ನೇಕಾರರಿಗೆ ಮನೆ

ಇರುವುದಿಲ್ಲ. ಆದ್ದರಿಂದ ಆಸಕ್ತ ನೇಕಾರ ಗುಂಪುಗಳಿಗೆ ನೇಕಾರಿಕೆಯ ಸಮೂಹ ನೇಕಾರಿಕೆ ಮನೆಗಳನ್ನು ಕಟ್ಟಿಸಿಕೊಡುವಂತ ಯೋಜನೆ ಹಾಕಿಕೊಳ್ಳಬೇಕು.

- ಈ ಸಮೂಹ ನೇಕಾರಿಕೆ ಮನೆಗಳಿಗೆ ಸ್ಥಳೀಯ ಗ್ರಾಮ್ ಪಂಚಾಯಿತಿ, ಪಟ್ಟಣ ಪಂಚಾಯಿತಿ, ಪುರಸಭೆ, ನಗರಸಭೆ ಹಾಗೂ ಮಹಾನಗರ ಪಾಲಿಕೆಗಳು ಈ ಸಮೂಹ ನೇಕಾರಿಕೆಯ ಮನೆಗಳಿಗೆ ಭೂಮಿಯನ್ನು
- ಈ ಯೋಜನೆಗೆ ಸರಕಾರದೊಂದಿಗೆ ಸಹಕಾರಿ ಸಂಘಗಳು ಕೈ ಜೋಡಿಸಿದಾಗ ಈ ಯೋಜನೆ ಬಡ ಹಾಗೂ ನಿವೇಶನ ಇಲ್ಲದ ನೇಕಾರರಿಗೆ ಉಪಯೋಗವಾಗುತ್ತವೆ.
- ಇಂದು ಸಾಂಪ್ರದಾಯಿಕ ಉತ್ಪನ್ನಗಳನ್ನು ಕೈಮಗ್ಗ ಹಾಗೂ ವಿದ್ಯುತ್ ಚಾಲಿತ ಮಗ್ಗಗಳಿಂದ ತಯಾರಾಗುತ್ತಿದ್ದು. ಇಲ್ಲಿ ಕೈಮಗ್ಗದ ನೇಕಾರಿಕೆಯು ಕ್ಷೀಣಿಸುತ್ತಾ ಸಾಗುತ್ತಿದೆ. ಆದ್ದರಿಂದ ಕೈಮಗ್ಗಗಳಿಗೆ ಹಾಗೂ ವಿದ್ಯುತ್ ಚಾಲಿತ ಮಗ್ಗಗಳಿಗೆ ಕನಿಷ್ಟ ವಿನ್ಯಾಸಗಳನ್ನು ನಿರ್ದಿಷ್ಟಪಡಿಸಬೇಕು. ಅದರಿಂದ ಕೈಮಗ್ಗ ನೇಕಾರರು ನೇಯುವ ಉತ್ಪಾದಕಗಳಿಗೆ ಒಳ್ಳೆಯ ಬೇಡಿಕೆ ಹಾಗೂ ವೇತನ ಬರಬಹುದಾಗಿದೆ.
- "ದೇಶಿಯ ಬಟ್ಟೆ ಭಾಗ್ಯ" ಕೇಂದ್ರ ಹಾಗೂ ರಾಜ್ಯ ಸರಕಾರಗಳು ಈ ಯೋಜನೆ ಕೈಗೊಳ್ಳಬೇಕು. ಇದರ ಮೂಲ ಉದ್ದೇಶ ದೇಶಿಯ ಸಾಂಪ್ರದಾಯಕ ಉಡುಪು ಉತ್ಪನ್ನಗಳನ್ನು ದೇಶವ್ಯಾಪಿ ಹರಡಿಸುವುದು ಹಾಗೂ ಆ ಕುಶಲಕರ್ಮಿಗಳಿಗೆ ಉದ್ಯೋಗವನ್ನು ನಿರಂತರವಾಗಿ ನೀಡಲು ಸಹಾಯವಾಗುತ್ತದೆ. ರಾಜ್ಯ ಅಥವಾ ರಾಷ್ಟ್ರ ಮಟ್ಟದಲ್ಲಿ ಸರಕಾರಿ ಅಧೀನದ ಉದ್ಯೋಗ ನಿರ್ವಹಿಸುವ ಸರಕಾರಿ ನೌಕರಿ ಮಾಡುವ ಜನರಿಗೆ ದೇಶಿಯ ಬಟ್ಟೆಯನ್ನು ಒಂದು ವರ್ಷಕ್ಕೆ ಒಂದು ಭಾರಿ ಅವರ ವೇತನದಲ್ಲಿ ಒಂದು ಜೊತೆ ಬಟ್ಟೆಯನ್ನು ತೆಗೆದುಕೊಳ್ಳುವಂತೆ ಸೂಚಿಸುವ. ಕಾರ್ಯನಡೆದರೆ ಪ್ರಾದೇಶಿಕ ಉತ್ಪನ್ನಗಳಿಗೆ ಬೇಡಿಕೆ ಹಾಗೂ ನೇಕಾರರ ವೇತನವು ಹೆಚ್ಚಾಗುವುದು.
- "ವಿದ್ಯಾರ್ಥಿಗಳ ದೇಶಿಯ ಉಡುಪು" ಎಂಬ ಯೋಜನೆಯನ್ನು ನಮ್ಮ ದೇಶದಲ್ಲಿ ಅಥವಾ ರಾಜ್ಯದಲ್ಲಿ ಸರಕಾರಗಳು ವಿದ್ಯಾರ್ಥಿಗಳಿಗೆ ಪ್ರಾದೇಶಿಕ ಉತ್ಪನ್ನಗಳು ಅರಿವು, ಆ ಬಟ್ಟೆಗಳ ಗುಣಮಟ್ಟ, ಪರಿಸರ ಕಾಳಜಿ ಆರೋಗ್ಯ ಕಾಳಜಿಯನ್ನು ಮೂಡಿಸುವುದರ ಜೊತೆಗೆ ಕೈಮಗ್ಗ ನೇಕಾರರ ಆದಾಯವನ್ನು ಹೆಚ್ಚಿಸುವ ಉದ್ದೇಶ ಹೊಂದಬೇಕಾಗಿದೆ. ಇದರಿಂದ ಸ್ಥಳೀಯ ಉತ್ಪನ್ನಗಳನ್ನು ವರ್ಷಕ್ಕೆ ಒಂದು ಸಲ (ಬಟ್ಟೆಗಳನ್ನು) ಸರಕಾರವು ಖರೀದಿಸಿ ಸ್ಥಳೀಯ ವ್ಯಾಪ್ತಿಯಲ್ಲಿ ವಿದ್ಯಾರ್ಥಿಗಳಿಗೆ ವಿತರಣೆ ಮಾಡಬೇಕು.
- ನೇಕಾರರಿಗೆ ರಾಷ್ಟ್ರೀಕೃತ ಹಾಗೂ ಸಹಕಾರಿ ಬ್ಯಾಂಕುಗಳಲ್ಲಿ ಹಣಕಾಸಿನ ಅನುಕೂಲಕ್ಕಾಗಿ ಸಾಲವನ್ನು ಯಾವ ಭದ್ರತೆ ಇಲ್ಲದೆ, ಕನಿಷ್ಠ ಸಾಲ ನೀಡಬೇಕು. ಪ್ರತಿಯೊಂದು ಸಾಲಕ್ಕೆ ಬ್ಯಾಂಕುಗಳು ಆಧಾರ ಲಿಂಕ್ ಕೊಡಬೇಕು. ಇದರಿಂದ ಇತರ ಸಾಲ ಸೌಲಭ್ಯಗಳ ಹಾಗೂ ಕುಂದು ಕೊರತೆಗಳೇನಾದರು

ಇದ್ದರೆ ಸಹಾಯವಾಗುತ್ತದೆ. ಈ ಸಾಲದ ವ್ಯವಸ್ಥೆ ಈ ವ್ಯಾಪ್ತಿಯಲ್ಲಿ ಏಕೆ ಬೇಕಂದರೆ ಇಲ್ಲಿನ ನೇಕಾರರು ಬಡತನದಲ್ಲಿ ಹಾಗೂ ಆಸ್ತಿಗಳು ಹೊಂದದ ಕುಟುಂಬಗಳಿಗೆ ಸಹಾಯವಾಗುತ್ತದೆ.

- ಸರಕಾರವು ೩% ಬಡ್ಡಿದರದಲ್ಲಿ ನೇಕಾರರಿಗೆ ಸಾಲ ನೀಡುವ ಯೋಜನೆಯು ಸಹಕಾರಿ ಬ್ಯಾಂಕುಗಳಿಗೆ ಆದೇಶ ನೀಡಿದರು. ಸಹಕಾರಿ ಬ್ಯಾಂಕುಗಳು ಹಲವಾರು ಕಾಯ್ದೆಗಳ ಹೆಸರು ಹೇಳಿ ತೊಡಕುಗಳನ್ನು ಸೃಷ್ಟಿಸಿ ನಿಜವಾದ ನೇಕಾರನಿಗೆ ಸೌಲಭ್ಯವು ಸಿಗದಂತಾಗಿದೆ.
- ಸಹಕಾರ ಬ್ಯಾಂಕಗಳಿಂದ ನೀಡುವ ಸಾಲವನ್ನು ಸರಿಯಾದ ನೇಕಾರನಿಗೆ ದೊರೆಯುವಂತೆ ಮಾಡಿ ಅವರ ಸಮಸ್ಯೆಗಳಿಗೆ ಸ್ಪಂದಿಸುವಂತ ಕಾರ್ಯವು ಈ ಸಹಕಾರಿ ಬ್ಯಾಂಕಗಳಿಂದ ಹಾಗೂ ಜವಳಿ ಇಲಾಖೆಯ ಅಧಿಕಾರಿಗಳಿಂದ ಪರೀಕ್ಷಿಸಬೇಕು.
- ಸಹಕಾರಿ ಸಂಘಗಳು ಸರಿಯಾಗಿ ನಿರ್ವಹಿಸಲು ಸಂಘದ ಕಾರ್ಯಕಾರಿಣಿ ಸದಸ್ಯರಿಗೆ ಹಾಗೂ ಸಿಬ್ಬಂದಿ ವರ್ಗದ ಜನರಿಗೆ ತರಬೇತಿ ಕಾರ್ಯಗಾರಗಳನ್ನು ಸರಕಾರದ ಇಲಾಖೆಗಳು ಹಮ್ಮಿಕೊಳ್ಳಬೇಕು.
- ಕೈಮಗ್ಗ ಉದ್ದಿಮೆಯಲ್ಲಿ ತೊಡಗಿಸಿಕೊಂಡಿರುವ ಧಣಿಗಳು(ಮಾಲೀಕರು/ಬಂಡವಾಳಶಾಹಿಗಳು) ನೇಕಾರರ ಬಾಕಿ ಸಮೀಕ್ಷೆ ಪ್ರಕಾರ ಅಂದಾಜು ರೂ. ೨೦೦ ರಿಂದ ೪೦೦ ಕೋಟಿಗಳ ಗಡಿ ದಾಟುವುದಿಲ್ಲ. ರಾಜ್ಯದಲ್ಲಿ ಸರಕಾರ ಅಸಂಘಟಿತ ವಲಯದಲ್ಲಿರುವ ನೇಕಾರರ ಸಾಲಮನ್ನಾ ಮಾಡುವ ಒಂದು ಯೋಜನೆಯನ್ನು ರೂಪಿಸಿ, ನೇಕಾರರ ಸಾಲವನ್ನು ತೀರಿಸಿ ಋಣಮುಕ್ತರನ್ನಾಗಿಸುವುದು. ಸಾಹುಕಾರರ ಸಾಲದಿಂದ ಮುಕ್ತರಾಗುವಂತೆ ಮಾಡುವುದುರಿಂದ ಅಸಂಘಿಟಿತ ವಲಯದ ನೇಕಾರರು ಸಂಘಟನೆಗೊಳಪಡುತ್ತಾರೆ.
- ನೇಕಾರರಿಗೆ ಕಚ್ಚಾ ಮಾಲು ನೇರವಾಗಿ ದೊರೆಯುವಂತೆ ಮಾರುಕಟ್ಟೆ ನಿರ್ಮಿಸಬೇಕು ಅದನ್ನು ನೇಕಾರರ ಊರುಗಳ ಹತ್ತಿರದ ನಗರಗಳಲ್ಲಿ ಸ್ಥಾಪಿಸಬೇಕು. ಕಚ್ಚಾ ಮಾಲಿನ ದರವು ಕಡಿಮೆಯಾಗಬೇಕು ಅದು ಒಂದು ವರ್ಷಕ್ಕೆ ಒಂದೇ ಬಾರಿ ಪರಿಷ್ಕರಿಸುವಂತೆ ಮಾಡಬೇಕು. ಇದರಿಂದ ನೇಕಾರರು ಅತಂತ್ರವಾಗುವುದನ್ನು ತಡೆಯುತ್ತದೆ.
- ನೂಲಿನ ಸಂಗ್ರಹ ಘಟಕಗಳು ಸರಕಾರಿ ಮಟ್ಟದಲ್ಲಿ ಎಪಿಎಂಸಿ ರೀತಿಯಲ್ಲಿ ಮಾರಾಟದ ವ್ಯವಸ್ಥೆ ನಡೆಯಬೇಕು. ಅವು ಕನಿಷ್ಠ ೧೦ ರಿಂದ ೧೫ ಸಾವಿರ ಜನ ಇರುವ ನೇಕಾರರ ಸ್ಥಳಗಳಲ್ಲಿ ಸ್ಥಾಪಿಸಬೇಕು.
- ಬಂಡವಾಳ ರಹಿತ ನೇಕಾರಿಕೆಯ ಜನರು ಇರುವುದರಿಂದ ಈ ನೇಕಾರರಿಗೆ ದಿನದ ಆದಾಯದ ಜೊತೆಯಲ್ಲಿ ಕನಿಷ್ಠ ವೇತನವನ್ನು ನೀಡುವ ಯೋಜನಯನ್ನು ಸಹಕಾರಿ ಸಂಘಗಳ ಮೂಲಕ ಸರಕಾರ ರೂಪಿಸಿ ನೇಕಾರರಿಗೆ ಪ್ರೋತ್ಸಾಹ ನೀಡಬೇಕು.

- ನೇಕಾರರ ಸಹಕಾರಿ ಸಂಘಗಳ ಕಾರ್ಯ ವೈಖರಿಗಳ ಬಗ್ಗೆ, ಸಂಘಗಳ ಸೂಚನಾ ಫಲಕ್ಕೆ ಅಂಟಿಸುವುದು. ಹಾಗೂ ತಿಂಗಳಿಗೊಮ್ಮೆ ನಡೆಯುವ ಮಾಸಿಕ ಸಭೆಗೆ ನೇಕಾರರ ಹಾಜರಾತಿ ಹೆಚ್ಚಳ ಮಾಡಬೇಕು. ಸರಕಾರಿ ಇಲಾಖೆಯ ಅಧಿಕಾರಿಗಳು ಕನಿಷ್ಠ ಒಂದು ವರ್ಷದಲ್ಲಿ ಒಂದು ಸಂಘಕ್ಕೆ ೫ ರಿಂದ ೬ ಸಲ ಭೇಟಿನೀಡಿ ಹಾಗೂ ಸಭೆಯಲ್ಲಿ ಯೋಜನೆಗಳ ಮಾಹಿತಿಯನ್ನು ನೀಡುವ ಹಾಗೂ ಪಾರದರ್ಶಕದ ಬಗ್ಗೆ ನಿಘಾವಹಿಸುವ ಕಾರ್ಯ ಮಾಡಬೇಕು.
- ನೇಕಾರರ ದಕ್ಷತೆಯ ಮೇಲೆ ಅವರ ವೇತನವನ್ನು ಹೆಚ್ಚಿಸುವುದು ಮತ್ತು ನಿಗದಿಪಡಿಸಬೇಕು. ಪ್ರತಿ ೬ ತಿಂಗಳಿಗೊಮ್ಮೆ ಪರಿಸ್ಕೃತ ದರವನ್ನು ಅವರ ವೇತನದಲ್ಲಿ ಕನಿಷ್ಟ ಶೇ ೩ ರಿಂದ ೬ ರಷ್ಟು ಹೆಚ್ಚಳ ಮಾಡಬೇಕು. ಏಕಂದರೆ ದಿನನಿತ್ಯದ ಆಹಾರ ಪದಾರ್ಥಗಳು ಹಾಗೂ ದಿನನಿತ್ಯ ಬಳಸುವ ವಸ್ತುಗಳ ಬೆಲೆ ದಿನದಿಂದ ದಿನಕ್ಕೆ ಗಗನಕ್ಕೆರುತ್ತಿವೆ. ಆದ್ದರಿಂದ ನೇಕಾರರು ಇಂದು ಸಾಲದ ಸುಳಿಯಲ್ಲಿ ಸಿಲುಕ್ಕಿದ್ದಾರೆ.
- ಇಂದು ಅಂತರಾಷ್ಟ್ರೀಯ ಮಟ್ಟದಲ್ಲಿ ಭಾರತೀಯ ದೇಶಿಯ ಉತ್ಪನ್ನಗಳಿಗೆ ಬಹುಬೇಡಿಕೆಗಳು ಕಂಡುಬರುತ್ತಿವೆ. ಅದರಲ್ಲಿ ಕೈಮಗ್ಗಗಳ ಉತ್ಪನ್ನಗಳಿಗೆ ಹಾಗೂ ಪಾರಂಪರಿಕ ಉತ್ಪಾದನಾ ವಸ್ತುಗಳಿಗೆ ಬೇಡಿಕೆ ಇದೆ. ಆದ್ದರಿಂದ ಆ ಬೇಡಿಕೆಯನ್ನು ಇನ್ನೂ ಹೆಚ್ಚಿಸಲು ಹಾಗೂ ಆ ಬೇಡಿಕೆಯನ್ನು ಪೂರೈಹಿಸಲು ಅಂತರ್ಜಾಲದ ಮುಖೇನ ಮಾರಾಟ ಮತ್ತು ಪ್ರಚಾರದ ವ್ಯವಸ್ಥೆಯನ್ನು ಖಾಸಗಿ ಹಾಗೂ ಸರಕಾರದ ಅಧೀನದಲ್ಲಿ ಇಲಾಖೆಗಳ ಸಹಯೋಗದೊಂದಿಗೆ ಪ್ರಚಾರ ಹಾಗೂ ಮಾರುಕಟ್ಟೆಗೆ ಕಾಯಕಲ್ಪಿಸಬೇಕು.
- ದೇಶಿಯ ನೆಲೆಯಲ್ಲಿ ಪ್ರಚಾರದ ಜೊತೆಯಲ್ಲಿ ಅಂತರ್ಜಾಲದ ಮಾರುಕಟ್ಟೆಯ (ಆನಲೈನ್ ಮಾರ್ಕೇಟಿಂಗ್) ಕಂಪನಿಗಳು ನೇರವಾಗಿ ನೇಕಾರರ ಸಹಕಾರಿ ಸಂಘಗಳ ಜೊತೆಯಲ್ಲಿ ಮಾರಾಟದ ವ್ಯವಸ್ಥೆಯನ್ನು ಕಟ್ಟಿಕೊಡಬೇಕಾಗಿದೆ.
- ಸಾಂಪ್ರದಾಯಕ ಇಳಕಲ್ ಸೀರೆ ಹಾಗೂ ಗುಳೇದಗುಡ್ಡ ಖಣಗಳ ಪ್ರಚಾರದೊಂದಿಗೆ, ಗ್ರಾಹಕರ ಬೇಡಿಕೆಗಳಿಗನುಗುಣವಾಗಿ ಹೊಸ-ಹೊಸ ಬಟ್ಟೆಯ ವಿನ್ಯಾಸಗಳನ್ನು ಹಾಗೂ ಯುವಕರ ಆಕರ್ಷಕ ಬಟ್ಟೆಗಳನ್ನು ತಯಾರಿಸುವಂತ ನೇಕಾರಿಕೆಯ ತರಬೇತಿ ಹಾಗೂ ಕಚ್ಚಾವಸ್ತು ಮತ್ತು ಸೂಕ್ತ ವೇತನವನ್ನು ಒದಗಿಸುವಂತ ಕಾರ್ಯ ಸಹಕಾರಿ ಸಂಘದ ಸದಸ್ಯರುಗಳು ಮಾಡಬೇಕಾಗಿದೆ. ಅದರೊಂದಿಗೆ ಸೂಕ್ತ ವೇತನವನ್ನು ನೀಡಿದರೆ ಹೊಸ ಉತ್ಪಾದನೆಗಳಿಗೆ ನೇಕಾರರು ಮುಂದೆ ಬರುವರು. ಇದಕ್ಕೆ ಸಹಕಾರಿ ಸಂಘದ ಸದಸ್ಯರು ಪ್ರೋತ್ಸಾಹಿಸಬೇಕಾಗಿದೆ.

- ಹೆಚ್ಚಿನ ಪ್ರಮಾಣದಲ್ಲಿ ರೈತರಿಗೆ ಹತ್ತಿ ಹಾಗೂ ರೇಷ್ಮೆ ಬೆಳೆಯಲು ಪ್ರೋತ್ಸಾಹಿಸಬೇಕು, ಬೆಳೆಯಬೇಕು. ಇದರಿಂದ ಹತ್ತಿ ಹಾಗೂ ರೇಷ್ಮೆ ಕಚ್ಚಾ ಮಾಲಿನ ನೂಲು ಕಡಿಮೆ ದರದಲ್ಲಿ ನೇಕಾರರಿಗೆ ಸಿಗುತ್ತದೆ ಆಗ ನೇಕಾರರ ಕೂಲಿ ಹೆಚ್ಚಳವಾಗುತ್ತದೆ.

## ಅನುಬಂಧ

೧. ಗ್ರಂಥಋಣ

೨. ಕೋಷ್ಟಕಗಳು

೩. ತಿಳುವಳಿಕೆ ನೀಡಿದವರ ವಿವರ

೪. ಛಾಯಾಚಿತ್ರಗಳು

## ೧. ಗ್ರಂಥಋಣ:


೧. ಇಳಕಲ್ಲ ಕೈಮಗ್ಗ ಉದ್ದಿಮೆ, ದಕ್ಷಿಣ ಪಥೇಶ್ವರ, ಚಾಲುಕ್ಯ ಉತ್ಸವ ಸಮಿತಿ, ಜಿಲ್ಲಾ ಕಾರ್ಯಾಲಯ, ಬಾಗಲಕೋಟ. ೨೦೦೨

೨. ಇರ್ಫಾನ್ ಹಬೀಬ್, (ಅ) (ಕನ್ನಡ) ಕಕ್ಕಿಲಾಯ ಬಿ.ವಿ. 'ಪ್ರಾಚೀನ ಭಾರತದಲ್ಲಿ ಜಾತಿಗಳ ಉಗಮ' ನವಕರ್ನಾಟಕ ಪ್ರಕಾಶನ, ಬೆಂಗಳೂರ. ೨೦೧೫

೩. ಈರಣ್ಣ ಹಟ್ಟಿ. 'ಕೈಮಗ್ಗ ಉದ್ದಿಮೆ ಒಂದು ಸಮಸ್ಯೆಯೇ?' ಕರ್ನಾಟಕ ವಿ.ವಿ. ಧಾರವಾಡ. ೧೯೮೨

೪. ಈರಣ್ಣ ಹಟ್ಟಿ 'ನೇಕಾರಿಕೆ ಮತ್ತು ಸರಕಾರ' ಉಪನ್ಯಾಸ ಗ್ರಂಥಮಾಲೆ, ಕರ್ನಾಟಕ ವಿ.ವಿ. ಧಾರವಾಡ. ೧೯೮೨.

೫. ಎಂಡಿಗೇರಿ ಎಸ್.ಎಸ್. 'ಮ್ಯಾನೇಜಮೆಂಟ್ ಆಫ್ ಕಾಸ್ಟ್ ಇನ್ ಹ್ಯಾಂಡಲೂಮ್ ಇಂಡಸ್ಟ್ರೀ ವಿಥ್, ಸ್ಪೇಶಲ್ ರೆಫರೆನ್ಸ್‌ಟು ಹ್ಯಾಂಡಲೂಮ್ ಯುನಿಟ್ಸ್ ಇನ್ ಬಿಜಾಪೂರ ಡಿಸ್ಟ್ರಿಕ್ಟ್ ಆಫ್ ಕರ್ನಾಟಕ ಸ್ಟೇಟ್', ಪಿಎಚ್.ಡಿ., ಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ೧೯೯೬.

೬. ಒಡೆಯರ್ ಡಿ. ಹೆಗಡೆ, 'ಭಾರತದ ಆರ್ಥಿಕ ಅಭಿವೃದ್ಧಿ', ಅರ್ಜುನ ಪಬ್ಲಿಕೇಶನ್ ಹೌಸ್, ಮೈಸೂರು, ೨೦೦೬

೭. ಕೈಮಗ್ಗ ಅಭಿವೃದ್ಧಿ ನಿಗಮ ಯೋಜನಾ ಪುಸ್ತಕ. ಬಾಗಲಕೋಟ ಜಿಲ್ಲೆ, ೨೦೦೬-೦೭

೮. ಗಂಗಾಧರ ದೈವಜ್ಞ, 'ಬುಡಕಟ್ಟು ಸಮಾಜ ಹುಟ್ಟು-ಸಾವಿನ ನಡುವೆ', ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೧೫.

೯. ಚಂದ್ರ ಪೂಜಾರಿ ಎಂ. 'ಏನು? ಏಕೆ? ಹೇಗೆ?', ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೧೧

೧೦. ಚಂದ್ರಶೇಖರಪ್ಪ. ಟಿ.ಚೆ. 'ಮಧ್ಯಕಾಲಿನ ಭಾರತ ಇತಿಹಾಸ', ಪೂರ್ಣ ಪ್ರಕಾಶನ, ಶಿವಮೊಗ್ಗ, ೨೦೦೨

೧೧. ಜ್ಯೋತಿ. ಡಿ.ಟಿ. 'ಮಧ್ಯಯುಗಿನ ಭಾರತದ ಇತಿಹಾಸ', ವಿದ್ಯಾನಿಧಿ ಪ್ರಕಾಶನ್, ಗದಗ, ೨೦೦೪-೦೫

೧೨. ನೀಲತ್ತಹಳ್ಳಿ ಕಸ್ತೂರಿ. 'ಗಾಂಧೀ ತತ್ವ ಚಿಂತನೆ', ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೧೪

೧೩. ದೇವೆಂದ್ರಕುಮಾರ ಹಕಾರಿ, ಸಂಧ್ಯಾ ರೆಡ್ಡಿ(ಅ) 'ಗ್ರಾಮೀಣ ಉಡುಗೆ ತೊಡುಗೆಗಳು,' ಕರ್ನಾಟಕ ಪುಸ್ತಕ ಪ್ರಾಧಿಕಾರ, ಬೆಂಗಳೂರ. ೨೦೦೦.

೧೪. ಪರಿಣಿತ ಬಿ. ಆರ್. 'ಆಧುನಿಕ ಭಾರತದ ಇತಿಹಾಸ', ಯುನೈಟೆಡ ಪಬ್ಲಿಕೇಶನ್ ಅಲೈಮನ್ ಕಂಪೌಂಡ, ಜೆಪ್ಪು, ಮಂಗಳೂರು-೨೦೦೪

೧೫. ಭಗವತ್ ಶರಣ ಉಪಾಧ್ಯಾಯ (ಅ)(ಕನ್ನಡ) ಪ್ರಧಾನ ಗುರುದತ್ತ. 'ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ'. ನವ ಕರ್ನಾಟಕ ಪ್ರಕಾಶನ, ಬೆಂಗಳೂರು. ೨೦೧೪

೧೬. ಭಗವತ್ ಶರಣ ಉಪಾಧ್ಯಾಯ (ಅ)(ಕನ್ನಡ) ಗೋಪಾಲರಾವ್ ಎಚ್.ಎಸ್. 'ಭಾರತೀಯ ಬಹುಮುಖೀ ಸಂಸ್ಕೃತಿ.' ನವ ಕರ್ನಾಟಕ ಪ್ರಕಾಶನ, ಬೆಂಗಳೂರು. ೨೦೧೪

೧೭ ಭೈರಪ್ಪ ಕೆ. 'ಕೈಗಾರಿಕಾ ಸಮಾಜಶಾಸ್ತ್ರ', ಚೈತನ ಬುಕ್ ಹೌಸ್, ಮೈಸೂರ. ೨೦೦೭

೧೮. ಭೈರಪ್ಪ ಕೆ. 'ಗ್ರಾಮೀಣ ಸಮಾಜ ಹಾಗೂ ಅಭಿವೃದ್ಧಿ', ಚೈತನ ಬುಕ್ ಹೌಸ್, ಮೈಸೂರು. ೨೦೦೭.

೧೯. ಭಾರತದ ಗ್ಯಾಜೆಟಿಯರ್, ಕರ್ನಾಟಕ ರಾಜ್ಯ, ಬಿಜಾಪುರ ಜಿಲ್ಲೆ (ಬಾಗಲಕೋಟ ಜಿಲ್ಲೆಯೂ ಸೇರಿದಂತೆ) ಪರಿಷ್ಕೃತ ಆವೃತ್ತಿ. ಕರ್ನಾಟಕ ಗ್ಯಾಜೆಟಿಯರ್ ಇಲಾಖೆ, ಕರ್ನಾಟಕ ಸರಕಾರ ಬೆಂಗಳೂರ, ೧೯೯೯.

೨೦. ಮಹೇಶ ತಿಪ್ಪಶೆಟ್ಟಿ. 'ಇಲ್ಲಕಲ್ ಸೀರೆ', ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೦.
೨೧. ಮಲ್ಲಿಕಾರ್ಜುನ ಬನ್ನಿ. 'ಗುಳೇದಗುಡ್ಡ ಖಣಗಳು', ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.
೨೨ ಮೇತ್ರಿ ಕೆ.ಎಂ. 'ಬುಡಕಟ್ಟು ಕುಲಕಸುಬುಗಳು' ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೨
೨೩ ಮುನಿವೆಂಕಟಪ್ಪ ವಿ. 'ಸಾಮಾಜಿಕ ಬದಲಾವಣೆ' ವಿಚಾರವಾದಿ ಪ್ರಕಾಶನ, ಮೈಸೂರು.೨೦೧೨
೨೪ ರಮೇಶ ಎಂ ಸೋನುಕಾಂಬಳೆ. 'ಸಮಾಜಕಾರ್ಯ ವೃತ್ತಿ'. ಶಾರದಾ ಪಬ್ಲಿಕೇಷನ್ಸ್, ವಿಜಾಪೂರ. ೨೦೦೮
೨೫ ವಸಂತಕುಮಾರ್ ಬಿ.ವಿ. 'ಸಹಕಾರ ಚಳುವಳಿ', ನೇಕಾರ ಪ್ರಕಾಶನ್, ಸೊರಬ. ೨೦೦೫
೨೬ ಶಿವುಕುಮಾರ ಶಿ. ಮಾದಗುಂಡಿ, 'ನೇಕಾರಿಕೆ ಉದ್ಯೋಗದಲ್ಲಿ ಮಹಿಳೆಯರ ಪಾತ್ರ: ಒಂದು ಅದ್ಯಯನ' ಎಂ.ಫಿಲ್., ಪ್ರಬಂಧ. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೨೦೦೬
೨೬ ಸದಾಸಿವ ಕೆ. 'ಸಮಗ್ರ ಭಾರತ ಇತಿಹಾಸ', ಪ್ರಿಯದರ್ಶಿನಿ, ಮೈಸೂರು ದಕ್ಷಿಣ.೨೦೦೯
೨೭ ಸಾಂಬಾಮೂರ್ತಿ. 'ನೇಕಾರ ವೃತ್ತಿ ಪದಕೋಶ', ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೦.
೨೮ ಸಿದ್ದಯ್ಯ ಪುರಾಣಿಕ, ಶರಣ ಚರಿತಾಮೃತ, ಎರಡನೇಯ ಮುದ್ರಣ, ಮೈಸೂರ ಪ್ರಿಂಟಿಂಗ್ ಮತ್ತು ಪಬ್ಲಿಕೇಶನ್, ಮೈಸೂರು, ೧೯೭೭. ಪು.೩೫
೨೯ ಸಂಕೀರ್ಣ ವಚನ ಸಂಪುಟ-೨, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ಸರಕಾರ, ಬೆಂಗಳೂರು, ೧೯೯೩. ಪು.೨೪೬
೩೦ ನ್ಯೂ ಎನ್ ಸೈಕ್ಲೋಪೀಡಿಯಾ ಬ್ರಿಟಾನಿಕಾ. ಸಂಪುಟ-೧೮. ಪು.೧೭೦

# ೧. ಕೋಷ್ಟಕಗಳು

## ಭಾರತದ ನೇಕಾರರ ಸ್ಥಿತಿಯ ಕುರಿತು ಕೋಷ್ಟಕಗಳು(ಸಂಗ್ರಹ)ಮಾಹಿತಿ

೨೦೦೯-೧೦ ನೇಕಾರ ಗಣತಿಯಲ್ಲಿ ಕೈಮಗ್ಗ ಕೈಗಾರಿಕೆಗಳಲ್ಲಿರುವ ಕೆಲಸಗಾರರ ಸಾಮಾಜಿಕ ಹಾಗೂ ಆರ್ಥಿಕ ವಲಯಗಳಲ್ಲದೆ, ಕೆಲಸಗಾರರ ಲಿಂಗ ವಯಸ್ಸು, ಸಾಮಾಜಿಕ ಸ್ಥಿತಿಗತಿ, ವಿದ್ಯಾರ್ಹತೆಗಳನ್ನು ಪರಿಗಣನೆಗೆ ತೆಗೆದು ಕೊಳ್ಳಲಾಗಿದೆ.

**ಭಾರತದಲ್ಲಿಯ ನೇಕಾರರ ಕುಟುಂಬಗಳ ಪಡಿತರ ಚೀಟಿಯ ನಮೂನೆ**

| ಅ.ನಂ | ಪಡಿತರ ಚೀಟಿಯ ನಮೂನೆ | ಕುಟುಂಬಗಳ ಸಂಖ್ಯೆ | | | ಶೇಕಡವಾರು ಹಂಚಿಕೆ | | |
|---|---|---|---|---|---|---|---|
| | | ಗ್ರಾಮೀಣ | ನಗರ | ಒಟ್ಟು | ಗ್ರಾಮೀಣ | ನಗರ | ಒಟ್ಟು |
| ೧ | ಅಂತ್ಯೋದಯ ಅನ್ನ ಯೋಜನೆ ಚೀಟಿ | ೨೫೩,೧೧೦ | ೧೭೮೦೫ | ೨೭೦,೯೧೫ | ೧೦.೫ | ೪.೯ | ೯.೭ |
| ೨ | ಬಡತನ ರೇಖೆಗಿಂತ ಕೆಳಗಿನ ಚೀಟಿ | ೮೪೩,೦೪೦ | ೧೮೩೬೫೬ | ೧,೦೨೬,೬೯೬ | ೩೪.೮ | ೫೦.೭ | ೩೬.೯ |
| ೩ | ಬಡತನ ರೇಖೆಗಿಂತ ಮೇಲಿನ ಚೀಟಿ | ೮೪೪,೬೫೬ | ೧೧೪೬೩೧ | ೯೫೯,೨೮೭ | ೩೪.೯ | ೩೧.೭ | ೩೪.೫ |
| ೪ | ಪಡಿತರ ಚೀಟಿಯ ಹೊಂದಿಲ್ಲದವರು | ೪೮೦,೩೧೧ | ೪೬೦೬೨ | ೫೨೬,೩೭೩ | ೧೯.೮ | ೧೨.೭ | ೧೮.೯ |
| | ಒಟ್ಟು | ೨,೪೨೧,೧೧೭ | ೩೬೨೧೫೪ | ೨,೭೮೩,೨೭೧ | ೧೦೦ | ೧೦೦ | ೧೦೦ |

ಮಾಹಿತಿ ಸಂಗ್ರಹ: ಮೇ ೨೦೧೧ ರ ಯೋಜನಾ ಮಾಸ ಪತ್ರಿಕೆ (ಭಾರತ ಸರ್ಕಾರದ ಜವಳಿ ಖಾತೆಯ ಆರ್ಥಿಕ ಸಲಹೆಗಾರರು). ಪು.೨೦

**ಭಾರತದಲ್ಲಿ ನೇಕಾರಿಕೆಯಲ್ಲಿಯ ಸಾಮಾಜಿಕ ಗುಮಪುಗಳ ಪ್ರಮಾಣ ಹಾಗೂ ಗ್ರಾಮೀಣ ಹಾಗೂ ನಗರಗಳನ್ನು ವಿಂಘಡಿಸಲಾಗಿದೆ.**

| ಅ.ನಂ | ಸಾಮಾಜಿಕ ಗುಂಪುಗಳು | ನೇಕಾರಿಕೆಯಲ್ಲಿಯ ಕೆಲಸಗಾರರ ಸಂಖ್ಯೆ | | | ಶೇಕಡವಾರು ಹಂಚಿಕೆ | | |
|---|---|---|---|---|---|---|---|
| | | ಗ್ರಾಮೀಣ | ನಗರ | ಒಟ್ಟು | ಗ್ರಾಮೀಣ | ನಗರ | ಒಟ್ಟು |
| ೧ | ಪರಿಶಿಷ್ಟ ಜಾತಿ | ೩೩೧,೯೯೪ | ೫೮,೪೩೯ | ೩೯೦,೪೩೩ | ೧೦.೩ | ೯.೫ | ೧೦.೧ |
| ೨ | ಪರಿಶಿಷ್ಟ ಪಂಗಡ | ೬೭೮,೧೬೫ | ೧೮,೭೬೭ | ೬೯೬,೯೩೨ | ೨೧ | ೩.೧ | ೧೮.೧ |
| ೩ | ಇತರೆ ಹಿಂದುಳಿದ ವರ್ಗ | ೧,೩೫೯,೩೫೫ | ೩೭೮,೧೮೮ | ೧,೭೩೭,೫೪೩ | ೪೨.೧ | ೬೧.೫ | ೪೫.೨ |
| ೪ | ಇತರೆ | ೮೬೨,೭೧೧ | ೧೫೯,೨೧೬ | ೧,೦೨೧,೯೨೭ | ೨೬.೭ | ೨೫.೯ | ೨೬.೬ |
| | ಒಟ್ಟು | ೩,೨೩೨,೨೨೫ | ೬೧೪೬೧೦ | ೩,೮೪೬,೮೩೫ | ೧೦೦.೧ | ೧೦೦ | ೧೦೦ |

ಮಾಹಿತಿ ಸಂಗ್ರಹ: ಮೇ ೨೦೧೧ ರ ಯೋಜನಾ ಮಾಸ ಪತ್ರಿಕೆ (ಭಾರತ ಸರ್ಕಾರದ ಜವಳಿ ಖಾತೆಯ ಆರ್ಥಿಕ ಸಲಹೆಗಾರರು). ಪು.೨೦

**ಭಾರತದಲ್ಲಿ ನೇಕಾರರ ವಾಸಸ್ಥಳ ಆಧಾರದ ಮೇಲೆ ವಿಂಗಡಣೆ**

| ಅ.ನಂ | ವಾಸಸ್ಥಳದ ನಮೂನೆ | ನೇಕಾರಿಕೆಯಲ್ಲಿಯ ಕೆಲಸಗಾರರ ಸಂಖ್ಯೆ | | | ಶೇಕಡವಾರು ಹಂಚಿಕೆ | | |
|---|---|---|---|---|---|---|---|
| | | ಗ್ರಾಮೀಣ | ನಗರ | ಒಟ್ಟು | ಗ್ರಾಮೀಣ | ನಗರ | ಒಟ್ಟು |
| ೧ | ಕಚ್ಚಾ ಮನೆಗಳು | ೧,೪೪೧,೪೭೩ | ೭೭,೧೫೯ | ೧,೫೧೮,೬೩೨ | ೫೯.೫ | ೨೧.೩ | ೫೪.೬ |
| ೨ | ಅರೆ ಸದೃಢ ಮನೆಗಳು | ೬೭೮,೦೨೪ | ೧೭೭,೫೫೪ | ೮೫೫,೫೭೮ | ೨೮ | ೪೯ | ೩೦.೭ |
| ೩ | ಸದೃಡ ಮನೆಗಳು | ೩೦೧,೬೨೦ | ೧೦೭,೪೪೧ | ೪೦೯,೦೬೧ | ೧೨.೫ | ೨೯.೭ | ೧೪.೭ |
| | ಒಟ್ಟು | ೨,೪೨೧,೧೧೭ | ೩೬೨೧೫೪ | ೨,೭೮೩,೨೭೧ | ೧೦೦ | ೧೦೦ | ೧೦೦ |

ಮಾಹಿತಿ ಸಂಗ್ರಹ: ಮೇ ೨೦೧೧ ರ ಯೋಜನಾ ಮಾಸ ಪತ್ರಿಕೆ (ಭಾರತ ಸರ್ಕಾರದ ಜವಳಿ ಖಾತೆಯ ಆರ್ಥಿಕ ಸಲಹೆಗಾರರು). ಪು.೨೦

| ೨. ನೇಕಾರರ ಅಧ್ಯಯನಕ್ಕೆ ಒಳಪಡಿಸಿದ ಬಾಗಲಕೋಟ ಜಿಲ್ಲೆ ಬಾದಾಮಿ ತಾಲೂಕಿನ ಗುಳೇದಗುಡ್ಡ ಹಾಗೂ ಹುನಗುಂದ ತಾಲೂಕಿನ ಕಮತಗಿ, ಅಮೀನಗಡ ಹಾಗೂ ಸೂಳೇಭಾವಿಯನ್ನು ಸೂಚಿಸಿದೆ | |
|---|---|
| ಕರ್ನಾಟಕದಲ್ಲಿಯ ಬಾಗಲಕೋಟ ಜಿಲ್ಲೆ | ಬಾಗಲಕೋಟ ಜಿಲ್ಲೆಯ ಹುನಗುಂದ ಹಾಗೂ ಬಾದಾಮಿ |
|  |   |

## ೩. ಸಮೀಕ್ಷೆಗೆ ಕೈಗೊಂಡಿರುವ ಮಾಹಿತಿದಾರರ ಹಾಗೂ ಸಂದರ್ಶಕರ ಹೆಸರು ಹಾಗೂ ವಿಳಾಸವನ್ನು ಸೂಚಿಸುವ ಪಟ್ಟಿ

| ಅ.ನಂ | ಮಾಹಿತಿದಾರರ ಹೆಸರು | ಸಮುದಾಯ | ಃ) ಮಾತೃ ಭಾಷೆ | ನೇಕಾರರ ವಿಳಾಸ | | | ಎಲ್) ತಾಲೂಕ |
|---|---|---|---|---|---|---|---|
| | | | | ಗ್ರಾಮ/ ಪಟ್ಟಣ/ನಗರ | ಜೆ) ವಾರ್ಡ | ಕೆ) ಪಂಚಾಯಿತಿ | |
| ೧ | ೩ | ೪ | | ೧೨ | ೧೩ | ೧೪ | ೧೫ |
| ೧ | ಯಮನಪ್ಪ ತಂಬೂರಿ | ಹಿಂದೂ ದೇವಾಂಗ | ಕನ್ನಡ | ಕಮತಗಿ | ೫ | ಪಟ್ಟಣ ಪಂಚಾಯಿತಿ | ಹುನಗುಂದ |
| ೨ | ಮಲ್ಲಿಕಾರ್ಜುನ ಸಂ. ಹೊಟಿ | ಹಿಂದೂ ದೇವಾಂಗ | ಕನ್ನಡ | ಕಮತಗಿ | ೫ | ಪಟ್ಟಣ ಪಂಚಾಯಿತಿ | ಹುನಗುಂದ |
| ೩ | ಗುರಪ್ಪ ಶಿ. ಗಣಿ | ಹಿಂದೂ ದೇವಾಂಗ | ಕನ್ನಡ | ಕಮತಗಿ | ೫ | ಪಟ್ಟಣ ಪಂಚಾಯಿತಿ | ಹುನಗುಂದ |
| ೪ | ನಾಗಪ್ಪ ಲ. ಗುಡ್ಡದ | ಹಿಂದೂ ದೇವಾಂಗ | ಕನ್ನಡ | ಕಮತಗಿ | ೫ | ಪಟ್ಟಣ ಪಂಚಾಯಿತಿ | ಹುನಗುಂದ |
| ೫ | ಮರಸಂಗಪ್ಪ ಈ. ದಂಡಾವತಿ | ಹಿಂದೂ ದೇವಾಂಗ | ಕನ್ನಡ | ಕಮತಗಿ | ೪ | ಪಟ್ಟಣ ಪಂಚಾಯಿತಿ | ಹುನಗುಂದ |
| ೬ | ಈರಪ್ಪ ಪಿ. ಯರಗಲ್ | ಹಿಂದೂ ದೇವಾಂಗ | ಕನ್ನಡ | ಕಮತಗಿ | ೪ | ಪಟ್ಟಣ ಪಂಚಾಯಿತಿ | ಹುನಗುಂದ |
| ೭ | ಕಿಡಿಯಪ್ಪ ನಾ. ಹುಲಮನಿಗೌಡ್ರ | ಹಿಂದೂ ದೇವಾಂಗ | ಕನ್ನಡ | ಕಮತಗಿ | ೪ | ಪಟ್ಟಣ ಪಂಚಾಯಿತಿ | ಹುನಗುಂದ |
| ೮ | ಸುಭಾಸ ನಾ. ಆರಿ | ಹಿಂದೂ ದೇವಾಂಗ | ಕನ್ನಡ | ಕಮತಗಿ | ೪ | ಪಟ್ಟಣ ಪಂಚಾಯಿತಿ | ಹುನಗುಂದ |
| ೯ | ಯಂಕಪ್ಪ ರಾ. ಯಕ್ಕುಂಡಿ | ಹಿಂದೂ ದೇವಾಂಗ | ಕನ್ನಡ | ಕಮತಗಿ | ೪ | ಪಟ್ಟಣ ಪಂಚಾಯಿತಿ | ಹುನಗುಂದ |
| ೧೦ | ಹುಚ್ಚಪ್ಪ ಕ. ರೊಗಿ | ಹಿಂದೂ ದೇವಾಂಗ | ಕನ್ನಡ | ಕಮತಗಿ | ೩ | ಪಟ್ಟಣ ಪಂಚಾಯಿತಿ | ಹುನಗುಂದ |
| ೧೧ | ಆನಂದ ಹು. ಕೊಣ್ಣೂರ | ಹಿಂದು ಹಟಗಾರ | ಕನ್ನಡ | ಕಮತಗಿ | ೪ | ಪಟ್ಟಣ ಪಂಚಾಯಿತಿ | ಹುನಗುಂದ |
| ೧೨ | ವಿರುಪಾಕ್ಷಪ್ಪ ಬಿ. ಐಹೊಳ್ಳಿ | ಹಿಂದು ಹಟಗಾರ | ಕನ್ನಡ | ಕಮತಗಿ | ೪ | ಪಟ್ಟಣ ಪಂಚಾಯಿತಿ | ಹುನಗುಂದ |
| ೧೩ | ಈರಪ್ಪ ಬ. ಐಹೊಳಿ | ಹಿಂದು ಹಟಗಾರ | ಕನ್ನಡ | ಕಮತಗಿ | ೩ | ಪಟ್ಟಣ ಪಂಚಾಯಿತಿ | ಹುನಗುಂದ |
| ೧೪ | ಶಂಕ್ರಪ್ಪ ಶಿ ಹಳ್ಳದ | ಹಿಂದು ಹಟಗಾರ | ಕನ್ನಡ | ಕಮತಗಿ | ೪ | ಪಟ್ಟಣ ಪಂಚಾಯಿತಿ | ಹುನಗುಂದ |
| ೧೫ | ನಿಂಗಪ್ಪ ದಿಂ. ಗೋಕಾವಿ | ಹಿಂದು ಹಟಗಾರ | ಕನ್ನಡ | ಕಮತಗಿ | ೪ | ಪಟ್ಟಣ ಪಂಚಾಯಿತಿ | ಹುನಗುಂದ |
| ೧೬ | ಗುರುನಾಥ ಶಿ. ಭಾಪ್ರಿ | ಹಿಂದು ಹಟಗಾರ | ಕನ್ನಡ | ಕಮತಗಿ | ೪ | ಪಟ್ಟಣ ಪಂಚಾಯಿತಿ | ಹುನಗುಂದ |
| ೧೭ | ಮಹಾಂತೇಶ ಶಿ. ಭಾಪ್ರಿ | ಹಿಂದು ಹಟಗಾರ | ಕನ್ನಡ | ಕಮತಗಿ | ೪ | ಪಟ್ಟಣ ಪಂಚಾಯಿತಿ | ಹುನಗುಂದ |
| ೧೮ | ರುದ್ರಪ್ಪ ಮ. ಬ್ಯಾಹಟ್ಟಿ | ಹಿಂದು ಹಟಗಾರ | ಕನ್ನಡ | ಕಮತಗಿ | ೬ | ಪಟ್ಟಣ ಪಂಚಾಯಿತಿ | ಹುನಗುಂದ |
| ೧೯ | ಸೋಮ್ಮಣ್ಣ ಹು. ಕೋಳ್ಳಿ | ಹಿಂದು ಹಟಗಾರ | ಕನ್ನಡ | ಕಮತಗಿ | ೭ | ಪಟ್ಟಣ ಪಂಚಾಯಿತಿ | ಹುನಗುಂದ |
| ೨೦ | ಪ್ರೇಮಾ ಅಶೋಕ ಬ್ಯಾಹಟ್ಟಿ | ಹಿಂದು ಹಟಗಾರ | ಕನ್ನಡ | ಕಮತಗಿ | ೬ | ಪಟ್ಟಣ ಪಂಚಾಯಿತಿ | ಹುನಗುಂದ |

| | | | | | | | |
|---|---|---|---|---|---|---|---|
| ೨೧ | ರಾಚ್ಚಪ್ಪ ಹುಚ್ಚಪ್ಪ ಕಡ್ಲಿಪಟ್ಟಿ | ಹಿಂದು ಹಟಗಾರ | ಕನ್ನಡ | ಕಮತಗಿ | ೩ | ಪಟ್ಟಣ ಪಂಚಾಯಿತಿ | ಹುನಗುಂದ |
| ೨೨ | ರಮೇಶ ಮುದಕಟ್ಟಿ ಚೌಡಪುರ | ಹಿಂದು ಹಟಗಾರ | ಕನ್ನಡ | ಕಮತಗಿ | ೩ | ಪಟ್ಟಣ ಪಂಚಾಯಿತಿ | ಹುನಗುಂದ |
| ೨೩ | ಶಿವಾನಂದ ಸಿದ್ದಪ್ಪ ಕಡ್ಲಿಮಟ್ಟಿ | ಹಿಂದು ಹಟಗಾರ | ಕನ್ನಡ | ಕಮತಗಿ | ೧೧ | ಪಟ್ಟಣ ಪಂಚಾಯಿತಿ | ಹುನಗುಂದ |
| ೨೪ | ಆನಂದ ದೆ. ಕಡ್ಲಿಮಟ್ಟಿ | ಹಿಂದು ಹಟಗಾರ | ಕನ್ನಡ | ಕಮತಗಿ | ೧೦ | ಪಟ್ಟಣ ಪಂಚಾಯಿತಿ | ಹುನಗುಂದ |
| ೨೫ | ಮಲ್ಲಪ್ಪ ಕರಿಯಪ್ಪ ನಂದಿ | ಹಿಂದು ಹಟಗಾರ | ಕನ್ನಡ | ಕಮತಗಿ | ೧೦ | ಪಟ್ಟಣ ಪಂಚಾಯಿತಿ | ಹುನಗುಂದ |
| ೨೬ | ಹನುಮಂತಪ್ಪ ಈರಪ್ಪ ಕಡ್ಲಿಮಟ್ಟಿ | ಹಿಂದು ಹಟಗಾರ | ಕನ್ನಡ | ಕಮತಗಿ | ೧೯ | ಪಟ್ಟಣ ಪಂಚಾಯಿತಿ | ಹುನಗುಂದ |
| ೨೭ | ಬಸವಂತಪ್ಪ ಈರಬಸಪ್ಪ ಕಡ್ಲಿಮಟ್ಟಿ | ಹಿಂದು ಹಟಗಾರ | ಕನ್ನಡ | ಕಮತಗಿ | ೮ | ಪಟ್ಟಣ ಪಂಚಾಯಿತಿ | ಹುನಗುಂದ |
| ೨೮ | ಗುರುನಾಥ ಈರಪ್ಪ ಕಡ್ಲಿಮಟ್ಟಿ | ಹಿಂದು ಹಟಗಾರ | ಕನ್ನಡ | ಕಮತಗಿ | ೫ | ಪಟ್ಟಣ ಪಂಚಾಯಿತಿ | ಹುನಗುಂದ |
| ೨೯ | ಶಂಕ್ರಪ್ಪ ಶಿವಪ್ಪ ಕಡ್ಲಿಮಟ್ಟಿ | ಹಿಂದು ಹಟಗಾರ | ಕನ್ನಡ | ಕಮತಗಿ | ೫ | ಪಟ್ಟಣ ಪಂಚಾಯಿತಿ | ಹುನಗುಂದ |
| ೩೦ | ರಾಮಪ್ಪ ಈಶ್ವರ ಕಡ್ಲಿಮಟ್ಟಿ | ಹಿಂದು ಹಟಗಾರ | ಕನ್ನಡ | ಕಮತಗಿ | ೪ | ಪಟ್ಟಣ ಪಂಚಾಯಿತಿ | ಹುನಗುಂದ |
| ೩೧ | ಮಲ್ಲಪ್ಪ ಕ. ರೋಗಿ | ಹಿಂದು ದೇವಾಂಗ | ಕನ್ನಡ | ಕಮತಗಿ | ೪ | ಪಟ್ಟಣ ಪಂಚಾಯಿತಿ | ಹುನಗುಂದ |
| ೩೨ | ಬಸಪ್ಪ ರಾಮಚಂದ್ರಪ್ಪ ಸಿನ್ನೂರಗೌಡ್ರ | ಹಿಂದು ದೇವಾಂಗ | ಕನ್ನಡ | ಕಮತಗಿ | ೪ | ಪಟ್ಟಣ ಪಂಚಾಯಿತಿ | ಹುನಗುಂದ |
| ೩೩ | ಹಂಪವ್ವ ರಾಚಪ್ಪ ಹಳೆಮನೆ | ಹಿಂದು ದೇವಾಂಗ | ಕನ್ನಡ | ಕಮತಗಿ | ೪ | ಪಟ್ಟಣ ಪಂಚಾಯಿತಿ | ಹುನಗುಂದ |
| ೩೪ | ಯಲ್ಲಪ್ಪ ಕೆಂಚಪ್ಪ ಮೇದಾರ | ಹಿಂದು ಮೇದ | ಕನ್ನಡ | ಕಮತಗಿ | ೭ | ಪಟ್ಟಣ ಪಂಚಾಯಿತಿ | ಹುನಗುಂದ |
| ೩೫ | ರಾಮಣ್ಣ ಬೆನಕಪ್ಪ ಬಾಚಾಳ | ಹಿಂದು ಹಟಗಾರ | ಕನ್ನಡ | ಕಮತಗಿ | ೯ | ಪಟ್ಟಣ ಪಂಚಾಯಿತಿ | ಹುನಗುಂದ |
| ೩೬ | ಶಂಕ್ರಪ್ಪ ರುದ್ರಗಂಟಿ | ಹಿಂದು ಹಟಗಾರ | ಕನ್ನಡ | ಕಮತಗಿ | ೭ | ಪಟ್ಟಣ ಪಂಚಾಯಿತಿ | ಹುನಗುಂದ |
| ೩೭ | ರಾಜೇಶ ಯೋಗಪ್ಪ ಕೋಲಾರ | ಹಿಂದು ಹಟಗಾರ | ಕನ್ನಡ | ಕಮತಗಿ | ೮ | ಪಟ್ಟಣ ಪಂಚಾಯಿತಿ | ಹುನಗುಂದ |
| ೩೮ | ಶಂಕ್ರಪ್ಪ ವೀರಭದ್ರಪ್ಪ ಕಾಶೆಟ್ಟಿ | ಹಿಂದು ದೇವಾಂಗ | ಕನ್ನಡ | ಕಮತಗಿ | ೮ | ಪಟ್ಟಣ ಪಂಚಾಯಿತಿ | ಹುನಗುಂದ |
| ೩೯ | ಯಲ್ಲಪ್ಪ ಮಹಾದೇವ ಮೇದಾರ | ಹಿಂದೂ ಮೇದಾರ | ಕನ್ನಡ | ಕಮತಗಿ | ೭ | ಪಟ್ಟಣ ಪಂಚಾಯಿತಿ | ಹುನಗುಂದ |
| ೪೦ | ಲಕ್ಷ್ಣಣ ಗಿರಿಯಪ್ಪ ಗಡೆದಗೌಡ್ರ | ಹಿಂದು ಕುರುಹಿನಶೆಟ್ಟಿ | ಕನ್ನಡ | ಕಮತಗಿ | ೨ | ಪಟ್ಟಣ ಪಂಚಾಯಿತಿ | ಹುನಗುಂದ |
| ೪೧ | ದಾನಪ್ಪ ಹುಚ್ಚಪ್ಪ ಮುಳಗುಂದ | ಹಿಂದು ಕುರುಹಿನಶೆಟ್ಟಿ | ಕನ್ನಡ | ಕಮತಗಿ | ೨ | ಪಟ್ಟಣ ಪಂಚಾಯಿತಿ | ಹುನಗುಂದ |
| ೪೨ | ಈರಣ್ಣ ಈರಬಸಪ್ಪ ಕೂಡಗಿ | ಹಿಂದು ಕುರುಹಿನಶೆಟ್ಟಿ | ಕನ್ನಡ | ಕಮತಗಿ | ೬ | ಪಟ್ಟಣ ಪಂಚಾಯಿತಿ | ಹುನಗುಂದ |

| | | | | | | | |
|---|---|---|---|---|---|---|---|
| ೪೩ | ನಾಗೇಶ ನೀಲಕಂಠಪ್ಪ ಕುಮಚಗಿ | ಹಿಂದು ಕುರುಹಿನಶೆಟ್ಟಿ | ಕನ್ನಡ | ಕಮತಗಿ | ೫ | ಪಟ್ಟಣ ಪಂಚಾಯಿತಿ | ಹುನಗುಂದ |
| ೪೪ | ವಿಶ್ವನಾಥ ಸಂಗಪ್ಪ ಅಚನೂರ | ಹಿಂದು ಕುರುಹಿನಶೆಟ್ಟಿ | ಕನ್ನಡ | ಕಮತಗಿ | ೩ | ಪಟ್ಟಣ ಪಂಚಾಯಿತಿ | ಹುನಗುಂದ |
| ೪೫ | ಮಹಂತೇಶ ಶರಣಪ್ಪ ಕಡಿವಾಲ | ಹಿಂದು ಕುರುಹಿನಶೆಟ್ಟಿ | ಕನ್ನಡ | ಕಮತಗಿ | ೧೪ | ಪಟ್ಟಣ ಪಂಚಾಯಿತಿ | ಹುನಗುಂದ |
| ೪೬ | ಶಿವಪ್ಪ ಚ. ಬಂಡಿ | ಹಿಂದು ಕುರುಹಿನಶೆಟ್ಟಿ | ಕನ್ನಡ | ಕಮತಗಿ | ೧೪ | ಪಟ್ಟಣ ಪಂಚಾಯಿತಿ | ಹುನಗುಂದ |
| ೪೭ | ನಾಗಪ್ಪ ಚನ್ನಸು ಗಡೇದಗೌಡ್ರ | ಹಿಂದು ಕುರುಹಿನಶೆಟ್ಟಿ | ಕನ್ನಡ | ಕಮತಗಿ | ೨ | ಪಟ್ಟಣ ಪಂಚಾಯಿತಿ | ಹುನಗುಂದ |
| ೪೮ | ಲೋಕೇಶ ಉಮ್ಮನಪ್ಪ ಬಂಡಿ | ಹಿಂದು ಕುರುಹಿನಶೆಟ್ಟಿ | ಕನ್ನಡ | ಕಮತಗಿ | ೧೩ | ಪಟ್ಟಣ ಪಂಚಾಯಿತಿ | ಹುನಗುಂದ |
| ೪೯ | ಬಸವರಾಜ ಈರಬಸಪ್ಪ ಬಂಡಿ | ಹಿಂದು ಕುರುಹಿನಶೆಟ್ಟಿ | ಕನ್ನಡ | ಕಮತಗಿ | ೧೪ | ಪಟ್ಟಣ ಪಂಚಾಯಿತಿ | ಹುನಗುಂದ |
| ೫೦ | ರಾಮಪ್ಪ ಗಿರಿಯಪ್ಪ ಗಡೆದಗೌಡ್ರ | ಹಿಂದು ಕುರುಹಿನಶೆಟ್ಟಿ | ಕನ್ನಡ | ಕಮತಗಿ | ೨ | ಪಟ್ಟಣ ಪಂಚಾಯಿತಿ | ಹುನಗುಂದ |
| ೫೧ | ಗುರುನಾಥ ಕಿರ್ತಪ್ಪ ಗುಂಡಮಿ | ಹಿಂದು ದೇವಾಂಗ | ಕನ್ನಡ | ಸೂಳೇಭಾವಿ | ೯ | ಗ್ರಾಮ ಪಂಚಾಯತಿ | ಹುನಗುಂದ |
| ೫೨ | ರಾಘವೇಂದ್ರ ಪಿ. ಕೊಳ್ಳಿ | ಹಿಂದು ದೇವಾಂಗ | ಕನ್ನಡ | ಸೂಳೇಭಾವಿ | ೯ | ಗ್ರಾಮ ಪಂಚಾಯತಿ | ಹುನಗುಂದ |
| ೫೩ | ರವಿ ಶಂಕ್ರಪ್ಪ ಸಿನ್ನೂರ | ಹಿಂದು ದೇವಾಂಗ | ಕನ್ನಡ | ಸೂಳೇಭಾವಿ | ೬ | ಗ್ರಾಮ ಪಂಚಾಯತಿ | ಹುನಗುಂದ |
| ೫೪ | ಶಿವಾನಂದ ಎಸ್. ಕತ್ತಿ | ಹಿಂದು ದೇವಾಂಗ | ಕನ್ನಡ | ಸೂಳೇಭಾವಿ | ೮ | ಗ್ರಾಮ ಪಂಚಾಯತಿ | ಹುನಗುಂದ |
| ೫೫ | ಬಸವರಾಜ ಪಿ. ಭಾವಿಕಟ್ಟಿ | ಹಿಂದು ದೇವಾಂಗ | ಕನ್ನಡ | ಸೂಳೇಭಾವಿ | ೪ | ಗ್ರಾಮ ಪಂಚಾಯತಿ | ಹುನಗುಂದ |
| ೫೬ | ಶಂಕ್ರಪ್ಪ ಹ ಗಡೆದ | ಹಿಂದು ಪದ್ಮಸಾಲೆ | ಕನ್ನಡ | ಸೂಳೇಭಾವಿ | ೬ | ಗ್ರಾಮ ಪಂಚಾಯತಿ | ಹುನಗುಂದ |
| ೫೭ | ವಿಠ್ಠಪ್ಪ ಜನ್ನಪ್ಪ ಚಂದ್ರಗೀರಿ | ಹಿಂದು ವಾಲ್ಮೀಕಿ | ಕನ್ನಡ | ಸೂಳೇಭಾವಿ | ೬ | ಗ್ರಾಮ ಪಂಚಾಯತಿ | ಹುನಗುಂದ |
| ೫೮ | ರಾಧವ್ವ ಈರಪ್ಪ ದೂಪದ | ಹಿಂದು ದೇವಾಂಗ | ಕನ್ನಡ | ಸೂಳೇಭಾವಿ | ೪ | ಗ್ರಾಮ ಪಂಚಾಯತಿ | ಹುನಗುಂದ |
| ೫೯ | ರೇವಣೆಪ್ಪ ರಾಮದುರ್ಗ | ಹಿಂದು ದೇವಾಂಗ | ಕನ್ನಡ | ಸೂಳೇಭಾವಿ | ೫ | ಗ್ರಾಮ ಪಂಚಾಯತಿ | ಹುನಗುಂದ |

| | | | | | | | |
|---|---|---|---|---|---|---|---|
| ೬೦ | ರೇವಣೆಪ್ಪ ಸಿದ್ದಪ್ಪ ರಾಮದುರ್ಗ | ಹಿಂದು ದೇವಾಂಗ | ಕನ್ನಡ | ಸೂಳೇಭಾವಿ | ೩ | ಗ್ರಾಮ ಪಂಚಾಯಿತಿ | ಹುನಗುಂದ |
| ೬೧ | ಚಂದಪ್ಪ ಸಂಗಪ್ಪ ಮಳಗಾವಿ | ಹಿಂದು ಕುರುಹಿನಶೆಟ್ಟಿ | ಕನ್ನಡ | ಅಮೀನಗಡ | ೧೦ | ಪಟ್ಟಣ ಪಂಚಾಯಿತಿ | ಹುನಗುಂದ |
| ೬೨ | ಬಸವರಾಜ ಶಾಂತಪ್ಪ ಮುಸಿಗೇರಿ | ಹಿಂದು ಕುರುಹಿನಶೆಟ್ಟಿ | ಕನ್ನಡ | ಅಮೀನಗಡ | ೧೦ | ಪಟ್ಟಣ ಪಂಚಾಯಿತಿ | ಹುನಗುಂದ |
| ೬೩ | ನಿಗಂಪ್ಪ ಅಣೆಯಪ್ಪ ನೀಲನೂರ | ಹಿಂದು ಕುರುಹಿನಶೆಟ್ಟಿ | ಕನ್ನಡ | ಅಮೀನಗಡ | ೧೦ | ಪಟ್ಟಣ ಪಂಚಾಯಿತಿ | ಹುನಗುಂದ |
| ೬೪ | ಪಂಪಣ್ಣ ವೀರಭದ್ರಪ್ಪ ಕೊಳ್ಳಿ | ಹಿಂದು ಕುರುಹಿನಶೆಟ್ಟಿ | ಕನ್ನಡ | ಅಮೀನಗಡ | ೧೦ | ಪಟ್ಟಣ ಪಂಚಾಯಿತಿ | ಹುನಗುಂದ |
| ೬೫ | ಶಂಕ್ರಪ್ಪ ಪಾಂಡಪ್ಪ ಸೂಳೇಭಾವಿ | ಹಿಂದು ಕುರುಹಿನಶೆಟ್ಟಿ | ಕನ್ನಡ | ಅಮೀನಗಡ | ೫ | ಪಟ್ಟಣ ಪಂಚಾಯಿತಿ | ಹುನಗುಂದ |
| ೬೬ | ವೀರಭದ್ರಪ್ಪ ಪಿ. ಸೂಳೇಭಾವಿ | ಹಿಂದು ಕುರುಹಿನಶೆಟ್ಟಿ | ಕನ್ನಡ | ಅಮೀನಗಡ | ೧ | ಪಟ್ಟಣ ಪಂಚಾಯಿತಿ | ಹುನಗುಂದ |
| ೬೭ | ತಿಪ್ಪಣ್ಣ ಬಸಪ್ಪ ಮದ್ಲಿ | ಹಿಂದು ಕುರುಹಿನಶೆಟ್ಟಿ | ಕನ್ನಡ | ಅಮೀನಗಡ | ೫ | ಪಟ್ಟಣ ಪಂಚಾಯಿತಿ | ಹುನಗುಂದ |
| ೬೮ | ಈರಣ್ಣ ಸಂಗಪ್ಪ ಗಿರಿಸಾಗರ | ಹಿಂದು ಕುರುಹಿನಶೆಟ್ಟಿ | ಕನ್ನಡ | ಅಮೀನಗಡ | ೫ | ಪಟ್ಟಣ ಪಂಚಾಯಿತಿ | ಹುನಗುಂದ |
| ೬೯ | ಚಿನ್ನವ್ವ ಈರಪ್ಪ ಗಿರಿಸಾಗರ | ಹಿಂದು ಕುರುಹಿನಶೆಟ್ಟಿ | ಕನ್ನಡ | ಅಮೀನಗಡ | ೫ | ಪಟ್ಟಣ ಪಂಚಾಯಿತಿ | ಹುನಗುಂದ |
| ೭೦ | ಉಮ್ಮಣ್ಣ ಈಶಪ್ಪ ಯರಗಲ್ | ಹಿಂದು ಕುರುಹಿನಶೆಟ್ಟಿ | ಕನ್ನಡ | ಅಮೀನಗಡ | ೫ | ಪಟ್ಟಣ ಪಂಚಾಯಿತಿ | ಹುನಗುಂದ |
| ೭೧ | ಪ್ರಕಾಶ ತಿಪ್ಪಣ್ಣ ಗಾಯದ | ಹಿಂದು ದೇವಾಂಗ | ಕನ್ನಡ | ಗುಳೇದಗುಡ್ಡ | ೪ | ಪುರಸಭೆ | ಬಾದಾಮಿ |
| ೭೨ | ಸುರೇಶ ತುಕಾರಾಮ ರೂಡಗಿ | ಹಿಂದು ದೇವಾಂಗ | ಕನ್ನಡ | ಗುಳೇದಗುಡ್ಡ | ೪ | ಪುರಸಭೆ | ಬಾದಾಮಿ |
| ೭೩ | ಶಂಕ್ರಪ್ಪ ಅಯ್ಯಪ್ಪ ಗೊಂಡಬಾಳ | ಹಿಂದು ದೇವಾಂಗ | ಕನ್ನಡ | ಗುಳೇದಗುಡ್ಡ | ೪ | ಪುರಸಭೆ | ಬಾದಾಮಿ |
| ೭೪ | ಗುಂಡಪ್ಪ ನೀಲಪ್ಪ ಗಾಡದ | ಹಿಂದು ದೇವಾಂಗ | ಕನ್ನಡ | ಗುಳೇದಗುಡ್ಡ | ೪ | ಪುರಸಭೆ | ಬಾದಾಮಿ |
| ೭೫ | ಗುರುನಾಥಪ್ಪ ಸಂಕಪ್ಪ ಗೊಂಡಬಾಳ | ಹಿಂದು ದೇವಾಂಗ | ಕನ್ನಡ | ಗುಳೇದಗುಡ್ಡ | ೪ | ಪುರಸಭೆ | ಬಾದಾಮಿ |

| | | | | | | | |
|---|---|---|---|---|---|---|---|
| ೭೬ | ದಾನಪ್ಪ ತುಕಾರಾಮ ರೂಡಗಿ | ಹಿಂದು ದೇವಾಂಗ | ಕನ್ನಡ | ಗುಳೇದಗುಡ್ಡ | ೪ | ಪುರಸಭೆ | ಬಾದಾಮಿ |
| ೭೭ | ಈರಪ್ಪ ವಿಠ್ಠಲ ಗೊಂಡಬಾಳ | ಹಿಂದು ದೇವಾಂಗ | ಕನ್ನಡ | ಗುಳೇದಗುಡ್ಡ | ೪ | ಪುರಸಭೆ | ಬಾದಾಮಿ |
| ೭೮ | ನಾರಾಯಣಪ್ಪ ತುಕ್ಕಪ್ಪ ಜವಳಿ | ಹಿಂದು ದೇವಾಂಗ | ಕನ್ನಡ | ಗುಳೇದಗುಡ್ಡ | ೪ | ಪುರಸಭೆ | ಬಾದಾಮಿ |
| ೭೯ | ತಿಪ್ಪಣ್ಣ ವಿಠ್ಠಪ್ಪ ನಾಗಶೆಟ್ಟಿ | ಹಿಂದು ದೇವಾಂಗ | ಕನ್ನಡ | ಗುಳೇದಗುಡ್ಡ | ೪ | ಪುರಸಭೆ | ಬಾದಾಮಿ |
| ೮೦ | ಚಂದ್ರು ರೂಡಗಿ | ಹಿಂದು ದೇವಾಂಗ | ಕನ್ನಡ | ಗುಳೇದಗುಡ್ಡ | ೪ | ಪುರಸಭೆ | ಬಾದಾಮಿ |
| ೮೧ | ಹನುಮಂತಪ್ಪ ಗೋಪಾಲಪ್ಪ ಪಲಮಾರಿ | ಹಿಂದು ಪದ್ಮಸಾಲೆ | ಕನ್ನಡ | ಗುಳೇದಗುಡ್ಡ | ೬ | ಪುರಸಭೆ | ಬಾದಾಮಿ |
| ೮೨ | ಬಸಪ್ಪ ಕಿಡಿಯಪ್ಪ ಬಲಕುಂದಿ | ಹಿಂದು ದೇವಾಂಗ | ಕನ್ನಡ | ಗುಳೇದಗುಡ್ಡ | ೪ | ಪುರಸಭೆ | ಬಾದಾಮಿ |
| ೮೩ | ಯಮನೂರಪ್ಪ ಆನಂದಪ್ಪ ಮೇಡಂ | ಹಿಂದು ಪದ್ಮಸಾಲೆ | ಕನ್ನಡ | ಗುಳೇದಗುಡ್ಡ | ೪ | ಪುರಸಭೆ | ಬಾದಾಮಿ |
| ೮೪ | ಶಿವಾನಂದ ಈರಬಸಪ್ಪ ಹೆಬ್ಬಾಳ | ಹಿಂದು ದೇವಾಂಗ | ಕನ್ನಡ | ಗುಳೇದಗುಡ್ಡ | ೪ | ಪುರಸಭೆ | ಬಾದಾಮಿ |
| ೮೫ | ರಮೇಶ ನಾರಾಯಣಪ್ಪ ಕೊಂಕತಿ | ಹಿಂದು ಪದ್ಮಸಾಲೆ | ಕನ್ನಡ | ಗುಳೇದಗುಡ್ಡ | ೪ | ಪುರಸಭೆ | ಬಾದಾಮಿ |
| ೮೬ | ಕೃಷ್ಣಪ್ಪ ಸಿದ್ದಪ್ಪ ಮೇಡಂ | ಹಿಂದು ಪದ್ಮಸಾಲೆ | ಕನ್ನಡ | ಗುಳೇದಗುಡ್ಡ | ೪ | ಪುರಸಭೆ | ಬಾದಾಮಿ |
| ೮೭ | ಮಲ್ಲಿಕಾರ್ಜುನ ದೆ. ಸಂಗಾ | ಹಿಂದು ಪದ್ಮಸಾಲೆ | ಕನ್ನಡ | ಗುಳೇದಗುಡ್ಡ | ೪ | ಪುರಸಭೆ | ಬಾದಾಮಿ |
| ೮೮ | ಶಂಕ್ರಪ್ಪ ಸಿದ್ದಪ್ಪ ಮೇಡಂ | ಹಿಂದು ಪದ್ಮಸಾಲೆ | ಕನ್ನಡ | ಗುಳೇದಗುಡ್ಡ | ೪ | ಪುರಸಭೆ | ಬಾದಾಮಿ |
| ೮೯ | ಮಾರ್ಕಂಡಪ್ಪ ಮುಕುಂದಪ್ಪ ಸಂಗಾ | ಹಿಂದು ಪದ್ಮಸಾಲೆ | ಕನ್ನಡ | ಗುಳೇದಗುಡ್ಡ | ೫ | ಪುರಸಭೆ | ಬಾದಾಮಿ |
| ೯೦ | ತಮ್ಮನಪ್ಪ ಗುರಪ್ಪ ನರಾಲ | ಹಿಂದು ಪದ್ಮಸಾಲೆ | ಕನ್ನಡ | ಗುಳೇದಗುಡ್ಡ | ೫ | ಪುರಸಭೆ | ಬಾದಾಮಿ |
| ೯೧ | ಪ್ರಕಾಶ ಗಂ. ಹುಳಬುತ್ತಿ | ಹಿಂದು ಪಟ್ಟಸಾಲೆ | ಕನ್ನಡ | ಗುಳೇದಗುಡ್ಡ | ೨ | ಪುರಸಭೆ | ಬಾದಾಮಿ |
| ೯೨ | ಸಂಗಪ್ಪ ಚ. ತಿಪ್ಪಾ | ಹಿಂದು ಪಟ್ಟಸಾಲೆ | ಕನ್ನಡ | ಗುಳೇದಗುಡ್ಡ | ೨ | ಪುರಸಭೆ | ಬಾದಾಮಿ |
| ೯೩ | ಬಸಪ್ಪ ಸಂಗಪ್ಪ ಮೊರಬದ | ಹಿಂದು ಪಟ್ಟಸಾಲೆ | ಕನ್ನಡ | ಗುಳೇದಗುಡ್ಡ | ೫ | ಪುರಸಭೆ | ಬಾದಾಮಿ |
| ೯೪ | ಗುರುಸಂಗಪ್ಪ ಚ. ತಿಪ್ಪಾ | ಹಿಂದು ಪಟ್ಟಸಾಲೆ | ಕನ್ನಡ | ಗುಳೇದಗುಡ್ಡ | ೨ | ಪುರಸಭೆ | ಬಾದಾಮಿ |
| ೯೫ | ಗೋಪಾಲ ಗುಂಡಪ್ಪ ಮುಸಿಗೇರಿ | ಹಿಂದು ಕುರುಹಿನಶೆಟ್ಟಿ | ಕನ್ನಡ | ಗುಳೇದಗುಡ್ಡ | ೨ | ಪುರಸಭೆ | ಬಾದಾಮಿ |
| ೯೬ | ರಾಚಪ್ಪ ಶಿವಪ್ಪ ಅವರಾದಿ | ಹಿಂದು ಕುರುಹಿನಶೆಟ್ಟಿ | ಕನ್ನಡ | ಗುಳೇದಗುಡ್ಡ | ೨ | ಪುರಸಭೆ | ಬಾದಾಮಿ |
| ೯೭ | ಚಂದ್ರಶೇಖರ ಪಂಪಣ್ಣ ವಡಗೇರಿ | ಹಿಂದು | ಕನ್ನಡ | ಗುಳೇದಗುಡ್ಡ | ೨ | ಪುರಸಭೆ | ಬಾದಾಮಿ |

| | | | | | | | |
|---|---|---|---|---|---|---|---|
| | | ಕುರುಹಿನಶೆಟ್ಟಿ | | | | | |
| ೯೮ | ಈರಪ್ಪ ಶಿವಪ್ಪ ಅವರಾದಿ | ಹಿಂದು ಕುರುಹಿನಶೆಟ್ಟಿ | ಕನ್ನಡ | ಗುಳೇದಗುಡ್ಡ | ೨ | ಪುರಸಭೆ | ಬಾದಾಮಿ |
| ೯೯ | ಮಲ್ಲಿಕಾರ್ಜುನ ಈರಪ್ಪ ಮುಸಿಗೇರಿ | ಹಿಂದು ಕುರುಹಿನಶೆಟ್ಟಿ | ಕನ್ನಡ | ಗುಳೇದಗುಡ್ಡ | ೨ | ಪುರಸಭೆ | ಬಾದಾಮಿ |
| ೧೦೦ | ವೀರಭದ್ರಪ್ಪ ಪಿ. ನಿಲುಗಲ್ಲ | ಹಿಂದು ಕುರುಹಿನಶೆಟ್ಟಿ | ಕನ್ನಡ | ಗುಳೇದಗುಡ್ಡ (ಅಮೀನಗಡ) | ೫ | ಪುರಸಭೆ | ಬಾದಾಮಿ |

# ೪. ಛಾಯಾಚಿತ್ರಗಳು

| ನೇಕಾರರ ಸಂದರ್ಶನದ ಛಾಯಾಚಿತ್ರಗಳು | |
|---|---|
|  |  |
| ಹಿರಿಯ ನೇಕಾರರು(ಸಣ್ಣ ಪಟಗಾ ವ್ಯಾಪಾರಿಗಳು) ಕಮತಗಿ | ಹಿರಿಯ ನೇಕಾರರೂ(ಇಳಕಲ್ಲ ಸೀರೆ). ಕಮತಗಿ |
|  |  |
| ಮುಂಗಾಡ ನೇಕಾರರು(ಇಳಕಲ್ಲ ಸೀರೆ), ಕಮತಗಿ | ಮುಂಗಾಡ ನೇಕಾರರು(ಇಳಕಲ್ಲ ಸೀರೆ) ಕಮತಗಿ |
|  |  |
| ಯುವ ನೇಕಾರರು(ಚಾಲುಕ್ಯ ಸೀಲ್ಕ ಸೀರೆ) ಕಮತಗಿ | ಹಿರಿಯ ನೇಕಾರರು(ಇಳಕಲ್ಲ ಸೀರೆ) ಅಮೀನಗಡ |

| ನೇಕಾರಿಕೆಯ ವೃತ್ತಿಯಲ್ಲಿ ಮಹಿಳೆಯರ ಪ್ರಮುಖ ಕೆಲಸಗಳು | |
| --- | --- |
|  |  |
| ನೇಕಾರಿಕೆಯಲ್ಲಿ ಕಂಡಕಿಯನ್ನು ಸುತ್ತುತ್ತಿರುವುದು. | ನೇಕಾರಿಕೆಯಲ್ಲಿ ಉಂಕಿ(ಹೊಕ್ಕು) ಹೂಡುವುದು. |
|  |  |
| ನೇಕಾರಿಕೆಯಲ್ಲಿ ಹಣಗಿ ಕಟ್ಟುವುದು. | ನೇಕಾರಿಕೆಯಲ್ಲಿ ಹೊಸ ಹಣಗಿ ಕಟ್ಟುವುದು. |
|  |  |
| ನೇಕಾರಿಕೆಯಲ್ಲಿ ರೇಷ್ಮೆಯ ಎಳಿಯಹದ ಮಾಡುವುದು | ನೇಕಾರಿಕೆಯಲ್ಲಿ ಚಮಕಾ ಎಳಿಯಹದ ಮಾಡುವುದು |

# ನೇಕಾರರ ವೃತ್ತಿಯ ಛಾಯಾಚಿತ್ರಗಳು




ಮಹಿಳೆಯು ಕೆವಿಚ್‌ಡಿಸಿ ಮಗ್ಗದಲ್ಲಿ ಖಾದಿ ಬಟ್ಟೆ ನೇಯುತ್ತಿರುವುದು. ಗುಳೇದಗುಡ್ಡ



ನೇಕಾರರು ವಾಸ್ತವ(ಮನೆ) ಕುಟುಂಬದ ಸ್ಥಿತಿ



ನೇಕಾರರು ವಾಸ್ತವ(ಮನೆ) ಕುಟುಂಬದ ಸ್ಥಿತಿ



ವಿದ್ಯುತ್ ಚಾಲಿತ ಮಗ್ಗದಲ್ಲಿ ನೇಕಾರರು (ಗುಳೇದಗುಡ್ಡ ಖಣ) ಗುಳೇದಗುಡ್ಡ



ವಿದ್ಯುತ್ ಚಾಲಿತ ಮಗ್ಗದಲ್ಲಿ ಯುವ ನೇಕಾರರು (ಗುಳೇದಗುಡ್ಡ ಖಣ) ಗುಳೇದಗುಡ್ಡ

## ನೇಕಾರರ ವಿಶೇಷ ಪರಿಣಿತರ ಹಾಗೂ ನೇಕಾರ ಸಹಕಾರಿ ಸಂಘದ ವ್ಯವಸ್ಥಾಪಕರೊಂದಿಗೆ ಸಂದರ್ಶನದ ಛಾಯಾಚಿತ್ರಗಳು



ಹಿರಿಯ ನೇಕಾರ ಸೀರೆ ನೇಯುತ್ತಿರುವುದು.



ರಾತ್ರಿಯಾದರು ನೇಕಾರಿಕೆಯಲ್ಲಿ ನಿರತರಾದ ನೇಕಾರರು





ನೇಕಾರಿ ಸಹಕಾರಿ ಸಂಘಗಳಲ್ಲಿ ತಯಾರಿಸಿದ ಹೊಸ ವಿನ್ಯಾಸದ ಸೀರೆಗಳನ್ನ ತೋರಿಸುತ್ತಿರುವುದು (ಕಾಂಚಿವರಂ ಹಾಗೂ ಧರ್ಮಾವರಂ ಮಾದರಿ ಸೀರೆ)



ನೇಕಾರಿಕೆಯ ವೃತ್ತಿಯಲ್ಲಿ ರಾಜ್ಯ ಪ್ರಶಸ್ತಿ ಪಡೆದ ನೇಕಾರರೂ. ಗುಳೇದಗುಡ್ಡ



ಸಹಕಾರಿ ಸಂಘದ ಕಾರ್ಯನಿರ್ವಾಹಕರ ಸಂದರ್ಶನ

**ಸಂಶೋಧನೆಗೆ ಬಳಸಿದ ಪ್ರಶ್ನಾವಳಿಗಳು**

**ವಿಷಯ:**

**"ನೇಕಾರರ ಅಭಿವೃದ್ಧಿಯಲ್ಲಿ ನೇಕಾರ ಸಹಕಾರಿ ಸಂಘಗಳ ಪಾತ್ರ"**

**ತಿಳುವಳಿಕೆ ನೀಡುವವರ ಹೆಸರು:**

**ವಿಳಾಸ:**

೧) ನೇಕಾರಿಕೆ ಎಂದರೇನು ?

೨) ನೇಕಾರಿಕೆಯ ಪ್ರಕಾರಗಳು ಯಾವವು? (ಅ.ಆ.ಇ.ಈ.)

೩) ನೇಕಾರಿಕೆ ನಿಮ್ಮ ಪಾರಂಪರಿಕ ವೃತ್ತಿಯಾಗಿದೆಯೇ? (ಹೌದು/ಇಲ್ಲ)

೪) ಈ ವೃತ್ತಿಯು ನಿಮ್ಮ ಮನೆತನದಲ್ಲಿ ಎಷ್ಟು ವರ್ಷಗಳಿಂದ ಇದೆ?
ಅ. ೦೫ ರಿಂದ ೧೦ ಆ. ೧೧ ರಿಂದ ೨೦ ಇ. ೨೧ ರಿಂದ ೪೦ ಈ. ೪೧ ಕ್ಕಿಂತಲೂ ಹೆಚ್ಚು ಅಥವಾ ಪಾರಂಪರಿಕವಾಗಿ

೫) ಈ ವೃತ್ತಿಯಲ್ಲಿ ನಿಮ್ಮ ಕುಟುಂಬದ ಜನ ಭಾಗವಹಿಸುವರೆ? (ಹೌದು/ಇಲ್ಲ)

೬) ನೇಕಾರ ಸಹಕಾರಿ ಸಂಘದ ಪ್ರಾಥಮಿಕ ಸದಸ್ಯತ್ವ ಯಾವ ವರ್ಷ ಸೇರಿದ್ದಿರಿ?

೭) ನಿಮ್ಮ ವೃತ್ತಿಯ ಬಗ್ಗೆ ಗೌರವವಿದೆಯೇ? (ಇದೆ/ಇಲ್ಲ)

೮) ನೇಕಾರಿಕೆ ವೃತ್ತಿಗೂ ಹಾಗೂ ವೈಯಕ್ತಿಕ ಜೀವನಕ್ಕೂ ಸಾಮ್ಯತೆಯಿದೆಯೇ? (ಹೌದು/ಇಲ್ಲ)

೯) ನೇಕಾರಿಕೆಯಲ್ಲಿಯ ವಿವಿಧ ಕೌಶಲ್ಯಗಳು ನಿಮಗೆ ತಿಳಿದಿವೆಯೇ? (ಹೌದು/ಇಲ್ಲ)

೧೦) ನೇಕಾರಿಕೆ ವೃತ್ತಿಯನ್ನು ಮಹಿಳೆಯರು ಮಾಡುತ್ತಾರೆಯೇ? (ಹೌದು/ಇಲ್ಲ) ಹೌದಾದರೆ, ನೇಕಾರಿಕೆಯಲ್ಲಿ ಯಾವ ಯಾವ ಕೆಲಸ ಮಾಡುತ್ತಾರೆ ವಿವರಿಸಿ?

೧೧) ನೀವು ಸಾಂಪ್ರದಾಯಕ ಬಟ್ಟೆ ತಯಾರಿಸುತ್ತಿರಾ? (ಹೌದು/ಇಲ್ಲ) ಹೌದಾದರೆ, ಯಾವತರಹದ ಬಟ್ಟೆಗಳನ್ನು ತಯಾರಿಸುತ್ತಿರಿ ಹೆಸರಿಸಿ?

೧೨) ನೀವು ಆಧುನಿಕ ಬಟ್ಟೆಯನ್ನು ತಯಾರಿಸುತ್ತಿರಾ? (ಹೌದು/ಇಲ್ಲ) ಹೌದಾದರೆ, ಯಾವತರಹದ ಬಟ್ಟೆಗಳನ್ನು ತಯಾರಿಸುತ್ತಿರಿ ಹೆಸರಿಸಿ?

೧೩) ನೀವು ತಯಾರಿಸುವ ಬಟ್ಟೆಗಳ ವಿನ್ಯಾಸದ ಬಗ್ಗೆ ತಿಳಿದಿದೆಯಾ? (ಹೌದು/ಇಲ್ಲ) ಹೌದಾದರೆ, ಆ ವಿನ್ಯಾಸಗಳ ಹೆಸರುಗಳನ್ನು ಹೆಸರಿಸಿರಿ?

೧೪) ಬಟ್ಟೆಯ ತಯಾರಿಕೆಯ ವಿನ್ಯಾಸದ ಕೌಶಲ್ಯತೆಯ ಕೆಲಸ ತಿಳಿದಿದೆಯೆ? (ಹೌದು/ಇಲ್ಲ) ಹೌದಾದರೆ, ವಿನ್ಯಾಸದ ಕೌಶಲ್ಯತೆಯ ಕೆಲಸ ಯಾರು ಮಾಡುತ್ತಾರೆ ತಿಳಿಸಿರಿ?

೧೫) ಬಟ್ಟೆ ನೇಯುವ ತರಬೇತಿಯನ್ನು ಪಡೆದ್ದಿದಿರಾ? (ಹೌದು/ಇಲ್ಲ)

೧೬) ಕೈ ಮಗ್ಗದ ಉತ್ಪನ್ನಗಳಿಗೆ ಮಾರುಕಟ್ಟೆಯಲ್ಲಿ ಬೇಡಿಕೆ ಇದೆಯೇ? (ಹೌದು/ಇಲ್ಲ)

೧೭) ಕೈಮಗ್ಗದ ಉತ್ಪನ್ನಗಳಿಗೆ ವಿದ್ಯುತ್ ಚಾಲಿತ ಮಗ್ಗಗಳ ಉತ್ಪನ್ನಗಳು ಪೈಪೋಟ ನೀಡುತ್ತಿವೆಯೇ? (ಹೌದು/ಇಲ್ಲ)

೧೮) ನಿಮ್ಮ ಸಹಕಾರಿ ಸಂಘದ ಉತ್ಪನ್ನಗಳನ್ನು ತಯಾರಿಸುತ್ತಿರಾ? (ಹೌದು/ಇಲ್ಲ)

೧೯) ನೇಕಾರಿಕೆ ವೃತ್ತಿಯಲ್ಲಿ ಬರುವಂತ ವೃತ್ತಿ ಸಂಬಂಧಿ ಸಮಸ್ಯೆಗಳ ಬಗ್ಗೆ ತಿಳಿದಿದೆಯೇ? (ಹೌದು/ಇಲ್ಲ) ಹೌದಾದರೆ, ವೃತ್ತಿ ಸಂಬಂಧಿ ಸಮಸ್ಯೆಗಳು ಯಾವವು? ಕಾರಣ ವಿವರಿಸಿ?

೨೦) ನೇಕಾರಿಕೆಯಲ್ಲಿ ಆರ್ಥಿಕ ಸಮಸ್ಯೆಗಳ ಬಗ್ಗೆ ತಿಳುವಳಿಕೆ ಇದೆಯೇ? (ಹೌದು/ಇಲ್ಲ) ಹೌದಾದರೆ, ಆರ್ಥಿಕ ಸಮಸ್ಯೆಗಳು ಯಾವವು ತಿಳಿಸಿರಿ?

೨೧) ನೇಕಾರ ಸಮುದಾಯಗಳಲ್ಲಿಯ ಸಾಮಾಜಿಕ ಸಮಸ್ಯೆಗಳಾವವು ತಿಳಿದಿದೆಯಾ? (ಹೌದು/ಇಲ್ಲ) ಹೌದಾದಲ್ಲಿ, ಸಾಮಾಜಿಕ ಸಮಸ್ಯೆಗಳು ಯಾವವು ತಿಳಿಸಿರಿ?

೨೨) ವಿಶೇಷ ಆದಾಯದ ಮೂಲಗಳು (ಮಾಸಿಕ ಆದಾಯ ರೂ. ಗಳಲ್ಲಿ ನೊಡುವುದು)
ತಿಂಗಳ ಆದಾಯದ ಮೂಲಗಳು

೨೩) ಉಳಿತಾಯಗಳು (ವಾರ್ಷಿಕ ಉಳಿತಾಯದ ಬಾಬತ್ತುಗಳು)

| ಅ.ನಂ | ಉಳಿತಾಯದ ಮೂಲಗಳ ವಿವರ | ಇದೆ | ಇಲ್ಲ | ಖರ್ಚು |
|---|---|---|---|---|
| ೧ | ವೈಯಕ್ತಿಕ ಉಳಿತಾಯ | | | |
| ೨ | ಬ್ಯಾಂಕುಗಳಲ್ಲಿ ಉಳಿತಾಯ | | | |
| ೩ | ಎಲ್.ಐ.ಸಿ., ಯ ಉಳಿತಾಯ | | | |
| ೪ | ಪೋಷ್ಟ ಕಛೇರಿಯಲ್ಲಿನ ಉಳಿತಾಯ | | | |
| ೫ | ಚಿಟ್ ಫಂಡ್ ನಲ್ಲಿ ಉಳಿತಾಯ | | | |
| ೬ | ಮತ್ತೆ(ರಿಕವರ್)ಬರುವಂತ ಉಳಿತಾಯ | | | |
| ೭ | ಸಹಕಾರಿ ಸಂಘದಲ್ಲಿ ಉಳಿತಾಯ | | | |
| ೮ | ಸ್ನೇಹಿತರು ಹಾಗೂ ಸಂಬಂದಿಕರಲ್ಲಿ ಉಳಿತಾಯ | | | |
| ೯ | ಇತರೆ ಮೂಲಗಳು | | | |

೨೪) ಉಳಿತಾಯದ ಉದ್ದೇಶಗಳು
ಅ. ಆಸ್ತಿ ಮಾಡಲು ಉಳಿತಾಯ ಅವಶ್ಯವಾಗಿದೆ?
ಆ. ವಸ್ತುಗಳನ್ನು ಕೊಂಡುಕೊಳ್ಳಲು ಹಾಗೂ ನೆರೆಹೊರೆ ಜನರನ್ನು ಬೇಟಿಯಾಗಲು?
ಇ. ದಿನಗಳ ಅವಶ್ಯಕತೆಗಳನ್ನು ಪೂರೈಸಿಸಲು?
ಈ. ಆಕಸ್ಮಿಕ ಕುಂದುಕೊರತೆಗಳನ್ನು ನಿವಾರಣೆ ಮಾಡಿಕೊಳ್ಳಲು.
ಉ. ಮಕ್ಕಳ ಮದುವೇ ಸಮಾರಂಭಗಳಿಗಾಗಿ ಮಿಸಲು.
ಊ. ಇತರೆ, ಕಾರಣಗಳನ್ನು ಬರೆಯುವುದು.

೨೫) ವೆಚ್ಚದ ಮೂಲಗಳು (ಮಾಸಿಕ ವೆಚ್ಚಗಳ ವಿವರ ರೂಪಾಯಿಗಳಲ್ಲಿ)

| ಅ.ನಂ | ಉಳಿತಾಯದ ಮೂಲಗಳ ವಿವರ | ಇದೆ | ಇಲ್ಲ | ಖರ್ಚು |
|---|---|---|---|---|
| ೧ | ವೈಯಕ್ತಿಕ ಉಳಿತಾಯ | | | |
| ೨ | ಬ್ಯಾಂಕುಗಳಲ್ಲಿ ಉಳಿತಾಯ | | | |
| ೩ | ಎಲ್.ಐ.ಸಿ., ಯ ಉಳಿತಾಯ | | | |
| ೪ | ಪೋಷ್ಟ ಕಛೇರಿಯಲ್ಲಿನ ಉಳಿತಾಯ | | | |
| ೫ | ಚಿಟ್ ಫಂಡ್ ನಲ್ಲಿ ಉಳಿತಾಯ | | | |
| ೬ | ಮತ್ತೆ(ರಿಕವರ್)ಬರುವಂತ ಉಳಿತಾಯ | | | |
| ೭ | ಸಹಕಾರಿ ಸಂಘದಲ್ಲಿ ಉಳಿತಾಯ | | | |
| ೮ | ಸ್ನೇಹಿತರು ಹಾಗೂ ಸಂಬಂದಿಕರಲ್ಲಿ ಉಳಿತಾಯ | | | |
| ೯ | ಇತರೆ ಮೂಲಗಳು | | | |

೨೬) ಈ ಸಂಘದಲ್ಲಿ ತಡೆರಹಿತ ಕೆಲಸಕ್ಕೆ ತೊಂದರೆಯಾಗಿದೆಯೇ? (ಹೌದು/ಇಲ್ಲ)

೨೭) ಸಂಘವು ನೀಡುವಂತ ಕೂಲಿ/ಆದಾಯ ನಿಮಗೆ ತೃಪ್ತಿ ನೀಡುವುದೆ ? (ಹೌದು/ಇಲ್ಲ)

೨೮) ನೇಕಾರ ವೃತ್ತಿಯಲ್ಲಿ ಮಹಿಳೆಯರು ಭಾಗವಹಿಸುತ್ತಾರೆಯೆ? (ಹೌದು/ಇಲ್ಲ) ಹೌದಾದರೆ, ಯಾವ ಯಾವ ಕೆಲಸಗಳನ್ನು ಈ ವೃತ್ತಿಯಲ್ಲಿ ಮಾಡುತಾರೆ?

೨೯) ನಿಮ್ಮ ಕುಟುಂಬದಲ್ಲಿ ಮಹಿಳೆಯರು ನೇಕಾರ ವೃತ್ತಿಯಲ್ಲಿ ಭಾಗವಹಿಸುತ್ತಾರೆ? (ಹೌದು/ಇಲ್ಲ)

೩೦) ಮಹಿಳೆಯರು ಸೀರೆಯನ್ನು ನೇಯುತ್ತಾರಾ? (ಹೌದು/ಇಲ್ಲ.)

೩೧) ಕಾರ್ಯಕ್ರಮಗಳ ಬಗ್ಗೆ ತಿಳುವಳಿಕೆ ಹಾಗೂ ಪಡೆದಿದ್ದರೆ?

| ಅ.ನಂ | ಕಾರ್ಯಕ್ರಮಗಳ ಹೆಸರು | ಫಲಾನುಭವಿ | ಪಡೆದಿಲ್ಲ |
|---|---|---|---|
| ೧ | ಉಳಿತಾಯ ಮತ್ತು ಭದ್ರತಾ ಯೋಜನೇಗಳು | | |
| ೨ | ನೇಕಾರ ಕುಟುಂಬ ಪಿಂಚಣಿ ಯೋಜನೆ | | |
| ೩ | ನೇಕಾರರ ವೃದ್ಯಾಪ್ಯ ಪಿಂಚಣಿ ಯೋಜನೆ | | |
| ೪ | ಬಟ್ಟೆ ಕಲ್ಯಾಣ ಯೋಜನೆ(ಉಚಿತ ವಿತರಣೆ) | | |
| ೫ | ನೇಕಾರರ ಕೆಲಸದ ಚಾವಡಿ ಮತ್ತು ಮನೆಯ ಯೋಜನೆ | | |
| ೬ | ನೇಕಾರರ ಆರೋಗ್ಯ ಕಲ್ಯಾಣ ಯೋಜನೆ (ಎಚ್.ಐ.ಎಸ್) | | |
| ೭ | ಕೈಮಗ್ಗ ಅಭಿವೃದ್ಧಿ ನಿಗಮ, ಹಾಗೂ ಉತ್ತಮ ಬಣ್ಣ ಕೇಂದ್ರ ಯೋಜನೆ | | |
| ೮ | ಬಟ್ಟೆಯ ಆಧುನೀಕರಣ ಮಳಿಗೆಗಳ ಘಟಕಗಳ ಯೋಜನೆ | | |
| ೯ | ಸ್ವರ್ಣ ಜಯಂತಿ ಸ್ವಯಂ ಉದ್ಯೋಗ ಯೋಜನೆ | | |
| ೧೦ | ಬುನಕರ ಜೀಮಾ ಯೋಜನೆ | | |
| ೧೧ | ಸಮಗ್ರ ಕೈಮಗ್ಗ ತರಬೇತಿ ಯೋಜನಾ ಕಾರ್ಯಕ್ರಮ. | | |
| ೧೨ | ಮುದ್ರಾ ಯೋಜನೆ | | |
| ೧೩ | ಮಹಾತ್ಮಗಾಂಧಿ ನೇಕಾರರ ವಿಮಾ ಯೋಜನೆ | | |
| ೧೪ | ರಾಜೀವ್ ಗಾಂಧಿ ಶಿಲ್ಪಿ ಸ್ವಾಸ್ಥ್ಯ ಬಿಮಾ ಯೋಜನೆ | | |

| | | | |
|---|---|---|---|
| ೧೫ | ನೇಕಾರರ ವಿಶೇಷ ಯೋಜನೆ | | |
| | ಅ. ಕೈಮಗ್ಗ ನೇಕಾರರ ಏಳಿಗೆ ನಿಧಿ ಯೋಜನೆ | | |
| | ಆ. ಗುಂಪು ವಿಮಾ ಯೋಜನೆ | | |
| | ಇ. ಕೈಮಗ್ಗ ಸಹಕಾರ ಸಂಘಗಳಿಗೆ ಸಹಾಯ | | |
| | ಈ. ಕೈಮಗ್ಗ ಉತ್ಪನ್ನಗಳಿಗೆ ಮಾರುಕಟ್ಟೆ ಸಹಾಯ(೨೦% ರಿಬೇಟ್) | | |
| ೧೬ | ಇತರೆ ರಾಜ್ಯ ಹಾಗೂ ಜಿಲ್ಲಾ ಘಟಕ ಯೋಜನೆಗಳು | | |
| ೧೭ | ಇತರೆ ಯೋಜನೆಗಳು | | |

೩೨) ನೇಕಾರ ಕಲ್ಯಾಣ ಕಾರ್ಯಕ್ರಮಗಳಿಂದ ತೃಪ್ತಿಯಾಗಿದೆಯೆ? (ಹೌದು/ಇಲ್ಲ)

೩೩) ನಿಮ್ಮ ಅಭಿಪ್ರಾಯದ ಪ್ರಕಾರ ಕೈಮಗ್ಗ ನೇಕಾರರು ಸರಕಾರದ ಕಲ್ಯಾಣ ಕಾರ್ಯಕ್ರಮಗಳ ಮುಖೇನ ಸಾಮಾಜಿಕ, ಆರ್ಥಿಕ ಅಭಿವೃದ್ಧಿ ಸಾಧಿಸಬಹುದೆ? (ಹೌದು/ಇಲ್ಲ)

೩೪) ಸಹಕಾರಿ ಸೌಲಭ್ಯ ಪಡೆಯಲು ವಂಚಿತರಾಗಲು ಕಾರಣ ತಿಳಿದಿದೆಯಾ? (ಹೌದು/ಇಲ್ಲ) ಹೌದಾದರೆ, ಈ ಕೆಳಗಿನ ಕಾರಣಗಳು ಯಾವವು?

೩೫) ಸಿರಗಳಿಗೆ ಬಳಸುವ ಬಣ್ಣದ ಬಗ್ಗೆ ತಿಳಿದಿದೆಯೆ? (ಹೌದು/ಇಲ್ಲ) ಹೌದಾದರೆ, ಆ ಬಣ್ಣಗಳು ಯಾವವು?

೩೬) ಸೀರೆಯ ವಿನ್ಯಾಸಗಳ ಬಗ್ಗೆ ತಿಳುವಳಿಕೆ ಇದೆಯಾ? (ಹೌದು/ಇಲ್ಲ) ಹೌದಾದರೆ, ವಿನ್ಯಾಸಗಳ ಹೆಸರುಗಳನ್ನು ತಿಳಿಸಿರಿ?

೩೭) ಸಿರೆಯ ದಡಿಗಳ ವಿನ್ಯಾಸದ ಬಗ್ಗೆ ತಿಳಿದಿದೆಯಾ? (ಹೌದು/ಇಲ್ಲ) ಹೌದಾದರೆ, ಅವುಗಳ ಹೆಸರುಗಳನ್ನು ಹೆಸರಿಸಿ?

೩೮) ಖಣಗಳ ವಿನ್ಯಾಸಗಳ ಬಗ್ಗೆ ನಿಮಗೆ ತಿಳಿದಿದೆಯಾ? (ಹೌದು/ಇಲ್ಲ) ಹೌದಾದರೆ, ವಿನ್ಯಾಸಗಳ ಹೆಸರುಗಳನ್ನು ಹೆಸರಿಸಿ?

೩೯) ನಿಮ್ಮ ಮನೆ/ಕುಲ ದೇವರ ಬಗ್ಗೆ ತಿಳಿದಿದೆಯಾ? (ಹೌದು/ಇಲ್ಲ) ಹೌದಾದರೆ, ಯಾವುದು ವಿವರಿಸಿರಿ? ಕಥೆ ಇದ್ದರೆ ತಿಳಿಸಿರಿ?

೪೦) ಕುಟುಂಬದಲ್ಲಿ ಹಬ್ಬಗಳನ್ನ ಆಚರಿಸುತ್ತಿರಾ? (ಹೌದು/ಇಲ್ಲ) ಹೌದಾದರೆ, ಯಾವ ಯಾವ ಹಬ್ಬಗಳನ್ನು ಆಚರಿಸುತ್ತಿರಿ?

೪೧) ನಿಮ್ಮ ಸಮುದಾಯಗಳ ಗುರುಗಳು ಇದ್ದಾರೆಯೆ? (ಹೌದು/ಇಲ್ಲ) ಹೌದಾದರೆ, ಯಾರು ತಿಳಿಸಿರಿ?

೪೨) ವಿವಾಹ ಸಂದರ್ಭಗಳಲ್ಲಿ ಬಂಧುಗಳಿಗೆ ಬಟ್ಟೆ ಕಾಣಿಕೆ ನಿಡುತ್ತಿರಿ? (ಹೌದು/ಇಲ್ಲ) ಹೌದಾದರೆ, ನೀವು ತಯಾರಿಸಿದ ಬಟ್ಟೆ ನೀಡುತ್ತಿರಿ? ಅವು ಯಾವವು?

೪೩) ಕುಟುಂಬದಲ್ಲಿ ಹೆಣ್ಣುಮಕ್ಕಳಿಗೆ/ಮಹಿಳೆಯರಿಗೆ ಶಿಕ್ಷಣವನ್ನು ಕಲಿಸುತ್ತಿರಾ? (ಹೌದು/ಇಲ್ಲ) ಹೌದಾದರೆ, ಯಾವ ಮಟ್ಟದವರೆಗೆ ಶಿಕ್ಷಣವನ್ನು ಕಲಿಸುತ್ತಿರಿ? ಇಲ್ಲವಾದರೆ, ಏಕೆ ಕಾರಣವನ್ನು ನೀಡಿ?

೪೪) ತಯಾರಿಸುವ ಬಟ್ಟೆಗೆ ಸಾಮಾಜಿಕ ಮನ್ನಣೆ ಇದೆಯೆ? (ಹೌದು/ಇಲ್ಲ) ಹೌದಾದರೆ, ವಿವರಿಸಿ? ಇಲ್ಲವಾದರೆ, ಕಾರಣವನ್ನು ಹೇಳಿ?

೪೫) ನೇಕಾರಿಕೆ ಉತ್ಪನ್ನದಲ್ಲಿ ವೇತನ ಹೆಚ್ಚಿಗೆ ಬೇಕಾದರೆ ಹೋರಾಟ ಮಾಡುತ್ತಿರಾ? (ಹೌದು/ಇಲ್ಲ) ಹೌದಾದರೆ, ಯಾವರೀತಿ? ಹೇಗೆ?

೪೬) ಸಮುದಾಯದಲ್ಲಿ ಕೊಡುಕೊಳ್ಳುವಿಕೆ ಸಂಪ್ರದಾಯ ಇದೆಯೇ? (ಹೌದು/ಇಲ್ಲ) ಹೌದಾದರೆ, ಯಾವರೀತಿ ಸಂಬಂಧ ವಿವರಿಸಿ?

೪೭) ನೀವು ತಯಾರಿಸುವ ಬಟ್ಟೆಯ ಮಾರಾಟದ ವ್ಯವಸ್ಥೆ ತಿಳಿದಿದೆಯಾ? (ಹೌದು/ಇಲ್ಲ) ಹೌದಾದರೆ, ವಿವರಿಸಿರಿ? •ಪರಂಪರಾಗತವಾಗಿ ಮಾರಾಟ ಮಾಡುವುದನ್ನು

೪೮) ಬಿಟ್ಟು ಬೇರೆ ಯಾರಿಗಾದರು ವ್ಯಾಪಾರದ ವ್ಯವಸ್ಥೆ ಇದೆಯಾ? •ಯಾವಕಾಲದಲ್ಲಿ ನಿಮ್ಮ ವ್ಯಾಪಾರ ಹೆಚ್ಚಿಗೆ ಪ್ರಮಾಣದಲ್ಲಿರುತ್ತದೆ?

೪೯) ಮಾಲಿಕರು ಅಥವಾ ಸಂಘದಿಂದ ನೀಡುವ ವೇತನ ವ್ಯತ್ಯಾಸ ತಿಳಿದಿದೆಯಾ? (ಹೌದು/ಇಲ್ಲ) ಹೌದಾದರೆ, ವಿವರವನ್ನು ನೀಡಿ?

೫೦) ಸಂಘದಲ್ಲಿಯ ಆಡಳಿತ ವ್ಯವಸ್ಥೆಯ ಬಗ್ಗೆ ಮಾಹಿತಿ ಇದೆಯಾ? (ಹೌದು/ಇಲ್ಲ) ಹೌದಾದರೆ, ಯಾವರಿತಿ ಇದೆ ವಿವರಿಸಿರಿ?

೫೧) ಸಂಘದಲ್ಲಿರುವ ಇತರೆ ಸೌಲಭ್ಯಗಳು ಬಗ್ಗೆ ಮಾಹಿತಿ ಇದೆಯಾ? (ಹೌದು/ಇಲ್ಲ) ಹೌದಾದರೆ, ಅವು ಯಾವವು? •ಸಹಕಾರಿ ಸಂಘಗಳ ಬಗೆಗಿನ ಒಟ್ಟು ಅಭಿಪ್ರಾಯ?

೫೨) ನೇಕಾರರ ಎಲ್ಲ ಒಳ ಪಂಗಡಗಳು ಸೇರಿಕೊಂಡು ಮಾಡುವಂತ ಆಚರಣೆಗಳು ನಿಮಗೆ ತಿಳಿದಿದೆಯೆ? (ಹೌದು/ಇಲ್ಲ) ಹೌದಾದರೆ, ಆಚರಣೆ ಯಾವವು? ಹೇಗೆ ಸಹಕಾರದಿಂದ ಆಚರಿಸುತ್ತಿರಿ?

೫೩) ಹೆಣ್ಣು ಗಂಡು ಕೊಡು ಕೊಳ್ಳುವ ಸಂಬಂಧಗಳು ಹೇಗೆ ನಡೆಯುತ್ತವೆ ನಿಮಗೆ ತಿಳಿದಿದೆಯೆ? (ಹೌದು/ಇಲ್ಲ) ಹೌದಾದರೆ, ಯಾವ ಆಧಾರದ ಮೇಲೆ ನಡೆಯುತ್ತವೆ? ಹೇಗೆ?

೫೪) ಮುಂದಿನ ದಿನಗಳಲ್ಲಿ ಕೈಮಗ್ಗ ಉತ್ಪನ್ನಗಳ ಬೇಡಿಕೆ ಹೆಚ್ಚಿಸಲೂ ನಿಮ್ಮ ಸಲಹೆಯನ್ನು ನೀಡಿ?

೫೫) ನೇಕಾರ ಬದುಕಿನ ಸ್ಥಿತ್ಯಂತರದ ಬಗ್ಗೆ ನಿಮಗೆ ಅರಿವಿದೆಯೇ? (ಹೌದು/ಇಲ್ಲ) ಹೌದಾದರೆ, ವಿವರಣೆ ನೀಡಿ?
•ನೇಕಾರರ ಬಗೆಗೆ ಯುವ ಪೀಳಿಗೆಯ ಅಭಿಪ್ರಾಯ? •ವಿದ್ಯುತ್ ಚಾಲಿತ ಮಗ್ಗಗಳ ಬೇಕಾರಿಕೆಯಲ್ಲಿ ವಿದ್ಯುತ್ ಅಭಾವವನ್ನು ಹೇಗೆ ನಿಭಾಯಿಸುವಿರಿ? •ಹಿಂದಿನ ಹಾಗೂ ಈಗಿನ ಮಾರಾಟದ ವ್ಯವಸ್ಥೆ ಹೇಗಿದೆ?
•ನೇರವಾಗಿ ಅಂಗಡಿಗಳಿಗೆ ಮಾರಾಟ ಮಾಡುತ್ತಿರಾ ಅಥವಾ ಏಜೆಂಟರ ಮೂಲಕ ಮಾರಾಟದ ಸಾಧಕ ಬಾಧಕಗಳ ಬಗ್ಗೆ ತಿಳಿಸಿ?
•ಕಡಿಮೆ ಬಡ್ಡಿಯ ಮೂಲಕ ಸಾಲ ನೀಡುವ ಯೋಜನೆಗಳ ಬಗೆಗೆ ನಿಮ್ಮ ಅಭಿಪ್ರಾಯ?
•ನಿಮ್ಮ ಕುಟುಂಬದಲ್ಲಿ ನೇಕಾರಿಕೆ ಬಿಟ್ಟು ಸರಕಾರಿ, ಅರೆಸರಕಾರಿ ಹಾಗೂ ಖಾಸಗಿ ನೌಕರಿಯನ್ನು ಮಾಡುತ್ತಾರೆಯೇ? ವಿವರಿಸಿ
•ಸಮುದಾಯಗಳ ಒಗ್ಗಟ್ಟು ಹೇಗೆ ಇರುವುದು? ಆತಂತ್ರ ಸ್ಥಿತಿಯಲ್ಲಿ ಯಾವರೀತಿ ಸಹಾಯ ಮಾಡುತ್ತಾರೆ?
•ಇತರೇ ನೇಕಾರ ಸಮುದಾಯಗಳೊಂದಿಗಿನ ಭಾಂದವ್ಯ ಹೇಗೆ ಇದೆ?
•ಇಂದಿಗೂ ಇಳಕಲ್ಲ ಸೀರೆಗೆ ಹೆಣ್ಣುಮಕ್ಕಳು ಅಚ್ಚುಮೆಚ್ಚಿನ ಸೀರೆಯಾಗಿವೆ ಏಕೆ? ವಿವರಿಸಿ?

೫೬) ಸಾಲದ ಮೂಲಗಳು (ವಾರ್ಷಿಕ ಪಾವತಿ ಮಾಡುವುದು)

| ಅ.ನಂ | ಮೂಲಗಳ ವಿವರ | ಒಟ್ಟು ಸಾಲದ ಹಣ | ಬಡ್ಡಿ | ಒಟ್ಟು ಕಟ್ಟಿದ ಹಣ | ಒಟ್ಟು ಕಟ್ಟದ ಹಣ |
|---|---|---|---|---|---|
| ೧ | ಬ್ಯಾಂಕುಗಳಿಂದ ಸಾಲ | | | | |
| ೨ | ಸಹಕಾರಿ ಸಂಘಗಳಿಂದ ಸಾಲ | | | | |
| ೩ | ಹಣ-ಸಾಲ ಕೊಡುವವರ ಮೂಲಕ ಸಾಲ | | | | |
| ೪ | ಸಂಬಂಧಿಕರಲ್ಲಿಯ ಸಾಲ | | | | |
| ೫ | ಅಡವಿಟ್ಟ ಸಾಲಗಳು | | | | |
| ೬ | ಪಿತ್ರಾರ್ಜಿತ ಸಾಲ | | | | |
| ೭ | ಆಭರಣಗಳ ಸಾಲ | | | | |
| ೮ | ಎಲ್.ಐ.ಸಿ. ಸಾಲ | | | | |
| ೯ | ಮುಂಗಡ ಸಾಲ | | | | |
| ೧೦ | ಕೈಗಡ ಸಾಲ | | | | |
| ೧೧ | ಇತರೆ ಸಾಲಗಳು | | | | |

೫೭) ಸಾಲಗಳ ಉದ್ದೇಶಗಳು

| ಅ.ನಂ | ಉದ್ದೇಶಗಳ ವಿವರ | ಸಂಸ್ಥೆಯಲ್ಲಿ ಹೆಚ್ಚಳವಾದ ಸಾಲ | ಒಟ್ಟು ಮೊತ್ತ |
|---|---|---|---|
| ೧ | ಮನೆಯ ಸಾಲ | | |
| ೨ | ಮಗ್ಗಗಳ ಆಧುನಿಕರಣದ ಸಾಲ | | |
| ೩ | ಕಚ್ಚಾ ವಸ್ತುಗಳ ಕರಿದಿ ಸಾಲ | | |
| ೪ | ಮದುವೆ ಸಮಾರಂಭಗಳ ಸಾಲ | | |
| | | | |

೫೮) ನೇಕಾರ ವೃತ್ತಿಗೆ ಸಂಬಂಧಿಸಿದ್ದು
ಈ ಸಂಘದಲ್ಲಿ ತಡೆರಹಿತ ಕೆಲಸಕ್ಕೆ ತೊಂದರೆಯಾಗಿದೆಯೇ? (ಹೌದು/ ಇಲ್ಲ) ಹೌದು ಎಂದರೆ ಅದಕ್ಕೆ ಸರಿಯಾದ ಕಾರಣ ಕೊಡಿ?

೫೯) ವಾರ್ಷಿಕವಾಗಿ ಎಷ್ಟು ದಿನಗಳ ಕಾಲ ನಿಮ್ಮ ಕೆಲಸವನ್ನು ಮಾಡುತ್ತಿರಿ?
•ದಿನಕ್ಕೆ ಎಷ್ಟು ಗಂಟೆಗಳ ಕಾಲ ನಿಮ್ಮ ಕೆಲಸ ಮಾಡುತ್ತಿರಿ?

| ಒಟ್ಟು ಕೆಲಸದ ದಿನಗಳು | ಒಟ್ಟು ಸಂಪನ್ಮೂಲ ಸದಸ್ಯರು |
|---|---|
| ಕಡಿಮೆ ಎಂದರೂ ೧೦೦ ದಿನಗಳು | |
| ೧೫೦ ದಿನಗಳಿಂದ ೨೦೦ ದಿನಗಳು | |
| ೨೦೦ ದಿನಗಳಿಂದ ೨೫೦ ದಿನಗಳು | |
| ೨೫೦ ದಿನಗಳಿಂದ ೩೦೦ ದಿನಗಳು | |
| ೩೦೦ ದಿನಗಳಿಂದ ೩೫೦ ದಿನಗಳು | |
| ೩೫೦ ದಿನಗಳಿಗಿಂತ ಹೆಚ್ಚು | |

